# ಬುದ್ಧ



" ಕಲ್ಯಾಣೋ ಧಮ್ಮೋ "



ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ.

ನಮಶ್ಶಾಕ್ಯಾಯ ಮುನಯೇ ತಥಾಗತಾಯ, ಅರ್ಹತೇ
ಸಮ್ಯಕ್ಸಂಬುದ್ಧಾಯ

—÷—

ಮೋಹಾಂಧಕಾರ ಜಿದ್ಭಾಸ್ವಾನಿಂದುಃ
ಕ್ಲೇಶಾಧಿ ತಾಪಹೃತ್ ।
ನಮಸ್ತೇಽಸ್ತು ನಮಸ್ತೇಽಸ್ತು
ನಮಸ್ತೇಽಸ್ತು ತಥಾಗತ ॥

—ಬುದ್ಧಚರಿತ.

ಸ ವೈದ್ಯರಾಜೋಽಮೃತ ಭೈಷಜಪ್ರದಃ
ಸ ವಾದಿಶೂರಃ ಕುಗಣಿಪ್ರತಾಪಕಃ ।
ಧರ್ಮಬನ್ಧುಃ ಪರಮಾರ್ಥ ಕೋವಿದಃ
ಸ ನಾಯಕೋಽನುತ್ತರ ಮಾರ್ಗದೇಶಿಕಃ ॥

—ಲಲಿತವಿಸ್ತರ.

# ಮುನ್ನುಡಿ

ಗೌತಮ ಬುದ್ಧನು ಜಗದ್ವಂದ್ಯರಾದ ಮಹಾಪುರುಷರಲ್ಲೊಬ್ಬನು. ಜಗತ್ತಿನ ಜನಸಂಖ್ಯೆಯಲ್ಲಿ ಸುಮಾರು ನಾಲ್ಕರಲ್ಲೊಂದು ಭಾಗವು ಬೌದ್ಧರದು. ತಪಸ್ವಿನಿಯಾದ ಭಾರತಮಾತೆಯ ವರಪುತ್ರರಾದ ಮಹಾನುಭಾವರಲ್ಲಿ ಗೌತಮ ಬುದ್ಧನೂ ಒಬ್ಬನೆಂಬುದು ಭಾರತೀಯರೆಲ್ಲರಿಗೂ ಎಂದೆಂದಿಗೂ ಹೆಮ್ಮೆಯ ಸಂಗತಿ. ಈ ಚಿಕ್ಕ ಪುಸ್ತಕವು ನಾನು ಆತನಿಗೆ ಸಮರ್ಪಿಸಿರುವ ಪುಷ್ಪಾಂಜಲಿ.

ಪಾಶ್ಚಾತ್ಯರಲ್ಲಿಯೂ ಪೌರಸ್ತ್ಯರಲ್ಲಿಯೂ ಹಿಂದಿನವರೂ ಇಂದಿನವರೂ ಅನೇಕರು ಗೌತಮ ಬುದ್ಧನ ವಿಚಾರವಾಗಿ ಗ್ರಂಥಗಳನ್ನು ಬರೆದಿದ್ದಾರೆ. ಪಾಶ್ಚಾತ್ಯ ಲೇಖಕರು ಗೌತಮ ಬುದ್ಧನಲ್ಲಿ ತೋರಿಸಿರುವ ಪ್ರೀತ್ಯಾದರಗಳಿಗಾಗಿ ಅವರಿಗೆ ನಮ್ಮ ಕೃತಜ್ಞತೆಯು ಸಲ್ಲಬೇಕಾಗಿದೆ. ಆದಾಗ್ಯೂ ಅವರಲ್ಲಿ ಮುಕ್ಕಾಲು ಮೂರುವೀಸ ಪಾಲಿನವರು ಬೌದ್ಧಮತ ವಿಚಾರದಲ್ಲಿ ಹಲವು ಸಂದರ್ಭಗಳಲ್ಲಿ ಸರಿಯಾದ ಅಭಿಪ್ರಾಯಗಳನ್ನು ಸೂಚಿಸಿಲ್ಲವೆಂಬುದನ್ನೂ ವಿಷಾದದಿಂದ ಹೇಳಬೇಕಾಗಿದೆ. ಇದರ ಕಾರಣಗಳನ್ನು ಇಲ್ಲಿ ತಿಳಿಸಬೇಕಾದುದು ಅಪ್ರಕೃತವೇ ಸರಿ.

ಬುದ್ಧನು ಬೋಧಿಸಿದ ಗಹನ ತತ್ತ್ವಗಳ ವಿಷಯದಲ್ಲಿ ಅವರು ತಪ್ಪುಭಾವನೆಗಳನ್ನಿಟ್ಟುಕೊಂಡಿರುವುದು ಹಾಗಿರಲಿ. ಹಂದಿಯ ಮಾಂಸವನ್ನು ತಿಂದು ಅದರ ದೆಸೆಯಿಂದ ಸಂಭವಿಸಿದ ರೋಗದಿಂದ ಬುದ್ಧನು ಮೃತಪಟ್ಟನೆಂದು ಕೂಡ ಅವರಲ್ಲನೇಕರು ಬರೆದಿದ್ದಾರೆ. ಬುದ್ಧನು ಸೂಕರಮಾರ್ದವದ ಅಡಿಗೆಯನ್ನುಂಡು ವ್ಯಾಧಿಗ್ರಸ್ತನಾದನೆಂದು ಬೌದ್ಧಗ್ರಂಥಗಳಲ್ಲಿ ಹೇಳಿದೆ. ಅದೊಂದು ಅಣಬೆ. ಅದರಲ್ಲಿ ವಿಷದ ಜಾತಿಯೂ ಒಂದುಂಟು. ಪ್ರಮಾದವಶದಿಂದ ಆ ಅಣಬೆಯ

ವಿಷದ ಜಾತಿಯು ಅಡಿಗೆಗೆ ಸೇರಿದ್ದಿತು. ಆದಕಾರಣವೇ ಬುದ್ಧನು ತನ್ನ ಜೊತೆಯಲ್ಲಿದ್ದವರಾರೂ ಅದನ್ನು ತಿನ್ನಕೂಡದೆಂದು ಹೇಳಿದನು. ಸೂಕರ ಮಾರ್ದವವೆಂಬ ಪದಕ್ಕೆ ಅಣಬೆಯೆಂದು ಅರ್ಥಮಾಡಿ ಕೊಳ್ಳದೆ, ಹಲವು ಲೇಖಕರು ಅದಕ್ಕೆ ಅವಯವಾರ್ಥಮಾಡಿ ಹಂದಿಯ ದೇಹದ ಮೃದುವಾದ ಭಾಗದ ಮಾಂಸವೆಂದು ಅರ್ಥವನ್ನು ಕಲ್ಪಿಸಿ ದ್ದಾರೆ. ಪರಮಹಂಸ, ಬ್ರಹ್ಮಬಂಧು, ಅಗಸ್ತ್ಯಭ್ರಾತ, ಮುಂತಾದವು ಗಳಂತೆಯೇ ಸೂಕರಮಾರ್ದವ ಎಂಬುದಕ್ಕೂ ಅವಯವಾರ್ಥಮಾಡಿ ಅರ್ಥಹೇಳುವುದು ಆಭಾಸಪ್ರಕರಣವೇ ಸರಿ. ಸುಪ್ರಸಿದ್ಧರಾದ ಕೆಲವರು ಪೌರಸ್ತ್ಯ ಲೇಖಕರೂ ಕೂಡ ಬುದ್ಧನು ಹಂದಿಯ ಮಾಂಸವನ್ನು ತಿಂದನೆಂದೇ ಸೂಚಿಸಿ, ಆತನು ಮಾಂಸ ಭಕ್ಷಣವನ್ನು ನಿಷೇಧಿಸಿರಲಿಲ್ಲ ವೆಂಬ ಕಾರಣವನ್ನೂ ತಿಳಿಸಿರುವುದಕ್ಕಾಗಿ ಆಶ್ಚರ್ಯ ವಿಷಾದಗಳೆರಡೂ ಆಗುತ್ತವೆ. ಮಾಂಸವನ್ನು ಮಾರುವವರೂ, ಕಟುಕರೂ, ಬೌದ್ಧ ಮತದ ಸಾಧನೆಗಳಿಗೆ ಅನರ್ಹರೆಂದು ಬೋಧಿಸಿದ ಬುದ್ಧಗುರುವು ಮಾಂಸಭಕ್ಷಣವನ್ನು ನಿಷೇಧಿಸಲಿಲ್ಲವೆನ್ನುವುದು ವಿಲಕ್ಷಣವಾದ ಅಭಿ ಪ್ರಾಯ. ದೇವದತ್ತ ಸುತ್ತ, ಜೀವಕ ಸುತ್ತನ್ತ, ಮುಂತಾದವು ಗಳಲ್ಲಿ ಮಾಂಸಭಕ್ಷಣ ವಿಚಾರವಾಗಿ ಬುದ್ಧನು ತಿಳಿಸಿರುವ ಅಂಶಗಳು ನಿಸ್ಸಂದೇಹವಾಗಿವೆ. "ದೃಷ್ಟ, ಶ್ರುತ, ಪರಿಶಂಕಿತ" ಈ ಮೂರು ಪ್ರಕಾರಗಳ ಮಾಂಸಭಕ್ಷಣವು ನಿಷಿದ್ಧವೆಂದೂ, "ಅದೃಷ್ಟ, ಅಶ್ರುತ, ಅಪರಿಶಂಕಿತ" ಈ ಮೂರು ಪ್ರಕಾರಗಳ ಮಾಂಸಭಕ್ಷಣವು ದೋಷ ವಲ್ಲವೆಂದೂ ಬುದ್ಧನು ಸ್ಪಷ್ಟವಾಗಿ ಹೇಳಿದ್ದಾನೆ.

ಗೌತಮ ಬುದ್ಧನ ಜೀವನ ಚರಿತ್ರೆಯ ವಿಷಯದಲ್ಲಿಯೂ, ಬೌದ್ಧಮತದ ವಿಷಯದಲ್ಲಿಯೂ, ನಾನು ವ್ಯಾಸಂಗಮಾಡಿ ಪ್ರಯೋಜನ ಪಡೆದ ಗ್ರಂಥಗಳಲ್ಲಿ ಮುಖ್ಯವಾದವುಗಳ ಪಟ್ಟಿಯನ್ನು ಮುಂದೆ ಕೊಟ್ಟಿದ್ದೇನೆ. ಆ ಗ್ರಂಥಕರ್ತರೆಲ್ಲರಿಗೂ ನಾನು ಕೃತಜ್ಞ ನಾಗಿದ್ದೇನೆ. ಅವರ ಗ್ರಂಥಗಳನ್ನೆಲ್ಲ ವ್ಯಾಸಂಗಮಾಡಿ ಯಥಾಶಕ್ತಿ ಯಾಗಿ ಈ ಪುಸ್ತಕವನ್ನು ಬರೆದಿದ್ದೇನೆ. ಕೇವಲ ಸ್ಥೂಲರೀತಿಯಲ್ಲಿ

ಇದನ್ನು ಬರೆದಿದ್ದೇನೆ. ಬಹು ಸಂಕ್ಷೇಪವಾಗಿ ಬರೆದಿರುವುದರಿಂದ, ಅನೇಕ ಅಂಶಗಳು ಬಿಟ್ಟುಹೋಗಿವೆ. ಬೌದ್ಧಮತವು ಹಬ್ಬಿದ ಬಗೆಯನ್ನೂ, ಭರತಖಂಡದಲ್ಲಿ ಅದು ಕ್ಷೀಣದಶೆಗೆ ಬಂದುದರ ಕಾರಣಗಳೇ ಮುಂತಾದ ವಿಷಯಗಳನ್ನೂ, ಉಳಿದ ದೇಶಗಳಲ್ಲಿ ಅದಕ್ಕಿರುವ ಸ್ಥಾನವನ್ನೂ, ಸಂಸ್ಕೃತಿಯ ದೃಷ್ಟಿಯಿಂದ ಭಾರತೀಯರಿಗೆ ಬೌದ್ಧಮತದಿಂದ ಉಂಟಾದ ಪ್ರಯೋಜನಗಳನ್ನೂ, ಈ ಗ್ರಂಥವಲ್ಲಿ ಪ್ರಸ್ತಾವಿಸಿಲ್ಲ; ಜಾತಕ ಕಥೆಗಳ ವಿಷಯವನ್ನೂ ಇದರಲ್ಲಿ ಹೆಚ್ಚಾಗಿ ವಿಮರ್ಶಿಸಿಲ್ಲ. ಬೌದ್ಧಮತ ಪ್ರಚಾರ ಮುಂತಾದವುಗಳ ಸಂಬಂಧವಾಗಿ " **ಅಶೋಕ ಚಕ್ರವರ್ತಿ** " ಮೊದಲಾದ ಕೆಲವು ಗ್ರಂಥಗಳನ್ನು ಬರೆಯಬೇಕೆಂದಿದ್ದೇನೆ.

ಮುಖಚಿತ್ರವಾಗಿ ಕೊಟ್ಟಿರುವ ಬುದ್ಧ ವಿಗ್ರಹದ ಚಿತ್ರವು ಕಲ್ಕತ್ತದ ಸ್ಟೇಟ್ಸ್‌ಮನ್ ಪತ್ರಿಕೆಯಲ್ಲಿ ಪ್ರಕಟವಾಗಿದ್ದುದು. ಅದು ಸೈನ್ಯದ ಇಲಾಖೆಯವರಲ್ಲಿರುವ ಬುದ್ಧನ ಪ್ರತಿಮೆಯ ಭಾವಚಿತ್ರ. ಅದನ್ನು ಉಪಯೋಗಿಸಿ ಪಡಿಯಚ್ಚನ್ನು ಮಾಡಿಸಬಹುದೆಂದು ನನಗೆ ಅನುಮತಿಯನ್ನು ಕೊಟ್ಟ ಉಪಕಾರಕ್ಕಾಗಿ, ಆ ಪತ್ರಿಕೆಯ ಅಧಿಕಾರಿಗಳನ್ನು ವಂದಿಸಬೇಕಾದುದೂ ನನ್ನ ಕರ್ತವ್ಯವಾಗಿದೆ.

ಕನ್ನಡಿಗರಾದ ನನ್ನ ದೇಶಬಾಂಧವರಿಗೆ ಈ ಗ್ರಂಥದಿಂದ ಅಲ್ಪಸ್ವಲ್ಪ ಸಂತೋಷವುಂಟಾದರೂ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುವೆನು. ಮತಸ್ಥಾಪಕರಾದ **ಯೇಸುಕ್ರಿಸ್ತ** ಮುಂತಾದ ಇತರ ಮಹಾಪುರುಷರ ಜೀವನ ಚರಿತ್ರೆಗಳನ್ನು ಆದಷ್ಟು ಶೀಘ್ರವಾಗಿ ಪ್ರಕಟಿಸಿ, ಜಗತ್ತಿನ ಮತಸ್ಥಾಪಕರಲ್ಲಿ ಮುಖ್ಯರಾದವರ ಜೀವನ ಚರಿತ್ರೆಗಳ ಗ್ರಂಥಮಾಲೆಯನ್ನು ಪೂರ್ತಿಗೊಳಿಸಬೇಕೆಂದಿರುವೆನು.

ಬೆಂಗಳೂರು
೧೦-೩-೧೯೩೪

**ಸಿ. ಕೆ. ವೆಂಕಟರಾಮಯ್ಯ.**

## ಎರಡನೆಯ ಮುದ್ರಣ

ಮೈಸೂರು ವಿಶ್ವವಿದ್ಯಾನಿಲಯದವರು ಈ ಗ್ರಂಥವನ್ನು "ಇಂಟರ್ಮೀಡಿಯೆಟ್" ತರಗತಿಗಳಿಗೆ ಪಠ್ಯಪುಸ್ತಕವಾಗಿ ನೇಮಕ ಮಾಡಿದ ಕಾರಣ ಈ ಗ್ರಂಥವನ್ನು ಎರಡನೆಯಸಾರಿ ಅಚ್ಚುಮಾಡಿ ಸುವ ಅವಕಾಶವುಂಟಾಯಿತು. ವಿಶ್ವವಿದ್ಯಾನಿಲಯದವರ ಉಪಕಾರ ಕ್ಕಾಗಿ ಕೃತಜ್ಞತೆಯಿಂದ ವಂದನೆಗಳನ್ನು ಸಮರ್ಪಿಸುವೆನು.

ಬೆಂಗಳೂರು
೧೫-೪-೧೯೪೦

ಸಿ. ಕೆ. ವೆಂಕಟರಾಮಯ್ಯ.

## ಮೂರನೆಯ ಮುದ್ರಣ

ಕನ್ನಡ ಬಾಂಧವರಲ್ಲಿ ಅನೇಕರು ಈ ಪುಸ್ತಕವನ್ನು ಓದಲು ಬಯಸಿದ ಕಾರಣ, ಇದನ್ನು ಮೂರನೆಯ ಸಾರಿ ಮುದ್ರಣಮಾಡಿಸಲು ಪ್ರಯತ್ನಿಸುತ್ತಿದ್ದೆ. ಅಷ್ಟರಲ್ಲಿ ಮದ್ರಾಸು ವಿಶ್ವವಿದ್ಯಾನಿಲಯದ ಇಂಟರ್ಮೀಡಿಯೆಟ್ ಪರೀಕ್ಷೆಗೆ ಇದನ್ನು ಪಠ್ಯಪುಸ್ತಕವಾಗಿ ಗೊತ್ತು ಮಾಡಿದ ಸಂಗತಿಯು ತಿಳಿದುದರಿಂದ ಅದಕ್ಕೆ ಅನುಕೂಲವಾಯಿತು. ಈ ಉಪಕಾರಕ್ಕಾಗಿ ಮದ್ರಾಸು ವಿಶ್ವವಿದ್ಯಾನಿಲಯದ ಅಧಿಕಾರಿ ಗಳಿಗೂ, ಕನ್ನಡ ಬೋರ್ಡಿನ ಅಧ್ಯಕ್ಷರು ಮತ್ತು ಸದಸ್ಯರುಗಳಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ ಪುಸ್ತಕದ ಎರಡನೆಯ ಮುದ್ರಣವಾದಾಗಿನಿಂದೀಚೆಗೆ ಗೌತಮ ಬುದ್ಧನ ವಿಚಾರವಾಗಿ ಭಾರತರತ್ನ ಸರ್ ಎಸ್. ರಾಧಾಕೃಷ್ಣನ್ ಅವರೇ ಮುಂತಾದ ಮಹನೀಯರು ಬರೆದಿರುವ ಗ್ರಂಥಗಳನ್ನೂ ವ್ಯಾಸಂಗಮಾಡಿ ಅವು ಗಳಿಂದಲೂ ವಿಷಯ ಸಂಗ್ರಹಮಾಡಿದ್ದೇನೆ.

ಬೆಂಗಳೂರು
೧೫-೨-೧೯೫೫

ಸಿ. ಕೆ. ವೆಂಕಟರಾಮಯ್ಯ.

## ಈ ಪುಸ್ತಕವನ್ನು ಬರೆಯುವುದಕ್ಕಾಗಿ ಓದಿ ಉಪಯೋಗ ಹೊಂದಿರುವ ಗ್ರಂಥಗಳಲ್ಲಿ ಮುಖ್ಯವಾದವುಗಳ ಪಟ್ಟಿ


ಅಶ್ವಘೋಷನ ಬುದ್ಧಚರಿತ
ಪದ್ಯಚೂಡಾಮಣಿ
ಲಲಿತವಿಸ್ತರ
ಕರುಣಪುಂಡರೀಕ
ಧರ್ಮಪದ (ಧಮ್ಮಪದ)
ಮಧ್ಯಮನಿಕಾಯ (ಮಜ್ಝಿಮ ನಿಕಾಯ)
ಧರ್ಮಚಕ್ರ ಪ್ರವರ್ತನ ಸೂತ್ರ
ಮಹಾಪರಿನಿರ್ವಾಣ ಸೂತ್ರ ಮುಂತಾದವುಗಳು.
ವಾಲ್ಮೀಕಿ ರಾಮಾಯಣ (ಅಯೋಧ್ಯಾಕಾಂಡ)
ಸರ್ವದರ್ಶನ ಸಂಗ್ರಹ
ಬೃಹದಾರಣ್ಯಕ ಮುಂತಾದ ಕೆಲವು ಉಪನಿಷತ್ತುಗಳು

W. T. Rhys Davids : *Buddhism.*

Dr. H. Oldenburg : *Buddha, His Life, His Doctrines and Order,* (Translated from German)

E. A. Thomas, M.A., : *Buddhist Scriptures.*

Dr. Radhakumud Mookerji, M.A., Ph.D. : *Men and Thought in Ancient India.*

Subhadra Bhikku ; *The Message of Buddhism* (Edited by J. E. Ellam)

Edith Holland : *The Story of The Buddha.*

Paul Dahlke : *Buddhist Essays.* (Translated from German by Bikku Silachara.)

W. T. Rhys Davids : *Buddhist India.*

Sir S. Radhakrishnan : *Gautama The Buddha.*

Dr. Ananda Coomaraswamy, D.Sc. : *Buddha and the Gospel of Buddhism.*

Sir S. Radhakrishnan, M.A., : *Indian Philosophy.*

Prof. M. Hiriyanna, M.A., : *Outlines of Indian Philosophy.*

Dr. Rabindranath Tagore : *Religion of Man.*

Sir S. Radhakrishnan, M.A., : *Kalki.*

Mr. John Drinkwater : *Outline of Literature.*

Kenneth J. Saunders : *Gautama Buddha.*

H. Hackmann : *Buddhism as a Religion.*

Mrs. Rhys Davids : *Buddhism.*

Edmond Holmes : *The Creed of Buddha.*

Dr. T. H. Stecherbatsky, Ph.D. : *The Central Conception of Buddhism and the Meaning of The Word "Dhamma"*

Mr. C. Jinaraja Dasa, M.A., (Cantab) : *The Reign of Law.*

Dr. Beni Madhab Barua, M A., (Cal.) D.Litt (Lond) *A history of Pre-Buddhistic Indian Philosophy.*

F. Max Muller : *Sacred Books of the East* (Volumes XXI and XLIX)

Sir Charles Eliot : *Hinduism and Buddhism.*

Prof P. Lakshmi Narasu : *The Essence of Buddhism.*

Prof. R. Kimura : *Original and Developed Doctrines of Indian Buddhism.*

Prof. T. L. Vaswani : *Bodhi Dharma.*

Dr. Annie Besant : *Four Great Religions.*

Herbert Baynes : *The way of The Buddha.*

Sir Monier Williams : *Buddhism*

Bloomfield : *The Religion of The Veda.*

Dr. Will Durant, Ph.D., *The Story of Philosophy.*

Edwin Arnold : *The Light af Asia.*

J. E. Ellam : *Navayana Buddhism and Modern Thought.*

Mr. John Macy : *The Story of the World's Literature.*

Mr. H. G. Wells : *The Outlines of History.*

Sir S. Radhakrishnan, M.A., *East and West in Religion.*

A. P. Sinnet : *Esoteric Buddhism.*

Mr. Yamakami Sogen : *Systems of Buddhistic Thought.*

Paul Carus : *The Gospel of Buddha.*

Robert Chalmer B.A., *The jataka.*

W. D. C. Wagiswara and K. J. Saunders : *The Buddha's way of Virtue.*

W. Woodville Rockchill : *The life of the Buddha.*

Sir S. Radhakrishnan, M.A., : *An Idealist view of Life.*

Mr. Binala Charan Law, M.A., B.L. : *The Life and work of Buddha Ghosha.*

Dr. Annie Besant and C. W. Leadbeater : *The Noble Eightfold Path.*

Mrs. Rhys Davids D. Litt ; M.A., : *Outlines of Buddhism.*

Sir S. Radhakrishnan : *The Heart of Hindusthan.*

Mrs. Rhys Davids D. Litt ; M.A., *Buddhism—Its Birth and Disposal.*

# ವಿಷಯಾನುಕ್ರಮಣಿಕೆ


ಭರತಖಂಡದಭಾಗ
ಗೌತಮ ಬುದ್ಧನ ಕಾಲದ
ಕೆಲವು ರಾಜ್ಯಗಳು.
70
80
90
30
40
ಕಾಂಭೋಜ.
ಗಾಂಧಾರ.
ಮತ್ಸ್ಯ.
ಕೋಲಿಯರು
ಮಲ್ಲರು.
ಕಾಮರೂಪ.
ಚೇದಿರಾಜ್ಯ
ಮಗಧರಾಜ್ಯ.
ಅವಂತಿ
ಸೌರಾಷ್ಟ್ರ
ಆಂಧ್ರರು.

# ಬುದ್ಧ

## ಮೊದಲನೆಯ ಅಧ್ಯಾಯ

---

### ಅವತರಣಿಕೆ

ಜೀವನದ ನಿಜಸ್ವಭಾವವೇನೆಂಬುದು ಈ ಜಗತ್ತಿನಲ್ಲಿ ಅತಿ ಪ್ರಾಚೀನಕಾಲದಿಂದಲೂ ಅಭೇದ್ಯವಾದ ಗಭೀರ ಸಮಸ್ಯೆಯಾಗಿ ಪರಿಣಮಿಸಿದೆ. ಅನೇಕ ಮಹಾಪುರುಷರು ತಮ್ಮ ದೇಶಕಾಲಗಳಿಗನು ಗುಣವಾಗಿ ದೀರ್ಘಾಲೋಚನೆ ಮಾಡಿ ತಮ್ಮ ತಮ್ಮ ಪ್ರತಿಭಾ ಸಂಪತ್ತಿಗನುಸಾರವಾಗಿ ಆ ಸಮಸ್ಯೆಯನ್ನು ಭೇದಿಸುವ ಪ್ರಯತ್ನ ಮಾಡಿ ಯಥಾಶಕ್ತಿಯಾಗಿ ಕೃತಕಾರ್ಯರಾಗಿದ್ದಾರೆ. ಸೃಷ್ಟಿ ವೈಚಿತ್ರ್ಯವೂ, ಜೀವನದ ನಿಜಸ್ವಭಾವವು ಗೋಚರವಾಗದಂತೆ ಅದನ್ನಾವರಿಸಿರುವ ತೆರೆಯೂ, ಅವರಲ್ಲಿ ಪ್ರತಿಯೊಬ್ಬರ ಸಮಾಲೋಚನೆಗೂ ಒಂದಲ್ಲದಿದ್ದರೆ ಮತ್ತೊಂದು ರೀತಿಯಲ್ಲಿ ತಮ್ಮ ಪ್ರಭಾವವನ್ನು ತೋರಿಸಿಯೇ ಇವೆ. "ನಾನು ಎಂಬುದೇನು? ನಾನಾರು? ನಾನು ಬಂದುದೆಲ್ಲಿಂದ? ನಾನು ಹೋಗುವುದೆಲ್ಲಿಗೆ? ಐಹಿಕ ಜೀವನದಲ್ಲಿ ಧನ್ಯತೆ ಹೊಂದುವ ಮಾರ್ಗವಾವುದು?" ಎಂಬ ಪ್ರಶ್ನೆಗಳು ಅವರ ಹೃದಯಕುಹರದಲ್ಲಿ ಪ್ರತಿಧ್ವನಿತವಾಗಿ, ಅವರಲ್ಲಿ ಪ್ರತಿಯೊಬ್ಬರೂ ತನಗೆ ಯುಕ್ತತೋರಿದಂತೆ ಜನರಿಗೆ ಸನ್ಮಾರ್ಗವನ್ನು ಸೂಚಿಸಿ ಮಹೋಪಕಾರ ಮಾಡಿದ್ದಾರೆ. ಮಹನೀಯರಾದ ಆ ಸತ್ಪುರುಷರೇ ಜಗತ್ತಿನಲ್ಲಿ ದೇದೀಪ್ಯಮಾನವಾಗಿ ಬೆಳಗುತ್ತಿರುವ ದಿವ್ಯಜ್ಯೋತಿಗಳು. ಅವರ ಅಮೃತವಾಣಿಗಳೇ ಸಂಸಾರ ಸಮುದ್ರ ಮಧ್ಯದಲ್ಲಿ ಯಾರೊಬ್ಬರೂ ದಿಕ್ಕುಗೆಡದಂತೆ ಬೆಳಕನ್ನು ಬೀರುತ್ತಿರುವ ಶುಭತಾರೆಗಳು. ಮಹಾನುಭಾವರಾದ ಆ ಪುಣ್ಯಪುರುಷರೇ ಶಾಶ್ವತ ಯಶಃಕಾಯರಾಗಿ

ರಾರಾಜಿಸುತ್ತಿರುವ ಲೋಕೋದ್ಧಾರಕರು. ಅಂತಹ ಲೋಕೋದ್ಧಾರಕರಲ್ಲಿ ಪ್ರಥಮ ಪಙ್ಕ್ತಿಗೆ ಸೇರಿದವರಲ್ಲಿ ಗೌತಮ ಬುದ್ಧನೂ ಒಬ್ಬನು. ಆತನು ಈಗ್ಗೆ ಇಪ್ಪತ್ತೈದು ಶತಮಾನಗಳ ಹಿಂದೆ ಅವತರಿಸಿ ಬೌದ್ಧಮತವನ್ನು ಸ್ಥಾಪಿಸಿ, ಸಾಮಾನ್ಯರಿಗೂ ತಿಳಿಯುವಂತೆ ಪಾಳಿ ಭಾಷೆಯಲ್ಲಿ ಜನರಿಗೆ ಧರ್ಮೋಪದೇಶ ಮಾಡಿದನು. ಇಂದು ಜಗತ್ತಿನ ಜನಸಂಖ್ಯೆಯಲ್ಲಿಯೇ ಸುಮಾರು ಕಾಲುಭಾಗದವರು ಬೌದ್ಧರೆಂಬುದನ್ನು ಗಮನಿಸಿದರೆ, ಬೌದ್ಧಮತವು ಎಷ್ಟು ಸತ್ತ್ವವುಳ್ಳದೆಂಬುದು ವ್ಯಕ್ತವಾಗುತ್ತದೆ. ವಿಶ್ವರಕ್ಷಕನಾದ ಜಗದೀಶ್ವರನೊಬ್ಬನ ಅಸ್ತಿತ್ವವನ್ನಾಗಲಿ, ಆರಾಧನೆಯನ್ನಾಗಲಿ ಬೋಧಿಸದೆಯೇ ಇದ್ದೂ ಕೂಡ, ಗೌತಮ ಬುದ್ಧನು ತನ್ನ ಸೌಶೀಲ್ಯಬಲದಿಂದ ದೇವತಾಯೋಗ್ಯವಾದ ಭಕ್ತಿ ಗೌರವಗಳಿಗೆ ಪಾತ್ರನಾದನೆಂದರೆ ಅದರಲ್ಲಿ ಲೇಶಮಾತ್ರವೂ ಅತಿಶಯೋಕ್ತಿಯಿಲ್ಲ.

**ಗೌತಮ ಬುದ್ಧನ ಲೋಕೋಪಕಾರ**

ಗೌತಮ ಬುದ್ಧನು ರಾಜನ ಮಗನಾಗಿ ಹುಟ್ಟಿ ಅರಮನೆಯಲ್ಲಿ ರಾಜಭೋಗವನ್ನನುಭವಿಸುತ್ತಿದ್ದವನು. ಅಂತಹವನು ವಿರಕ್ತನಾಗಿ ಯೌವನದಲ್ಲಿಯೇ ಸಂಸಾರ ತ್ಯಾಗಮಾಡಿ, ಸಂನ್ಯಾಸವನ್ನು ಸ್ವೀಕರಿಸಿ, ತತ್ತ್ವಸಾಕ್ಷಾತ್ಕಾರವನ್ನು ಪಡೆದನು. ಆ ಬಳಿಕ ಲೋಕ ಕಾರುಣ್ಯದಿಂದ ಶಿಷ್ಯರೊಡನೆ ಊರಿನಿಂದ ಊರಿಗೂ ಗ್ರಾಮದಿಂದ ಗ್ರಾಮಕ್ಕೂ ಹೋಗಿ ಜನರಿಗೆ ಧರ್ಮೋಪದೇಶ ಮಾಡಿದನು. ಸಂಸ್ಕೃತಭಾಷಾ ಪರಿಚಯವುಳ್ಳವರಿಗೆ ಮಾತ್ರವೇ ಲಭಿಸುತ್ತಿದ್ದ ಅಮೂಲ್ಯ ತತ್ತ್ವಭಂಡಾರವು ಸಾಮಾನ್ಯರಿಗೂ ಸೇರಿ ಸ್ವಂತಸ್ವತ್ತಾಗುವಂತೆ, ಬುದ್ಧನು ಜನರ ಬಳಕೆಯ ಭಾಷೆಯಾಗಿದ್ದ ಪಾಳಿಯಲ್ಲಿ ಬೋಧನೆ ಮಾಡಿದನು. ಜೀವನವು ದುಃಖಮಯವೆಂದು ಮನಗಂಡು, ಅದರ ಕಾರಣವನ್ನೂ ಕಂಡುಹಿಡಿದು, ಧನಿಕರು ದರಿದ್ರರೆಂಬ ಭೇದವಿಲ್ಲದೆ ಆತನು ಸಮಸ್ತರಿಗೂ ದುಃಖ ನಿರೋಧ ಮಾರ್ಗ

ವನ್ನು ತನ್ನ ಸಾಧನೆಗನುಸಾರವಾಗಿ ಬೋಧಿಸಿದನು. ಯಜ್ಞಗಳ ರೂಪದಲ್ಲಿಯೂ ಬಲಿಗಳ ರೂಪದಲ್ಲಿಯೂ ಪ್ರಾಣಿಹಿಂಸೆ ಮಾಡುವುದು ಜ್ಞಾನದೂರವಾದ ವರ್ತನೆಯೆಂದು ಸೂಚಿಸಿ, ಪ್ರಾಣಿಮಾತ್ರದಲ್ಲಿ ಪ್ರೀತಿ ಕರುಣೆಗಳನ್ನು ತೋರಿಸಬೇಕೆಂದು ಬುದ್ಧನು ಅಹಿಂಸಾತತ್ತ್ವವನ್ನು ಬೋಧಿಸಿದನು. ಸಚ್ಚಾರಿತ್ರದ ಅವಲಂಬನವಿಲ್ಲದೆ ಕೇವಲ ಪ್ರಾಯಶ್ಚಿತ್ತಾದಿ ಕರ್ಮಗಳನ್ನು ಮಾಡಿಕೊಂಡ ಮಾತ್ರದಿಂದಲೇ ಪಾಪಾಚರಣೆಯ ಪರಿಣಾಮ ಫಲದಿಂದ ಪಾರಾಗುವುದು ಸಾಧ್ಯವಿಲ್ಲವೆಂದು ಆತನು ಉಪದೇಶಿಸಿದನು. ತಾನು ಸೂಚಿಸಿದ ಆರ್ಯ ಮಾರ್ಗವನ್ನನುಸರಿಸಿ ನಿರ್ವಾಣವನ್ನು ಪಡೆಯುವುದೇ ದುಃಖನಿವೃತ್ತಿಯ ಮಾರ್ಗವೆಂದು ಆತನು ಬೋಧಿಸಿದನು. ಸಮಸ್ತವೂ ನಿಯಮಬದ್ಧವೆಂದೂ, ಮಾಡಿದ ಕರ್ಮಕ್ಕೆ ತಕ್ಕ ಫಲಾನುಭವವು ಸ್ವತಸ್ಸಿದ್ಧವೆಂದೂ, ಅದರಿಂದ ತಪ್ಪಿಸಿಕೊಳ್ಳುವುದು ಯಾರಿಗೂ ಯಾರ ಅನುಗ್ರಹದಿಂದಲೂ ಸಾಧ್ಯವಲ್ಲವೆಂದೂ ಬುದ್ಧನು ಒತ್ತಿಹೇಳಿದನು.*

---

*ಬುದ್ಧನು ಬೋಧಿಸಿದ ಕಾರ್ಯಕಾರಣ ಸಮನ್ವಯ ಸಂಬಂಧವಾದ ಈ ತತ್ತ್ವಕ್ಕೆ ಬೌದ್ಧಮತದಲ್ಲಿ ಪ್ರತೀತ್ಯಸಮುತ್ಪಾದವೆಂದು ಹೆಸರು. ಬುದ್ಧನು ವೈದಿಕಮತದ ಕರ್ಮವಿಪಾಕ ಸಿದ್ಧಾಂತವನ್ನು ಹೊಸದೊಂದು ರೀತಿಯಲ್ಲಿ ಬೋಧಿಸಿದನು.

ನ್ಯೂಟನನು ಕಂಡುಹಿಡಿದ ಭೂಮ್ಯಾಕರ್ಷಣ ಶಕ್ತಿಯ ನಿಯಮಗಳಿಗಿಂತಲೂ, ಸುಪ್ರಸಿದ್ಧ ವಿಜ್ಞಾನ ಸಂಶೋಧಕರಾದ ಐನ್‌ಸ್ಟೀನರೆಂಬವರು ಪ್ರತಿಪಾದಿಸುವ ಸಾಪೇಕ್ಷ್ಯಮತದ ನಿಯಮಗಳಿಗಿಂತಲೂ, ಬುದ್ಧನು ಬೋಧಿಸಿದ ಈ "ಪ್ರತೀತ್ಯ ಸಮುತ್ಪಾದ"ದ ನಿಯಮಗಳು ಶ್ರೇಷ್ಠತರವೆಂದು ಪ್ರೊಫೆಸರ್ ವಾಸ್ವಾನಿಯವರು ಅಭಿಪ್ರಾಯಪಟ್ಟಿದ್ದಾರೆ. ("A discovery greater than Newton's discovery of the Law of Gravitation, greater than Einstein's discovery of the Law of Relativity"—Prof. T. L. Vaswani)

ಈಚಿನ ವರುಷಗಳಲ್ಲಿ ನಡೆದಿರುವ ವೈಜ್ಞಾನಿಕ ಸಂಶೋಧನೆಗಳ ಫಲಿತಾಂಶವೂ ಇದಕ್ಕನುಕೂಲವಾಗಿಯೇ ಇರುವುದು ಮತ್ತೂ ವಿಶೇಷ. ಒಂದು ಪರಮಾಣುವಿನಿಂದ ಹಿಡಿದು ಸೂರ್ಯಮಂಡಲ ಮುಂತಾದವುಗಳವರೆಗೂ ವಿಶ್ವದ ಸಮಸ್ತ ವಸ್ತುಗಳಿಂದ ನಡೆಯುವ ಸಮಸ್ತ ಕಾರ್ಯಕಲಾಪಗಳೂ ನಿಯಮಬದ್ಧವೆಂಬ ಇಂದಿನ ವಿಜ್ಞಾನ ಸಂದೇಶವು ಬುದ್ಧನು ಬೋಧಿಸಿದ ಆ ಅಂಶವನ್ನು* ನೆನಪಿಗೆ ತರುತ್ತದೆ.

ಬುದ್ಧನು ಬೋಧಿಸಿದ ತತ್ತ್ವಗಳು ಜಾತಿ ಮತ ಭೇದವಿಲ್ಲದೆ ಸಮಸ್ತರಿಗೂ ದೊರೆಯುವಂತಾಗಿ ಜನರಿಗೆ ಸ್ವಾತಂತ್ರ್ಯಭಂಡಾರವು ಕರಗತವಾಯಿತು. ಮತಬೋಧೆಯ ಉದ್ದೇಶದಿಂದ ಬುದ್ಧನು ಸ್ಥಾಪಿಸಿದ 'ಸಂಘ' ದಲ್ಲಿ ಸಮಸ್ತ ಜಾತಿಗಳ ಭಿಕ್ಷುಗಳಿಗೂ—ಆ ಬಳಿಕ ಸ್ವಲ್ಪ ಕಾಲದ ಮೇಲೆ ಭಿಕ್ಷುಣಿಯರಿಗೂ—ಪ್ರವೇಶವು ದೊರೆಯಿತು. ಸಂನ್ಯಾಸ ಸ್ವೀಕಾರವು ಬುದ್ಧನ ಕಾಲಕ್ಕಿಂತ ಮುಂಚೆಯೇ ಆಚರಣೆಯಲ್ಲಿದ್ದಿತಾದರೂ ಭಿಕ್ಷು ಭಿಕ್ಷುಣಿಯರು ಸಂಘರೂಪದ ವ್ಯವಸ್ಥೆಯಲ್ಲಿ ಸೇರಿ ಲೋಕಹಿತಾರ್ಥವಾಗಿ ಶ್ರಮಿಸುವಂತೆ ಮಾಡಿದ ಕೀರ್ತಿಯು ಬುದ್ಧನಿಗೇ ಸಲ್ಲತಕ್ಕದಾಗಿದೆ. ಶೀಲಶುದ್ಧಿಯೊಂದನ್ನೇ ಗೌತಮ ಬುದ್ಧನು ಪ್ರಧಾನವಾಗೆಣಿಸಿದನೇ ಹೊರತು, ಜನಗಳ

---

* ಮೊನ್ನೆಮೊನ್ನೆ ಪ್ರಕಟವಾದೊಂದು ಗ್ರಂಥದಲ್ಲಿ ಆಡಾಮ್ಸ್ ಬೆಕ್ ಎಂಬ ಪ್ರಸಿದ್ಧ ಪಂಡಿತನು "ಇದೀಗ ನಿಜವಾದ ವಿಜ್ಞಾನ ಶಾಸ್ತ್ರೀಯ ದೃಷ್ಟಿ. ಇದು ಎರಡು ಸಾವಿರ ವರ್ಷಗಳಿಗೆ ಹಿಂದಿದ್ದ ಬುದ್ಧನನ್ನೂ ಈಚಿನವರಾದ ನ್ಯೂಟನ್ ಮತ್ತು ಐನ್‌ಸ್ಟೀನರವರಂತಹವರನ್ನೂ ಏಕಸೂತ್ರದಲ್ಲಿ ನಿಯೋಜನಗೊಳಿಸಿ ಸಂಬಂಧವನ್ನು ಕಲ್ಪಿಸುತ್ತದೆ" ಎಂದು ಬರೆದಿದ್ದಾರೆ. ("This indeed is the true scientific spirit Reaching across more than two millenniums it connects the Buddha with such men as Newton and Einstein—" —Page 167, *The Story of Oriental Philosophy* by L. Adams Beck.)

"A true Brahmin is known by his actions, not by birth" he said. "It is not the knotted hair and

ಜಾತಿ ಕುಲಗಳನ್ನಲ್ಲ. ಆದಾಗ್ಗೂ ಕೀಳು ಜಾತಿಯವರೆನಿಸಿಕೊಂಡಿದ್ದವರನ್ನು ಶೀಲಶುದ್ಧಿಯ ಸೋಪಾನದ ಮೇಲಕ್ಕೇರಿಸಿ ಉತ್ತಮಪಡಿಸುವುದು ಆತನ ಗುರಿಯಾಗಿದ್ದಿತೇ ಹೊರತು, ವಿವೇಚನೆಯಿಲ್ಲದೆ ಸರ್ವಸಮಾನತೆಯನ್ನು ಬೋಧಿಸಿ ಶೀಲ ಸಂಸ್ಕೃತಿಗಳ ಮಟ್ಟವನ್ನು ಕೆಳಕ್ಕಿಳಿಸುವುದೆಂದಿಗೂ ಆತನ ಸಂಕಲ್ಪವಾಗಿರಲಿಲ್ಲ. [ಬ್ರಾಹ್ಮಣ್ಯದ ಒರೆಗಲ್ಲು ಸದಾಚಾರ ಸೌಶೀಲ್ಯಗಳೇ ಹೊರತು ಕೇವಲ ಕುಲವಲ್ಲವೆಂದೂ, ಆ ಒರೆಗಲ್ಲಿನ ಪರೀಕ್ಷೆಯಲ್ಲಿ ಜಯಶಾಲಿಗಳಾದವರು ಬ್ರಾಹ್ಮಣರೆಂದು ಭಾವಿಸಲು ಅಡ್ಡಿಯಿಲ್ಲವೆಂದೂ ಬುದ್ಧನು ಬೋಧಿಸಿದನು.*]

ಸಂಪ್ರದಾಯಕ್ಕಿಂತಲೂ ಸತ್ಯಪ್ರಿಯತೆಗೆ ಹೆಚ್ಚು ಗಮನ ಕೊಟ್ಟು ವರ್ತಿಸಬೇಕೆಂದೂ, ವ್ಯಕ್ತಿಗೌರವದಿಂದ ಅಥವಾ ಗ್ರಂಥಗೌರವದಿಂದ ಯಾವುದೊಂದು ವಿಚಾರವನ್ನೂ ಸತ್ಯವೆಂದು ಸ್ವೀಕರಿಸದೆ ಸ್ವಂತವಿವೇಚನೆಯಿಂದ ಸತ್ಯವೆಂದು ತೋರಿದುದನ್ನು ಮಾತ್ರವೇ ಅಂಗೀಕರಿಸಬೇಕೆಂದೂ ಬುದ್ಧನು ಉಪದೇಶಿಸಿ ಆಲೋಚನಾಸ್ವಾತಂತ್ರ್ಯದ ಸನ್ನದನ್ನು ಜನರಿಗೆ ಮತ್ತೆ ಕರುಣಿಸಿದನು. ದೇವತೆಗಳೂ ಕರ್ಮಫಲಕ್ಕಧೀನರಾದ ಕಾರಣ, ದೇವತೆಗಳ ವರಪ್ರಸಾದ

---

* **"ನ ಜಟಾಹಿ ನ ಗೋತ್ತೇನ ನ ಜಚ್ಚಾ ಹೋತಿ ಬ್ರಾಹ್ಮಣೋ ।
ಯಮ್ಹಿ ಸಚ್ಚಂ ಚ ಧಮ್ಮೋ ಚ ಸೋ ಸುಖೀ ಸೋ ಚ ಬ್ರಾಹ್ಮಣೋ ॥"
—ಧರ್ಮಪದ, ೩೯೩.**

(" ಜಟೆಯಿಂದಾಗಲಿ, ವಂಶದಿಂದಾಗಲಿ, ಜಾತಿಯಿಂದಾಗಲಿ, ಬ್ರಾಹ್ಮಣನಾಗುವುದಿಲ್ಲ. ಯಾವನಲ್ಲಿ ಸತ್ಯ ಧರ್ಮಗಳುಂಟೋ ಅವನೇ ಸುಖಿ. ಅವನೇ ಬ್ರಾಹ್ಮಣ.")

ಗೌತಮ ಬುದ್ಧನು ನಿರೂಪಿಸಿದ ಬ್ರಾಹ್ಮಣ ಧರ್ಮಗಳು ಧರ್ಮಪದವೆಂಬ (ಬೌದ್ಧರ) ಗ್ರಂಥದ ಕೊನೆಯ ಅಧ್ಯಾಯದಲ್ಲಿವೆ. (**೩೮೩-೪೨೩ : ಈ ಶ್ಲೋಕಗಳನ್ನು ನೋಡಿ.**)

*
...prinkling of ashes that make a Brahmin, ...d truth and love" } From the story of Buddha By Ameer Ali. Page 106.

ಗಳಿಗಾಗಿ ಬಾಯಿಬಿಡದೆ ಮಾನವನು ಪೌರುಷವನ್ನು ಮೆರೆದು ಶೀಲ ಶುದ್ಧಿಯ ಪರಮಪದ ಸೋಪಾನವನ್ನು ಕಲ್ಪಿಸಿಕೊಂಡು ನಿರ್ವಾಣ ವನ್ನು ಪಡೆಯಬೇಕೆಂದು ಆತನು ತನ್ನ ಉದಾತ್ತ ಸಂದೇಶವನ್ನು ಸಾರಿದನು. ಪರಬ್ರಹ್ಮನಿಗೆ ವೈದಿಕಮತದಲ್ಲಿ ಯಾವ ಸ್ಥಾನವುಂಟೋ ಅದೇ ಸ್ಥಾನವನ್ನೇ ತನ್ನ ಮತದಲ್ಲಿ ಧರ್ಮಕ್ಕೆ ಕಲ್ಪಿಸಿ,* ತಾನು ಸ್ಥಾಪಿಸಿದ 'ಭಿಕ್ಷುಸಂಘ'ಕ್ಕೆ ಸೇರತಕ್ಕವರೆಲ್ಲರೂ ಧರ್ಮಕ್ಕೆ ಶರಣೆನ್ನು ವಂತೆ ಮಾಡಿದನು. ತನ್ನ ಭಾವನೆಯಲ್ಲಿ ಧರ್ಮವೆಂದು ತನ್ನ ಸಾಧನಾಬಲದಿಂದ ಕಂಡುಬಂದುದನ್ನು ಆತನು ನಿರ್ವಂಚನೆಯಿಂದ ಸಮಸ್ತರಿಗೂ ತಿಳಿಸಿ, ಶೀಲಶುದ್ಧಿಯಿಂದ ದುಃಖನಿವೃತ್ತಿಮಾಡಿ ಕೊಳ್ಳುವಂತೆ ಆತನು ಜನರನ್ನು ಪ್ರೇರಿಸಿದನು.

ಜನರೆಲ್ಲರೂ ಪರಸ್ಪರವಾಗಿ ಪ್ರೀತಿ ಮಮತೆಗಳಿಂದ ಕೂಡಿ ಮೈತ್ರಿಯಿಂದಿರಬೇಕೆಂದು ಬೋಧಿಸಿ ತನ್ನ ವರ್ತನೆಯಿಂದ ಉತ್ತಮ ನಿದರ್ಶನವನ್ನು ಕಲ್ಪಿಸಿದುದು, ಬುದ್ಧನು ಮಾಡಿದ ಮತ್ತೊಂದು ಮಹತ್ತರವಾದ ಲೋಕೋಪಕಾರ. ಗೌತಮ ಬುದ್ಧನು "ಎಷ್ಟೆಷ್ಟು ಸತ್ಕರ್ಮಗಳನ್ನಾಚರಿಸಿದರೂ ಅವುಗಳೆಲ್ಲವೂ ಹೃದಯಕ್ಕೆ ಶಾಂತಿಯು ನ್ನೀಯುವ ಮೈತ್ರಿಯ ಷೋಡಶಾಂಶಕ್ಕೂ ಸಮಾನವೆನಿಸಲಾರವು. ಹೃದಯಕ್ಕೆ ಶಾಂತಿರಸವನ್ನೆರೆಯುವ ಮೈತ್ರಿಯೊಂದನ್ನು ವೃದ್ಧಿಪಡಿಸಿ ಕೊಂಡರೆ ಅವುಗಳೆಲ್ಲವನ್ನೂ ಆಚರಿಸಿದುದಕ್ಕಿಂತ ಮಿಗಿಲಾಗುವುದು. ಉಜ್ಜ್ವಲ ತೇಜಸ್ಸಿನಿಂದ ಮೈತ್ರಿಯು ಬೆಳಗುತ್ತದೆ. ನಕ್ಷತ್ರಗಳೆಲ್ಲ ದರಿಂದ ನಮಗೆ ದೊರೆಯುವ ಬೆಳಕೂ ಬೆಳದಿಂಗಳಿನ ಹದಿನಾರರ ಲ್ಲೊಂದು ಪಾಲಿಗೂ ಸರಿದೂಗುವಷ್ಟಿರುವುದಿಲ್ಲ. ಸಮಸ್ತ ಸತ್ಕರ್ಮ ಗಳಿಗೂ ಮಿಗಿಲಾದ ಮೈತ್ರಿಯು ಶರತ್ಕಾಲದ ಶುಭ್ರಾಕಾಶದಲ್ಲಿ

* "Since Buddha's main interest was ethical he emphasised the ethical nature of the absolute. *Dharma* takes the place of Brahman."—*The Heart of Hindustan* —By Prof. Radhakrishnan. (page 123)

ಬೆಳಗುವ ಸೂರ್ಯನಂತೆಯೂ, ರಾತ್ರಿಯ ಕೊನೆಯ ಯಾಮದಲ್ಲಿ ತೊಳಗುವ ಶುಕ್ರ ಗ್ರಹದಂತೆಯೂ ಶುದ್ಧ ಹೃದಯದಲ್ಲಿ ಬೆಳಗುತ್ತ ಶಾಂತಿರಸವನ್ನೆರೆಯುತ್ತದೆ” ಎಂದು ಹೇಳಿ ಪ್ರಾಣಿಮಾತ್ರದಲ್ಲಿ ಕರುಣೆಯನ್ನು ತೋರಬೇಕೆಂಬ ಮೈತ್ರೀಧರ್ಮದ ಪ್ರೇಮ ಸಂದೇಶವನ್ನು ಸಾರಿದನೆಂದು ‘ಇತಿವೃತ್ತಕ’ವೆಂಬ ಗ್ರಂಥವು ತಿಳಿಸುತ್ತದೆ. ಜನರು ತಮ್ಮ ನೆರೆಹೊರೆಯವರನ್ನೂ, ಬಂಧುಗಳನ್ನೂ ಮಾತ್ರವೇ ಅಲ್ಲದೆ ಒಟ್ಟು ಪ್ರಾಣಿವರ್ಗವನ್ನೇ ಪ್ರೀತಿಸಿ ಕರುಣೆ ತೋರಬೇಕೆಂಬುದು ಬುದ್ಧನು ಸಾರಿದ ಮತ್ತೊಂದು ಸಂದೇಶ. ಮಹಾನುಭಾವನಾದ ಗೌತಮ ಬುದ್ಧನು, “ತನಗಿರುವ ಒಂದೇ ಒಂದು ಮಗುವಿನ ಯೋಗಕ್ಷೇಮಕ್ಕಾಗಿ ಅವಶ್ಯಕಂಡರೆ ಮರಣಕ್ಕೂ ಸಿದ್ಧಳಾಗುವ ತಾಯಿಯಂತೆ ಪ್ರೀತಿಯನ್ನು ಮೆರೆದು, ಲೋಕವನ್ನೇ ಆ ಬಗೆಯ ವಾತ್ಸಲ್ಯದಿಂದ ಪ್ರೀತಿಸುವುದನ್ನು ಕಲಿಯಬೇಕು” ಎಂದು ಅಪ್ಪಣೆ ಕೊಟ್ಟಿದ್ದಾನೆ; “ಪ್ರೀತಿಯು ಅತ್ಯಲ್ಪವಾಗಿದ್ದರೂ ಅದು ಅಪಾರವಾದ ದಾನಗಳಿಗಿಂತ ಶ್ರೇಷ್ಠತರವು” ಎಂದು ಸೂಚಿಸಿದ್ದಾನೆ.

ಬೌದ್ಧಮತವು ದಿನದಿನವೂ ಜನಗಳ ಮನಸ್ಸನ್ನು ಆಕರ್ಷಿಸಿ ದೇಶದೇಶಗಳಿಗೂ ಹರಡಿತು. ಬುದ್ಧನ ಮರಣಾನಂತರ ಕಾಲಕ್ರಮದಲ್ಲಿ ಆತನು ಮಹಾವಿಷ್ಣುವಿನ ಒಂಬತ್ತನೆಯ ಅವತಾರವೆಂದು*

---

* ಬುದ್ಧನು ಉಪನಿಷತ್ತುಗಳಲ್ಲಿ ಹೇಳಿದ್ದ ಅನೇಕ ತತ್ತ್ವಗಳನ್ನೇ ಆಧಾರವಾಗಿಟ್ಟುಕೊಂಡು ಅವುಗಳ ಜೊತೆಗೆ ತನಗೆ ಯುಕ್ತ ತೋರಿದಂತೆ ಹಲವು ಅಂಶಗಳನ್ನು ಸೇರಿಸಿ ಹೊಸ ಮತವನ್ನು ಸ್ಥಾಪಿಸಿದನೆಂಬುದೂ ಬಹುಶಃ ಅದಕ್ಕೊಂದು ಕಾರಣ. ಡಾಕ್ಟರ್ ರ್ಹೈಸ್ ಡೇವಿಡ್ಸ್‌ರವರ “Buddha's whole training was Brahmanism. He probably deemed himself to be the most correct exponent of the spirit as distinct from the letter of the ancient faith” ಎಂಬ ಮಾತುಗಳು ಗಮನಾರ್ಹವಾಗಿವೆ. ಎಡ್ಮಂಡ್ ಹೋಮ್ಸ್ ಮುಂತಾದ ಅನೇಕ ಮಂದಿ ವಿದ್ವಾಂಸರೂ ಸಹ ಇದೇ ರೀತಿ ಅಭಿಪ್ರಾಯಪಟ್ಟಿದ್ದಾರೆ.

ಸನಾತನ ಧರ್ಮಾವಲಂಬಿಗಳಲ್ಲಿಯೇ ಬಹುಮಂದಿ ಗಣ್ಯರು ಅಂಗೀಕರಿಸಿದರು. ಭರತಖಂಡದಲ್ಲಿ ಸುಪ್ರಸಿದ್ಧನಾದ ಜಯದೇವನು ಗೌತಮ ಬುದ್ಧನ ಗುಣಸಂಕೀರ್ತನಮಾಡಿ, ಯಜ್ಞವಿಧಿಯ ಪಶುಘಾತವು ಸರಿಯಲ್ಲವೆಂಬುದನ್ನು ಜನಕ್ಕೆ ತೋರಿಸಿಕೊಟ್ಟ ಸದಯಹೃದಯನಾದ ಬುದ್ಧನು ಕೇಶವನ ಅವತಾರವೆಂದು ವರ್ಣಿಸಿ, **"ಯಜ್ಞವಿಧೇರಹಹ ಶ್ರುತಿಜಾತಂ ಸದಯ ಹೃದಯ ದರ್ಶಿತ ಪಶುಘಾತಮ್। ಕೇಶವ ಧೃತ ಬುದ್ಧ ಶರೀರ ನಮೋ ಜಯ ಜಗದೀಶ ಹರೇ॥"** ಎಂದು ತನ್ನ ಗೀತ ಗೋವಿಂದದಲ್ಲಿ ಮುಕ್ತಕಂಠದಿಂದ ಹಾಡಿದನು.

**ಜನತೆಯ ಗೌರವ**

ಗೌತಮ ಬುದ್ಧನ ಕಾಲಾನಂತರ ಆತನ ವಿಚಾರದಲ್ಲಿ ಜನತೆಯ ಗೌರವವು ಹೆಚ್ಚುತ್ತ ಬಂದು, ಆತನು ಇಂದು ಯಶಶ್ಶರೀರದಿಂದ ಜಗದ್ವಂದ್ಯನಾಗಿರುವುದು ಹಾಗಿರಲಿ. ಒಟ್ಟಿನಮೇಲೆ ಬುದ್ಧನಿಗೂ, ಮಹಮ್ಮದನಿಗೂ ಅವರವರ ಜೀವಿತಕಾಲದಲ್ಲಿ ದೊರೆತಷ್ಟು ಆದರ ಗೌರವಗಳು ಮತಸ್ಥಾಪಕರಲ್ಲಿ ಮತ್ತಾರಿಗೂ ಅವರ ಜೀವಿತಕಾಲದಲ್ಲಿ ದೊರೆಯಲಿಲ್ಲ. ಅವರೀರ್ವರೂ ಸ್ಥಾಪಿಸಿದ ಎರಡು ಮತಗಳೂ ಅವರ ಜೀವಿತಕಾಲದಲ್ಲಿ ರೂಢಮೂಲವಾಗಿ ಪ್ರಚಾರಕ್ಕೆ ಬಂದಂತೆ ಮತ್ತಾರ ಮತವೂ (ಅವರ ಜೀವಿತಕಾಲದಲ್ಲಿ) ಪ್ರಚಾರವಾಗಲಿಲ್ಲ. ಗೌತಮನು ರಾಜಭೋಗವನ್ನು ಪರಿತ್ಯಜಿಸಿ, ದಾರಿದ್ರ್ಯವನ್ನವಲಂಬಿಸಿ, ಸಂಸಾರ ತ್ಯಾಗಮಾಡಿ ಸಾಧನಾಬಲದಿಂದ ಬುದ್ಧನಾದುದನ್ನು ಕಂಡು ಜನತೆಗೆ ವಿಸ್ಮಯವಾಯಿತು. ಆತನ ವಿರೋಧಿಗಳೂ ಕೆಲವರಿದ್ದುದು ನಿಜವಾದರೂ, ಒಟ್ಟಿನಲ್ಲಿ ಜನರು ಆತನಿಗೆ ವಿಶೇಷ ಮನ್ನಣೆಯನ್ನು ತೋರಿಸಿದರು: ಪ್ರಭುಗಳೂ, ಪ್ರಭುಸಮಾನರಾದ ಧನಿಕರೂ, ಗೌತಮನು ತಮ್ಮಂತೆಯೇ ಭೋಗವನ್ನನುಭವಿಸುತ್ತಿದ್ದು ಆ ಬಳಿಕ ಲೋಕವನ್ನುದ್ಧರಿಸುವ ಆಶೆ

ಯಿಂದ ಬಡತನವನ್ನಪ್ಪಿದವನೆಂಬುದನ್ನು ಮನಗಂಡು ಆತನಲ್ಲಿ ಆದರ ಗೌರವಗಳನ್ನು ತೋರಿಸಿದರು. ಮಹಾಜನರಾದರೋ ಗೌತಮ ಬುದ್ಧನು ಅನನ್ಯ ಸಾಧಾರಣವಾದ ಸ್ವಾರ್ಥತ್ಯಾಗವನ್ನು ತೋರಿ ತಮ್ಮ ಉದ್ಧಾರಕ್ಕಾಗಿ ಜ್ಞಾನಭಂಡಾರದ ಬಾಗಿಲನ್ನು ಒಡೆದವನು, ತಮ್ಮ ಮನೆಯ ಬಾಗಿಲಿಗೇ ತಿಳಿವಿನ ಹೊನಲನ್ನು ತಂದವನು ಎಂದು ಆತನಲ್ಲಿ ಅಪಾರವಾದ ಆದರ ಗೌರವಗಳನ್ನು ತೋರಿಸಿದರು. ಇದರ ಪರಿಣಾಮವಾಗಿ "ಬುದ್ಧನನ್ನು ಶರಣು ಹೋಗುವೆನು. ಧರ್ಮ ವನ್ನು ಶರಣು ಹೋಗುವೆನು. ಸಂಘವನ್ನು ಶರಣು ಹೋಗುವೆನು" ಎಂಬ—ಬೌದ್ಧಮತದ ರತ್ನತ್ರಯವಾದ—ದೀಕ್ಷಾವಾಕ್ಯಗಳ † ಘೋಷವು ಎಲ್ಲೆಲ್ಲಿಯೂ ಮೊಳಗಿ, ಬಹುಮಂದಿ ಬುದ್ಧನ ಶಿಷ್ಯ ರಾದರು. ಆತನ ಶಿಷ್ಯವರ್ಗದಲ್ಲಿ ಬ್ರಾಹ್ಮಣ ಶೂದ್ರರೆಂಬ ಭೇದ ವಿಲ್ಲದೆ ಸಮಸ್ತ ವರ್ಣಗಳ ಸ್ತ್ರೀಪುರುಷರೂ, ಸಮಸ್ತ ವೃತ್ತಿಗಳವರೂ ಇದ್ದರು; ಆತನು ಹೋದೆಡೆಗಳಲ್ಲೆಲ್ಲ ಆತನಿಗೆ ಪ್ರೀತಿ ಗೌರವಗಳೂ, ಆದರಾತಿಥ್ಯಗಳೂ ದೊರೆಯುತ್ತಿದ್ದುವು. ಬಿಂಬಸಾರ, ಪ್ರಸೇನಜಿತು ಮುಂತಾದ ರಾಜರೂ; ಸುನೀಥ, ವರ್ಷಕಾರ ಮುಂತಾದ ಮಂತ್ರಿ ಗಳೂ; ಅನಾಥಪಿಂಡಿಕ ಮುಂತಾದ ವರ್ತಕರೂ; ಕಾಶ್ಯಪ ಮುಂತಾದ ಬ್ರಾಹ್ಮಣರೂ; ಲಿಚ್ಛವಿಗಳ ಸೈನ್ಯಾಧಿಪತಿಯಾದ ಸಿಂಹ ಮುಂತಾದ ಶೂರಾಗ್ರಣಿಗಳೂ; ಅಂಬಾಪಾಲಿ, ಸುಪ್ರಿಯಾ, ವಿಶಾಖಾ ಮುಂತಾದ ಸ್ತ್ರೀಯರೂ; ಸುನೀತ ಮುಂತಾದ ಅಸ್ಪೃಶ್ಯರೂ; ಆತನ ಮತಕ್ಕೆ

---

† "**ಬುದ್ಧಂ ಸರಣಂ ಗಚ್ಛಾಮಿ। ಧಮ್ಮಂ ಸರಣಂ ಗಚ್ಛಾಮಿ। ಸಂಘಂ ಸರಣಂ ಗಚ್ಛಾಮಿ॥**" ಎಂಬಿವು ಆ ವಾಕ್ಯಗಳು. ಈ ವಾಕ್ಯಗಳನ್ನು "**ಬುದ್ಧಙ್ ಸರಣಂ ಗಚ್ಛಾಮಿ। ಧಮ್ಮಙ್ ಸರಣಂ ಗಚ್ಛಾಮಿ। ಸಂಘಙ್ ಸರಣಂ ಗಚ್ಛಾಮಿ।**" ಎಂದು (ಅನುಸ್ವಾರಕ್ಕೆ ಬದಲಾಗಿ "ಙ್" ಶಬ್ದ ಬರುವಂತೆ) ಉಚ್ಚರಿಸುವುದು ಬೌದ್ಧ ಸಂಪ್ರದಾಯವೆಂದು ಬೌದ್ಧ ಭಿಕ್ಷು ಗಳೊಬ್ಬರು ಈ ಗ್ರಂಥಕರ್ತನಿಗೆ ಹೇಳಿದರು.

ಸೇರಿದರು. ಬೌದ್ಧಮತವನ್ನು ಸ್ವೀಕರಿಸಿ ಬುದ್ಧನ ಶಿಷ್ಯರಾಗದಿದ್ದವರೂ ಸಹ, ಆತನಿಗೂ ಆತನ ಶಿಷ್ಯರಿಗೂ ಪ್ರೀತ್ಯಾದರಗಳಿಂದ ಸತ್ಕಾರ ಮಾಡುತ್ತಿದ್ದರು. ಜಟಿಲಸಂಗಡಕ್ಕೆ ಸೇರಿದವನಾದ ಆಪಣದ ಕೆಣಿಯನೆಂಬ ಬ್ರಾಹ್ಮಣನು ಬುದ್ಧನಿಗೂ, ಆತನ ಇನ್ನೂರೈವತ್ತು ಮಂದಿ ಶಿಷ್ಯರಿಗೂ ಔತಣ ಹೇಳಿ ಮಿಷ್ಟಾನ್ನಭೋಜನ ಮಾಡಿಸಿದ ನಂತೆ. ಆ ಔತಣದ ದಿನ ಗೌತಮ ಬುದ್ಧನು ವೈದಿಕ ಮತದ (ಸನಾತನ ಧರ್ಮದ) ಕೆಲವು ಶ್ರೇಷ್ಠ ನಿಯಮಗಳನ್ನು ಕುರಿತು ಉಪನ್ಯಾಸಮಾಡಿ ತನ್ಮೂಲಕ ಪರಮತ ಸಹಿಷ್ಣುತೆಯನ್ನು ಬೆಳಗಿದನಂತೆ.

**ಈರ್ವರು ಸೀಮಾ ಪುರುಷರು**

ಮಂತ್ರವಿದರಾದ ಅನೇಕ ಮಂದಿ ಮಹರ್ಷಿಗಳೂ, ಜ್ಞಾನ ಧನರಾದ ಬಹುಮಂದಿ ವೀರಕ್ಷತ್ರಿಯರೂ ಆರ್ಯಸಂಸ್ಕೃತಿಯ ಭವ್ಯ ಮಂದಿರವನ್ನು ನಿರ್ಮಿಸಿದರು. ಮಾನವ ಪರಿಶೋಧನೆಯ ಮಾನದಂಡಕ್ಕೆ ಇನ್ನೂ ಪೂರ್ತಿಯಾಗಿ ಸಿಕ್ಕಿಲ್ಲದ ಪ್ರಾಚೀನತೆಯ ಹಿಮರಾಜಿಯಲ್ಲಿ ಅವರ ದೀರ್ಘ ಜೀವನದ ಸಾಧನಾ ಸಂದೇಹಗಳೆಲ್ಲ ಮರೆಯಾಗಿ, ಕೇವಲ ಅವರ ನಾಮಧೇಯಗಳು ಮಾತ್ರವೇ ಮಸಕಾಗಿ ಕಾಣುತ್ತಿವೆ. ಕರ್ತನಿಗಿಂತ ಕೃತಿಯೇ ದೊಡ್ಡದೆಂಬ ಅಚಲವಾದ ಅವರ ಮನೋಭಾವನೆಯೇ ಅವರಲ್ಲಿ ಯಾರೊಬ್ಬರ ಜೀವನ ಚರಿತ್ರೆಯೂ ನಮಗೆ ಪೂರ್ತಿಯಾಗಿ ದೊರೆಯದಂತಾದುದಕ್ಕೆ ಮುಖ್ಯಕಾರಣ. ಕಾರಣಗಳು ಎಂತಹವೇ ಆಗಿರಲಿ, ಆ ಮಹನೀಯರ ಜೀವನ ಚರಿತ್ರೆಗಳೇನೂ ನಮಗೆ ದೊರೆಯುವಂತಾಗಲಿಲ್ಲವೆಂಬುದು ವಾಸ್ತವಾಂಶ. ಆದಾಗ್ಯೂ, ಉಪನಿಷತ್ತುಗಳ ಯುಗದ ಆದಿಭಾಗದಲ್ಲೊಬ್ಬ ಮಹಾಪುರುಷನೂ, ಆತನ ಕಾಲಾನಂತರ ಅನೇಕ ಶತಮಾನಗಳ ಮೇಲೆ ಮತ್ತೊಬ್ಬ ಮಹಾಪುರುಷನೂ ನಮಗೆ ತಮ್ಮ ನಾಮಧೇಯದಿಂದ ಮಾತ್ರವೇ ಪರಿಚಯಕೊಡು

ಮಂತಾಗದೆ, ಅವರ ಜೀವನ ಚರಿತ್ರೆಗಳು ಅಲ್ಪಸ್ವಲ್ಪವಾಗಿ ತಿಳಿದಿವೆ. ಅವರೀರ್ವರಲ್ಲಿ ಒಬ್ಬನು ಮಹರ್ಷಿ ಯಾಜ್ಞವಲ್ಕ್ಯನು; ಮತ್ತೊಬ್ಬನು ಶಾಕ್ಯಮುನಿ ಗೌತಮ ಬುದ್ಧನು. ಅವರೀರ್ವರಿಗೂ ಪರಸ್ಪರವಾಗಿ ಕಂಡುಬರುವ ಕೆಲವು ಸಾದೃಶ್ಯಗಳಿವೆ. ಆದಕಾರಣ, ಶಕಪುರುಷನಾದ ಸಾಧಕಶ್ರೇಷ್ಠ ಯಾಜ್ಞವಲ್ಕ್ಯನಂತೆ ಗೌತಮಬುದ್ಧನೂ ನಮಗೆ ಆದರಣೀಯನೆಂಬ ವಿಚಾರದಲ್ಲಿ ಲೇಶವೂ ಸಂಶಯವಿಲ್ಲ.

**ಮಹರ್ಷಿ ಯಾಜ್ಞವಲ್ಕ್ಯನೂ ಶಾಕ್ಯಮುನಿ ಬುದ್ಧನೂ**

ಅವರೀರ್ವರೂ ಅವರವರ ಕಾಲದ ಸಂಸ್ಕೃತಿಗಳಲ್ಲಿ ಉತ್ತಮವಾದ ಮತ್ತು ಉದಾತ್ತವಾದ ಲಕ್ಷಣಗಳಿಗೆಲ್ಲ ಮೂರ್ತಿವತ್ತಾಗಿದ್ದ ಮಹಾವ್ಯಕ್ತಿಗಳು. ಅವರೀರ್ವರೂ ಆರ್ಯ ನಾಗರಿಕತೆಯ ಎರಡು ಪ್ರಫುಲ್ಲ ಕುಸುಮಗಳೆಂದರೆ, ಅದೆಂದಿಗೂ ಅತಿಶಯೋಕ್ತಿಯಾಗದು. ಅವರೀರ್ವರೂ ಪ್ರಚಂಡ ಮೇಧಾವಿಗಳಾದ ಯೋಗಿವರೇಣ್ಯರು. ಯಾಜ್ಞವಲ್ಕ್ಯನು ಶುಕ್ಲ ಯಜುರ್ವೇದ ಪ್ರಣೇತನಾದ ಅದ್ಭುತ ಚೇತನನು. ಬುದ್ಧನಂತೂ, ಯೋಗಿಗಳ ಚಕ್ರವರ್ತಿಯೆಂದು ತನ್ನ ಕಾಲದಲ್ಲಿ ಪ್ರಸಿದ್ಧನಾಗಿ ದೊಡ್ಡದೊಂದು ಮತವನ್ನೇ ಸ್ಥಾಪಿಸಿದ ಮಹಾಪುರುಷನು. ಅವರೀರ್ವರೂ ತಮ್ಮ ಪೂರ್ವಜರ ಸಾಧನೆ ಸಂಸ್ಕೃತಿಗಳ ಅಮೃತರಸ ಸೇವನೆಯಿಂದಲೇ ಪರಿಪುಷ್ಟರಾಗಿ, ಅವುಗಳ ಅವಲಂಬನವನ್ನೇ ಪಡೆದಿದ್ದೂ ನೂತನ ಮಾರ್ಗವನ್ನು ಅಳವಡಿಸಿದ ಸ್ವಾತಂತ್ರ್ಯಪ್ರೇಮಿಗಳು. ಅವರಿಬ್ಬರೂ ತಮ್ಮ ತಮ್ಮ ಪತ್ನಿಯರನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರೂ, ಭೋಗವು ಅಮುಖ್ಯವೆಂದು ಭಾವಿಸಿ, ಪ್ರೇಯಕ್ಕಿಂತಲೂ ಶ್ರೇಯಕ್ಕೆ ಹೆಚ್ಚು ಗಮನ ಕೊಟ್ಟವರು. ಯಾಜ್ಞವಲ್ಕ್ಯನು ಸಂಸಾರಿಯಾಗಿದ್ದೂ ವಿರಕ್ತಿಯನ್ನು ಹೊಂದಿದ್ದುದಲ್ಲದೆ, ಕೊನೆಗೆ ವಿರಕ್ತಿದೂರಳಾದ ತನ್ನ ಪತ್ನಿ ಕಾತ್ಯಾಯಿನಿಯನ್ನು—ಆಕೆಯ ಸಮ್ಮತಿಯಿಂದಲೇ—ಬೀಳ್ಕೊಂಡು ತ್ಯಾಗ

ಭೂಮಿಯಾದ ತಪೋವನಕ್ಕೆ ತೆರಳಿದನು. ಗೌತಮ ಬುದ್ಧನು ಭೋಗವು ದುಃಖಮಯವೆಂದು ಭಾವಿಸಿ, ಪ್ರಿಯಪತ್ನಿಯನ್ನೂ ತೊರೆದು ಆಕೆಗೆ ಗೋಚರವಿಲ್ಲದಂತೆಯೇ ಅರಮನೆಯನ್ನು ಬಿಟ್ಟು ಹೊರಟುಹೋದನು.

ಅವರೀರ್ವರ ಪರಸ್ಪರ ಸಾದೃಶ್ಯವು ಅಲ್ಲಿಗೇ ಮುಗಿಯಲಿಲ್ಲ
ಅವರು ತಮ್ಮ ಸಾಧನಾಬಲದಿಂದ ತಮ್ಮ ಗುರುಗಳಿಗೂ ಬೋಧಕ
2. ರಾಗುವ ಮಟ್ಟಿನ ತತ್ತ್ವಸಾಕ್ಷಾತ್ಕಾರವನ್ನು ಪಡೆದವರು. ಪರಮ
ಮೇಧಾವಿಯೆಂದು ತನ್ನ ಕಾಲದಲ್ಲಿ ಸುಪ್ರಸಿದ್ಧನಾಗಿದ್ದ ಉದ್ದಾಲಕನು
ತನ್ನ ಶಿಷ್ಯನಾದ ಯಾಜ್ಞವಲ್ಕ್ಯನಿಂದ ಪರಾಜಿತನಾಗಿ ಶಿಷ್ಯನನ್ನೇ
ಗುರುವಾಗಿ ಸ್ವೀಕರಿಸಿದನು. ಗೌತಮನು ಸಿದ್ಧಿಯನ್ನು ಪಡೆದು
ಹಿಂದಿರುಗುವ ವೇಳೆಗೆ ಅವನ ಗುರುಗಳಾದ ಆರಾಡ ಕಾಲಾಮನೂ,
ರುದ್ರಕನೂ ಮೃತರಾಗದೆ ಬದುಕಿದ್ದ ಪಕ್ಷದಲ್ಲಿ ಬುದ್ಧನು ಅವರಿಗೂ
ತತ್ತ್ವಬೋಧೆ ಮಾಡುತ್ತಿದ್ದನು. ಆತನು ಆ ರೀತಿ ಮಾಡಲು
ಬಯಸಿ, ಅವರು ಮೃತರಾಗಿದ್ದುದನ್ನು ತಿಳಿದು ಸುಮ್ಮನಾದನು.
ಭೋಗದ ಸೆಳೆತಕ್ಕೆ ಸಿಕ್ಕದೆ, ಅಭೂತಪೂರ್ವವಾದ ತ್ಯಾಗಬುದ್ಧಿ
ಯನ್ನು ತೋರಿಸಿದುದರಲ್ಲಿಯೂ, ಯಾಜ್ಞವಲ್ಕ್ಯನಿಗೂ ಬುದ್ಧನಿಗೂ
3. ಪರಸ್ಪರ ಸಾದೃಶ್ಯವುಂಟು: ವೈದಿಕ ಸಂಸ್ಕೃತಿಯ ವರಪುತ್ರನಂತಿದ್ದ
ಯಾಜ್ಞವಲ್ಕ್ಯನ ವರ್ಚಸ್ಸಿಗೂ, ವಿನಯಕ್ಕೂ, ವಿದ್ಯಾಪ್ರೌಢಿಗೂ
ಮನಸೋತು ಜನಕ ಸಾರ್ವಭೌಮನು ತಾನೂ ತನ್ನವರೂ ದಾಸ
ರಾಗಿರಲು ಸಮ್ಮತಿಸಿ ತನ್ನ ರಾಜ್ಯವನ್ನೊಪ್ಪಿಸಿಕೊಳ್ಳಬೇಕೆಂದು
ಆತನನ್ನು ಬೇಡಿದನು; ಗೌತಮ ಬುದ್ಧನ ಅದ್ಭುತ ಚಾರಿತ್ರಕ್ಕೆ
ಮನಸೋತು ಬಿಂಬಸಾರನು ತನ್ನ ಸಿಂಹಾಸನವನ್ನೊಪ್ಪಿಸಿಕೊಂಡು
ಪ್ರಭುತ್ವ ಮಾಡಬೇಕೆಂದು ಆತನನ್ನು ಬೇಡಿದನು. ರಾಜ್ಯಲೋಭ
ವೆಂದಿಗೂ ಅವರ ಮನಸ್ಸನ್ನಾಕರ್ಷಿಸಲಿಲ್ಲ. ತಮ್ಮನ್ನು ನಿಂದಿಸಿ
4 ನುಡಿದವರಲ್ಲಿ ಕೂಡ ಅಸಹನವನ್ನು ತೋರಿಸದೆ ನಗುಮುಖದಿಂದ

ಮಾತನಾಡುತ್ತಿದ್ದ ಅಮೋಘ ವರ್ತನೆಯು ಅವರೀರ್ವರಿಗೂ ಇದ್ದ ಮತ್ತೊಂದು ಸಾದೃಶ್ಯ. ಅನನ್ಯ ಸುಲಭವಾದ ಈ ಗುಣವು ಸಂಸ್ಕೃತ ಚೇತನರೆಲ್ಲರ ಮುಖ್ಯಲಕ್ಷಣ. ಅದನ್ನು ಅವರೀರ್ವರೂ ಪೂರ್ಣವಾಗಿ ಪಡೆದಿದ್ದರು. ಅಜ್ಞಾನಿಗಳಲ್ಲಿ ದಯಾ ಮೈತ್ರಿಗಳನ್ನು ತೋರಿಸಿ ಅವರ ಉದ್ಧಾರಕ್ಕಾಗಿಯೇ ಶ್ರಮಿಸುವುದಂತೂ, ಯಾವಜ್ಜೀವವೂ ಅವರು ಪ್ರೀತಿಯಿಂದ ತಳೆದಿದ್ದ ಧರ್ಮದೀಕ್ಷೆ. ಜನರು ಐಹಿಕ ಜೀವನದ ಭೋಗಲಾಲಸೆಯಲ್ಲಿಯೇ ಮಗ್ನರಾಗಿ ಮೈಮರೆಯದೆ ಜನನಮರಣರೂಪದ ಸಂಸಾರ ಚಕ್ರದಿಂದ ಪಾರಾಗಬೇಕೆಂದು ಅವರೀರ್ವರೂ ಬೋಧಿಸಿದರು.

**ಅವರೀರ್ವರೂ ಬೋಧಿಸಿದ ಮಾರ್ಗಗಳು ಬೇರೆಬೇರೆ**

ಆದರೆ ಅವರೀರ್ವರೂ ಬೋಧಿಸಿದ ಮಾರ್ಗಗಳು ಮಾತ್ರ ಬೇರೆ ಬೇರೆಯಾಗಿದ್ದುವು. ಯಾಜ್ಞವಲ್ಕ್ಯನು ಆತ್ಮವಿದ್ಯೆಯನ್ನು ಬೋಧಿಸಿ ಮೋಕ್ಷದ ಅಖಂಡ ಸುಖಕ್ಕೆ ಮಾರ್ಗವನ್ನು ತೋರಿಸಿದನು. ಗೌತಮ ಬುದ್ಧನು ಆರ್ಯಾಷ್ಟಾಂಗಿಕ ಮಾರ್ಗದಿಂದ ತೃಷ್ಣೆಯನ್ನು ಪರಿಹರಿಸಿಕೊಳ್ಳುವ ಬಗೆಯನ್ನು ತಿಳಿಸಿ ನಿರ್ವಾಣದಿಂದ ಶಾಶ್ವತ ದುಃಖನಿವೃತ್ತಿಗೆ ದಾರಿಯನ್ನು ತೋರಿಸಿದನು. ಯಾಜ್ಞವಲ್ಕ್ಯನು ಸೃಷ್ಟಿಗೆ ಅಧಿಷ್ಠಾತೃವಾದ ಪರಬ್ರಹ್ಮನ ಸ್ವರೂಪವನ್ನು ವರ್ಣಿಸಿ, ಪರಬ್ರಹ್ಮಸಾಕ್ಷಾತ್ಕಾರದಿಂದ ಮೋಕ್ಷವೆಂದನು. ಬುದ್ಧನಾದರೋ ಭಗವಂತನೊಬ್ಬನುಂಟೇ–ಎಂಬ ಸುದ್ದಿಯನ್ನೇ ಎತ್ತದೆ, ಮಾನವನು ಧರ್ಮವನ್ನು ಶರಣೆಂದು ನಂಬಿ ಶೀಲಶುದ್ಧಿಯನ್ನು ಗಳಿಸಿ ನಿರ್ವಾಣವನ್ನು ಪಡೆಯಬಹುದೆಂದು ಬೋಧಿಸಿದನು. ಅಂತು, ಅವರೀರ್ವರ ಅಧ್ಯವಸಾಯದಿಂದಲೂ ಯಥಾಯೋಗ್ಯವಾಗಿ ಅವರವರ ಕಾಲದ ಸಂಸ್ಕೃತಿಯು ಬೆಳೆದು ಪರಿಪುಷ್ಟವಾಯಿತು; ಅದರ ಫಲವಾಗಿ ಅಮೋಘ ರೀತಿಯಲ್ಲಿ ಲೋಕೋಪಕಾರವಾಯಿತು. ಬುದ್ಧನ ಹೃದಯದಿಂದ ಅನರ್ಗಳವಾಗಿ

ಪ್ರವಹಿಸಿದ ಪ್ರೇಮಸುಧೆಯ ನಿಜಸ್ವಭಾವವನ್ನರಿಯಬೇಕಾದರೆ—ಆತನು ಶ್ರೇಷ್ಠತರಗತಿಯ ಸಾಧಕನಾಗಿದ್ದು, ಶಾಕ್ಯಮುನಿಯೆಂದು ಪ್ರಸಿದ್ಧನಾದುದರ ಒಳಮರ್ಮವನ್ನರಿಯಬೇಕಾದರೆ—ಆತನ ವಿಚಾರದಲ್ಲಿ ಪ್ರೀತಿ ಗೌರವಗಳನ್ನೂ ಬೌದ್ಧರ ಹೇಳಿಕೆಗಳಲ್ಲಿ ಸಹಾನುಭೂತಿಯನ್ನೂ ಪ್ರದರ್ಶಿಸಿ ಆತನ ಜೀವನಚರಿತ್ರೆಯನ್ನು ಪರಿಶೀಲಿಸುವುದು ಆವಶ್ಯಕ.

ಬುದ್ಧರುಗಳು

ಅನೇಕ ಸಹಸ್ರ ವರ್ಷಗಳಿಗೊಂದೊಂದು ಸಾರಿ ಒಬ್ಬೊಬ್ಬ ಬುದ್ಧನು ಜನ್ಮವೆತ್ತಿ ಧರ್ಮಬೋಧೆಯಿಂದ ಜಗತ್ತನ್ನುದ್ಧರಿಸುವನೆಂದೂ, ಗೌತಮ ಬುದ್ಧನೂ ಅಂತಹ ಹಲವರು ಬುದ್ಧರಲ್ಲೊಬ್ಬನೆಂದೂ ಬೌದ್ಧರ ಅಚಲವಾದ ನಂಬಿಕೆ. ಬುದ್ಧನೆಂದರೆ ಮನುಷ್ಯನಾಗಿ ಹುಟ್ಟಿ ಪರಿಪೂರ್ಣತೆಯನ್ನು ಸಾಧಿಸಿದ ಶೀಲಸಂಪನ್ನನೇ ಹೊರತು, ಅತಿಮಾನುಷ ವ್ಯಕ್ತಿಯೇನೂ ಅಲ್ಲವೆಂದು ಬೌದ್ಧರು ಭಾವಿಸಿದ್ದಾರೆ. ಬುದ್ಧನೆಂಬುದು ತತ್ತ್ವಸಾಕ್ಷಾತ್ಕಾರದ ಒಂದು ಉಚ್ಚದಶೆಯ ಹೆಸರೇ ಹೊರತು, ಅದು ವ್ಯಕ್ತಿಯ ನಾಮಧೇಯವಲ್ಲ. ಮನುಷ್ಯ ಪ್ರಯತ್ನದಲ್ಲಿ ಎಷ್ಟುಮಟ್ಟಿನ ವಿವೇಕವನ್ನೂ, ಜ್ಞಾನವನ್ನೂ, ಸಚ್ಚಾರಿತ್ರವನ್ನೂ ಸಾಧಿಸುವುದು ಶಕ್ಯವೋ ಅಷ್ಟನ್ನೂ ಸಾಧಿಸಿ ಲೋಕೋದ್ಧಾರ ದೀಕ್ಷೆಯನ್ನು ತಳೆದ ಮಹಾನುಭಾವನಿಗೆ ಬುದ್ಧನೆಂಬ ಹೆಸರೆಂಬುದು ಬೌದ್ಧರ ಹೇಳಿಕೆ. ಇಂತಹ ಸ್ಥಿತಿಯನ್ನು ಪಡೆಯುವುದಕ್ಕೆ ಮೊದಲು ಆ ಸಾಧಕನನ್ನು ಬೋಧಿಸತ್ವನೆಂದು ಕರೆಯುವುದು ಬೌದ್ಧರ ಸಂಪ್ರದಾಯವಾಗಿದೆ. ದೀಪಂಕರ ಬುದ್ಧ ಮುಂತಾದವರೂ, ಗೌತಮ ಬುದ್ಧನೂ, ಬೋಧಿಸತ್ವರಾಗಿ ಸ್ವರ್ಗಲೋಕದಲ್ಲಿದ್ದು ಆ ಬಳಿಕ ಮನುಷ್ಯರಾಗಿ ಭೂಲೋಕದಲ್ಲಿ ಜನಿಸಿ ತಮ್ಮ ಸಾಧನಾಬಲದಿಂದ ಬುದ್ಧರಾದವರು. ಮುಂದೆ ಮೈತ್ರೇಯ ಬುದ್ಧ ಮುಂತಾದವರೂ ಇದೇ ರೀತಿಯಲ್ಲಿ ಬುದ್ಧರಾಗುವರು. ಆದಕಾರಣ, "ಇದುವರೆಗೆ ಜನ್ಮ

ಪೆತ್ತಿರುವ ಬುದ್ಧರುಗಳನ್ನೂ, ಇನ್ನೂ ಅನಾಗತರೆನಿಸಿ ಮುಂದೆ ಜನ್ಮವೆತ್ತುವವರಾಗಿರುವ ಬುದ್ಧರುಗಳನ್ನೂ, ಈ ಕಲ್ಪದಲ್ಲಿ ಜನ್ಮವೆತ್ತಿದವರಾದ ಈಗಿನ ಬುದ್ಧರುಗಳನ್ನೂ ಸ್ಮರಿಸಿ ನಾನು ವಂದನೆಗಳನ್ನು ಸಮರ್ಪಿಸುವೆನು "† ಎಂಬುದೇ ಬೌದ್ಧರ ಪ್ರಾರ್ಥನೆ. ಈಗಿನ ಭದ್ರಕಲ್ಪದಲ್ಲಿ ಅವತರಿಸಿದ ಗೌತಮಬುದ್ಧನು ಬೋಧಿಸತ್ವನಾಗಿ ಅಸಂಖ್ಯಾತವಾದ ಅನೇಕ ಜನ್ಮಗಳನ್ನೆತ್ತಿ ಕೊನೆಗೆ ತುಷಿತವೆಂಬ ಸ್ವರ್ಗದಲ್ಲಿದ್ದನೆಂದೂ, ಆ ಬಳಿಕ ಕೊನೆಯ ಸಾರಿ ಮನುಷ್ಯನಾಗಿ ಹುಟ್ಟಿ ಬುದ್ಧನಾದನೆಂದೂ, ಬುದ್ಧನಾದವನಿಗೆ ಕರ್ಮಬಂಧನವೂ ಪುನರ್ಜನ್ಮವೂ ಇಲ್ಲವೆಂದೂ, ನಿರ್ವಾಣಸುಖವು ಆತನಿಗೆ ಕರಗತವೆಂದೂ ಬೌದ್ಧಗ್ರಂಥಗಳು ಸಾರುತ್ತವೆ. ಗೌತಮನಿಗೆ ಮೊದಲು ನಾನಾಕಲ್ಪಗಳಲ್ಲಿಯೂ ಒಟ್ಟು ಇಪ್ಪತ್ತೇಳುಮಂದಿ ಬುದ್ಧರುಗಳಿದ್ದರೆಂದೂ, ಅವರಲ್ಲಿ ದೀಪಂಕರನು ನಾಲ್ಕನೆಯವನೆಂದೂ, ಆತನ ತರುವಾಯ ಕೌಂಡಿನ್ಯ, ಮಂಗಳ, ಸುಮನಸ, ರೈವತ, ಶೋಭಿತ, ಅನವಮದರ್ಶಿ, ಪದ್ಮ, ನಾರದ, ಪದ್ಮೋತ್ತರ, ಸುಮೇಧ, ಸುಜಾತ, ಪ್ರಿಯದರ್ಶಿ, ಅರ್ಥದರ್ಶಿ, ಧರ್ಮದರ್ಶಿ, ಸಿದ್ಧಾರ್ಥ, ತಿಷ್ಯ, ಪುಷ್ಯ, ವಿಪಶ್ಯಿ, ಶಿಖಿ, ವಿಶ್ವಭೂ, ಕ್ರಕುಚಂದ, ಕನಕಮುನಿ, ಕಾಶ್ಯಪ ಈ ಇಪ್ಪತ್ತುಮೂರು ಮಂದಿ ಬುದ್ಧರು ಅವತರಿಸಿದರೆಂದೂ, ಆ ಬಳಿಕ ಗೌತಮ ಬುದ್ಧನು ಜನಿಸಿದನೆಂದೂ ಬೌದ್ಧಗ್ರಂಥಗಳಲ್ಲಿ ಹೇಳಿದೆ. ಬೋಧಿಸತ್ವನು ಕೊನೆಯ ಜನ್ಮದಲ್ಲಿ ಬುದ್ಧನಾಗುವನು. ಹಾಗೆ

---

† "ಯೇ ಚ ಬುದ್ಧಾ ಅತೀತಾ ಚ
ಯೇ ಚ ಬುದ್ಧಾ ಅನಾಗತಾ ।
ಪ್ರಚ್ಚುಪ್ಪನ್ನಾ ಚ ಯೇ ಬುದ್ಧಾ
ಅಹಂ ವಂದಾಮಿ ಸಬ್ಬದಾ ॥"

ಪಾಳಿಭಾಷೆಯಲ್ಲಿರುವ ಈ ಪ್ರಾರ್ಥನೆಯ ಶ್ಲೋಕವನ್ನು ಹೇಳುವುದು ಬೌದ್ಧ ಮತಸಂಬಂಧವಾದ ಸಂಪ್ರದಾಯ.

ಬುದ್ಧನಾಗುವುದಕ್ಕಾಗಿ ನಾನಾಜನ್ಮಗಳನ್ನೂ ಎತ್ತುವುದಕ್ಕೆ ಮೊದಲು (ತನ್ನ ಹಿಂದಿನ ಬುದ್ಧನ ಅನುಗ್ರಹಕ್ಕೆ ಪಾತ್ರನಾಗಿ) ತಾನೂ ಬುದ್ಧನಾಗಬೇಕೆಂಬುದು ತನ್ನ ಸಂಕಲ್ಪವೆಂದು ಪ್ರತಿಜ್ಞೆ ಮಾಡಬೇಕಂತೆ. ಬೋಧಿಸತ್ವ ಗೌತಮನು, ದೀಪಂಕರ ಬುದ್ಧನ ಕಾಲದಲ್ಲಿಯೇ ಸುಮೇಧನೆಂಬ ಹೆಸರಿನ ಮಾನವನಾಗಿದ್ದು, ಆತನ ಅನುಗ್ರಹಕ್ಕೆ ಪಾತ್ರನಾಗಿ ಆ ರೀತಿ ಪ್ರತಿಜ್ಞೆ ಮಾಡಿದ್ದನಂತೆ. ಆ ಬಳಿಕ ಅನೇಕ ಜನ್ಮಗಳು ಕಳೆದಮೇಲೆ ಆತನು ಬುದ್ಧನಾದನಂತೆ.

**ಈ ಅತಿಮಾನುಷ ವಿಚಾರಗಳನ್ನು ನಂಬುವ ವಿಷಯ**

ಈ ಬಗೆಯ ಅತಿಮಾನುಷ ವಿಚಾರಗಳನ್ನು ನಂಬಬಹುದೇ–ಎಂಬ ಪ್ರಶ್ನೆಯು ಹುಟ್ಟುವುದು, ವಿಜ್ಞಾನಶಾಸ್ತ್ರ ಮಂಡಿತವಾದ ಈಗಿನ ಕಾಲಕ್ಕೆ ಸಹಜವಾಗಿಯೇ ಇದೆ. ಮತಸ್ಥಾಪಕರ ವಿಚಾರದಲ್ಲಿ ಅತಿಮಾನುಷ ವ್ಯಾಪಾರಗಳನ್ನು ಸ್ವಲ್ಪವೂ ಸೂಚಿಸದೆ ವರ್ಣಿಸಿರುವ ಮತವಾವುದೂ ಈ ಪ್ರಪಂಚದಲ್ಲಿ ಹುಟ್ಟಿಲ್ಲ. ಬಹುಕಾಲಕ್ಕೊಮ್ಮೆ ಅವತರಿಸುತ್ತ ಬಂದಿರುವ ಮನುಜಶ್ರೇಷ್ಠರಾದ ಆ ಮಹನೀಯರ ಕ್ರಿಯಾಸಿದ್ಧಿಗಳನ್ನು–ಅವರ ಹಂತದಲ್ಲಿಯೇ ನಿಂತು ಅವರ ಕಣ್ಣುಗಳಿಂದಲೇ ತತ್ತ್ವಸಾಕ್ಷಾತ್ಕಾರವನ್ನು ಪಡೆಯಲಾರದ—ಸಾಮಾನ್ಯರ ಶಕ್ತಿ ಸಾಮರ್ಥ್ಯಗಳ ಮಾನದಂಡದಿಂದಲೇ ಅಳೆಯುವುದು ಯುಕ್ತವೇ ಎಂಬುವನ್ನು ನಿಷ್ಪಕ್ಷಪಾತ ಬುದ್ಧಿಯಿಂದ ಪರ್ಯಾಲೋಚಿಸಿ ನೋಡಬೇಕಾದುದೂ ಆವಶ್ಯಕ. ಇದೂ ಹಾಗಿರಲಿ. ವಿಜ್ಞಾನ ಶಾಸ್ತ್ರ ವಿರುದ್ಧವಾದ ಅತಿಮಾನುಷ ವಿಚಾರಗಳಲ್ಲಿ ವಿಶ್ವಾಸವನ್ನಿಡಲಾರದ ಪ್ರತ್ಯಕ್ಷ ಪ್ರಮಾಣಪ್ರಿಯರಾದ ಅನೇಕ ಪಾಶ್ಚಿಮಾತ್ಯರು ಕೂಡ ಭಗವಂತನಾಗಲಿ ಪರಲೋಕವಾಗಲಿ ಇಲ್ಲವೆಂದು ಹೇಳಿಲ್ಲ; ಭಗವಂತನೂ ಪರಲೋಕವೂ ಇರುವ ವಿಚಾರವನ್ನು ನಂಬಲು ತಮಗೆ ತಕ್ಕಷ್ಟು ಕಾರಣಗಳು ತೋರಿಬಂದಿಲ್ಲವಾದುದರಿಂದ ಆ ವಿಚಾರದಲ್ಲಿ ತಾವು

ತ್ರಿಕರಣಶುದ್ಧಿಯಿಂದ ಕೂಡಿದ ಸಂಶಯಾತ್ಮಕರೆಂದು ಮಾತ್ರವೇ ಹೇಳಿದ್ದಾರೆ.* ಅಲ್ಲದೆ ಆ ರೀತಿ ಮಾಡುವುದರಲ್ಲಿ ಕೂಡ, ಆದಿ ಕಾರಣವಾದ ಆವುದೊಂದು ವಸ್ತುವೂ ಇಲ್ಲದೆ ಸೃಷ್ಟಿಯು ನಡೆದು ಮುಂದುವರಿದ ಬಗೆ ಹೇಗೆಂಬುದು ದುರವಗಾಹ್ಯವಾದ ಗಭೀರ ಸಮಸ್ಯೆಯೆಂದು ಅವರು ಒಪ್ಪಿಕೊಂಡಿದ್ದಾರೆ. ವಾಸ್ತವಸ್ಥಿತಿಯು ಹೀಗಿರುವುದರಿಂದ, ಬುದ್ಧನ ವಿಚಾರದಲ್ಲಿಯೇ ಆಗಲಿ ಅಥವಾ ಇತರ ಮತಸ್ಥಾಪಕರ ವಿಚಾರದಲ್ಲಿಯೇ ಆಗಲಿ ಸೂಚಿತವಾಗಿರುವ ಅತಿ ಮಾನುಷ ವ್ಯಾಪಾರಗಳು ಸಂಭಾವ್ಯವೆಂದು ಅಧಿಕಾರವಾಣಿ ಯಿಂದ ಸೂಚಿಸುವುದು ಸುತರಾಂ ಸಾಧ್ಯವಿಲ್ಲ. ಆದಾಗ್ಯೂ, ಆ ಅತಿಮಾನುಷ ವ್ಯಾಪಾರಗಳನ್ನು ನಂಬದವರು ಕೂಡ ವಿಸ್ಮಿತರಾಗಿ ತಲೆದೂಗುವಷ್ಟು ಅಮೋಘ ವಿಚಾರಗಳು ಅವರೆಲ್ಲರ ಜೀವನಗಳ ಲ್ಲಿಯೂ ಯಥೇಷ್ಟವಾಗಿವೆ.

ಬೋಧಿಸತ್ವನು ಸುಮೇಧನೆಂಬ ಹೆಸರಿನಿಂದ ಕೂಡಿ ದೀಪಂಕರ ಬುದ್ಧನ ಅನುಗ್ರಹಕ್ಕೆ ಪಾತ್ರನಾದಂದಿನಿಂದ ಗೌತಮ ಬುದ್ಧನಾಗುವ ವರೆಗೂ, ಆತನು ನಾನಾ ಜನ್ಮಗಳನ್ನು ಪಡೆಯಬೇಕಾಯಿತೆಂಬ

---

* ದಿವಂಗತರಾದ ಲಾರ್ಡ್ ಮಾರ್ಲಿ ಮುಂತಾದ "ಫ್ರೀ ಥಿಂಕರ್ಸ್" ಎಂಬ ಗುಂಪಿನವರ ಹೇಳಿಕೆಯನ್ನು ಇದಕ್ಕೆ ನಿದರ್ಶನವಾಗಿ ಸೂಚಿಸಬಹುದು. ತಮ್ಮ ಮೇಧಾಶಕ್ತಿಯಿಂದ ಜಗತ್ತನ್ನೇ ವಿಸ್ಮಯಗೊಳಿಸಿರುವ ಲಾರ್ಡ್ ಮಾರ್ಲಿ ಯವರು "Those who agree with the present writer, for example, are not sceptics. They openly reject whatever propositions they hold to be beyond the reach and compass of the knowable, and whatever documents, records and transactions are unverified and unsupported by evidence and rules of evidence." ಎಂದು ಹೇಳಿದ್ದಾರೆ.—*On compromise* by John Viscount Morley, O.M., P.C. (pages 97 and and 98.)

ಅಂಶವನ್ನು ಹಿಂದೆಯೇ ಸೂಚಿಸಲಾಯಿತಷ್ಟೆ. ಆ ಜನ್ಮಗಳ ವಿಚಾರವೂ, ಕರ್ಮವಿಪಾಕಕ್ಕನುಸಾರವಾಗಿ ಸಂಭವಿಸಿದ ಆ ಜನ್ಮಗಳ ಸುಖದುಃಖಗಳಲ್ಲೆಲ್ಲ ಬೋಧಿಸತ್ವನು ಸಾಧಿಸಿದ ಶೀಲ ಪರಿಷ್ಕರಣಗಳ ವಿಚಾರವೂ ಜಾತಕ ಕಥೆಗಳಲ್ಲಿ ನಿರೂಪಿತವಾಗಿವೆ. ಇವುಗಳನ್ನು ಯಥಾವತ್ತಾಗಿ ನಂಬಲು ಸಮ್ಮತಿಸದೆ, ಬುದ್ಧನು ಅದ್ಭುತಚೇತನನಾದ ಐತಿಹಾಸಿಕ ವ್ಯಕ್ತಿಯೆಂಬ ಅಂಶವನ್ನು ಮಾತ್ರವೇ ಅಂಗೀಕರಿಸುವ ಇಷ್ಟವುಳ್ಳವರೂ ಸಹ, ಸಾಂಕೇತಿಕವಾಗಿ ಇವುಗಳಲ್ಲಿ ಅಡಗಿರುವ ಅದ್ಭುತವಾದ ಭಾವನಾ ಚತುಷ್ಟಯವನ್ನು ಮೆಚ್ಚಿ ತಲೆದೂಗಲೇಬೇಕು.

ಅದ್ಭುತವಾದ ಭಾವನಾ ಚತುಷ್ಟಯ

ಮೊದಲನೆಯದು: ಬೋಧಿಸತ್ವನು ಆನೆ, ಆಮೆ, ಮುಂತಾದ ಪ್ರಾಣಿಗಳ ಜನ್ಮವನ್ನೂ ಪಡೆದಿದ್ದನೆಂದು ಜಾತಕ ಕಥೆಗಳಲ್ಲಿ ಹೇಳಿರುವುದರಿಂದ, ಪ್ರಾಣಿಗಳೂ ಮನುಷ್ಯರ ಕರುಣೆಗೆ ಪಾತ್ರಗಳೆಂಬ ಅಂಶವು ಪರೋಕ್ಷವಾಗಿ ಸೂಚಿತವಾಗುತ್ತದೆ. ಇಲ್ಲವಾದರೆ ಬೋಧಿಸತ್ವನಂತಹವನಿಗೆ ಪ್ರಾಣಿಗಳ ಜನ್ಮಸಂಬಂಧವೇ ಕಲ್ಪಿತವಾಗುತ್ತಿರಲಿಲ್ಲ. ಎರಡನೆಯದು: ಸದ್ಗುಣ ಮಂಡಿತವಾದ ಮನುಷ್ಯತ್ವವು ಬುದ್ಧನಿಗೆ ಕೊನೆಯದಾಗಿ ಬಂದಿತೆಂದೂ, ಬುದ್ಧನಾಗುವ ಮೊದಲು ಬೋಧಿಸತ್ವನು ತುಷಿತವೆಂಬ ಸ್ವರ್ಗದಲ್ಲಿದ್ದೂ ಅಲ್ಲಿ ಬುದ್ಧನಾಗದೆ ಭೂಲೋಕದಲ್ಲಿ ಮನುಷ್ಯನಾಗಿ ಹುಟ್ಟಿ ಬುದ್ಧನಾದನೆಂದೂ ಹೇಳಿರುವುದರಿಂದ ಮನುಷ್ಯತ್ವದ ಶ್ರೇಷ್ಠತೆಯು ಮಹತ್ತರವಾದುದೆಂದು ಸೂಚಿತವಾಗುತ್ತದೆ. ಮೂರನೆಯದು: ದೀಪಂಕರ ಬುದ್ಧನ ಕಾಲದಿಂದಲೂ ಬೋಧಿಸತ್ವನು ನಿರ್ವಾಣವನ್ನು ಪಡೆಯುವ ಆಶೆಯನ್ನಿಟ್ಟುಕೊಂಡಿದ್ದನೆಂದೂ, ನಿರ್ವಾಣಕ್ಕೆ ಅಧಿಕಾರಿಯಾಗಲು ಅಂತಹ ಶ್ರೇಷ್ಠವ್ಯಕ್ತಿಗೆ ಕೂಡ ಅವನ ಕೊನೆಯ ಜನ್ಮದಲ್ಲಿ ಆರು ವರುಷಗಳ ಕಾಲವು ಹಿಡಿಯಿತೆಂದೂ ಹೇಳಿರುವುದರಿಂದ ನಿರ್ವಾಣವು ಎಷ್ಟು ದುರ್ಲಭವಾದುದೆಂಬುದು ವ್ಯಕ್ತವಾಗುತ್ತದೆ. ನಾಲ್ಕನೆಯದು: ದೀಪಂಕರ ಬುದ್ಧನ ಕಾಲದಿಂದ ಹಿಡಿದು ಆತನ ತರುವಾಯ ಇಪ್ಪತ್ತ

ಮೂರು ಮುಂದಿ ಬುದ್ಧರು ಜನ್ಮವೆತ್ತುವವರೆಗೂ ಅಸಂಖ್ಯಾತ ಸಂವತ್ಸರಗಳ ಕಾಲ ನಾನಾ ಜನ್ಮಗಳನ್ನೂ ಎತ್ತಿ ಶೀಲ ಶುದ್ಧಿಯನ್ನು ಸಂಪಾದಿಸಿದುದರ ಪರಿಣಾಮವು ನಿರ್ವಾಣವೆಂದು ಹೇಳಿರುವುದರಿಂದ ನಿರ್ವಾಣವು ಅನರ್ಘ್ಯವಾದುದೆಂಬ ಅಂಶವು ಸ್ಪಷ್ಟಪಡುತ್ತದೆ. ಇವು ನಾಲ್ಕೂ ಅದ್ಭುತವಾದ ಭಾವನೆಗಳೆಂದು ಸಮಸ್ತರೂ ಒಪ್ಪಲೇಬೇಕು. ಬುದ್ಧನ ಬೋಧನೆಯಲ್ಲಿ ಹೃದಯಂಗಮವಾಗಿ ಸೇರಿರುವ ಈ ನಾಲ್ಕು ಭಾವನೆಗಳನ್ನೂ, ಕಥಾರೂಪದಲ್ಲಿ ಜಾತಕಗಳು ಮನೋಹರವಾಗಿ ತಿಳಿಸುತ್ತವೆ. ಅತಿಮಾನುಷವಾದ ಯಾವ ಮಹಿಮೆಯನ್ನೂ ಬುದ್ಧನಿಗೆ ಹೊಂದಿಸದೆ ಆತನ ಜೀವನ ಚರಿತ್ರೆಯ ಘಟನಾವಳಿಗಳನ್ನು ವಿಮರ್ಶಿಸಿದರೂ ಸಹ, ಅವನ ಸದ್ಗುಣಗಳಿಗಾಗಿಯೂ ಆತನ ಸಾಧನೆಗಾಗಿಯೂ ಮೆಚ್ಚಿಕೆಯಿಂದ ತಲೆದೂಗುವಂತಾಗುವುದು; ಆತನು ಪಾವನ ಸ್ವರೂಪನಾದ ಶಕಪುರುಷನೆಂಬುದು ಖಚಿತವಾಗಿ ಗೋಚರವಾಗುವುದು.

— ೦ —

# ಎರಡನೆಯ ಅಧ್ಯಾಯ

---

## ಸಿದ್ಧಾರ್ಥನ ಜನನ

ಗೌತಮ ಬುದ್ಧನು ಜನಿಸಿದುದು, ಕಪಿಲವಸ್ತುವೆಂಬ ನಗರದಲ್ಲಿದ್ದ ಶಾಕ್ಯ ಮನೆತನದಲ್ಲಿ. ಆತನ ತಂದೆಯ ಹೆಸರು ಶುದ್ಧೋದನ.

**ಶಾಕ್ಯಮನೆತನ**

ಗೌತಮ ಬುದ್ಧನಿಗೆ ಜಾತಕರ್ಮದಲ್ಲಿಟ್ಟ ಹೆಸರು ಸಿದ್ಧಾರ್ಥನೆಂದು. ಆತನ ತಂದೆ ಶುದ್ಧೋದನನಿಗೆ ಶುಕ್ಲೋದನನೆಂದೂ, ದ್ರೋಣೋದನನೆಂದೂ, ಅಮೃತೋದನನೆಂದೂ ಮೂವರು ತಮ್ಮಂದಿರಿದ್ದರು. ಶುದ್ಧೋದನನಿಗೆ ಸಿದ್ಧಾರ್ಥನಲ್ಲದೆ ನಂದನೆಂಬ* ಮತ್ತೊಬ್ಬ ಮಗನೂ ಇದ್ದನು. ಶುಕ್ಲೋದನನಿಗೆ ಜಿನನೆಂದೂ ಭದ್ರನೆಂದೂ ಇಬ್ಬರು ಮಕ್ಕಳಿದ್ದರು. ದ್ರೋಣೋದನನಿಗೆ ಮಹಾನಾಮನೆಂದೂ ಅನಿರುದ್ಧನೆಂದೂ ಇಬ್ಬರು ಪುತ್ರರೂ, ಅಮೃತೋದನನಿಗೆ ದೇವದತ್ತನೆಂಬ ಪುತ್ರನೂ ಇದ್ದರೆಂದು ಕೆಲವು ಗ್ರಂಥಗಳಿಂದ ತಿಳಿಯಬರುತ್ತದೆ; ಆನಂದನು ಬುದ್ಧನ ನಾಲ್ವರು ಸೋದರತ್ತೆಯರಲ್ಲಿ ಹಿರಿಯವಳ ಮಗ. ಮುಂದೆ ಗೌತಮ ಬುದ್ಧನಲ್ಲಿ ದೇವದತ್ತನಿಗೆ ದ್ವೇಷವು ಮೂಡಿ ವೃದ್ಧಿಯಾದಂತೆಯೇ

---

* ನಂದನು ಸಿದ್ಧಾರ್ಥನ ಬಲತಾಯಿಯ ಮಗ. ಶುದ್ಧೋದನನಿಗೆ ಸಿದ್ಧಾರ್ಥನೆಂದೂ, ನಂದನೆಂದೂ ಇಬ್ಬರೇ ಮಕ್ಕಳಿದ್ದರೆಂದು ಕೆಲವು ಗ್ರಂಥಗಳಲ್ಲಿಯೂ, ಸಿದ್ಧಾರ್ಥ, ನಂದ, ರೂಪನಂದ ಎಂಬ ಮೂವರು ಮಕ್ಕಳಿದ್ದರೆಂದು ಕೆಲವು ಗ್ರಂಥಗಳಲ್ಲಿಯೂ ಹೇಳಿದೆ. ನಂದನು ಬಹಳ ಸುಂದರನಾಗಿದ್ದುದರಿಂದ ಅವನಿಗೆ ಸುಂದರನಂದನೆಂಬ ಅಡ್ಡಹೆಸರೂ ಇದ್ದಂತೆ ತಿಳಿಯಬರುತ್ತದೆ. ರೂಪನಂದನೆಂಬುದೂ ಅದರಂತೆ ಮತ್ತೊಂದು ಅಡ್ಡಹೆಸರೋ ಅಥವಾ ನಂದನಿಗೆ ರೂಪನಂದನೆಂಬ ಸಹೋದರನೂ ಒಬ್ಬನಿದ್ದನೋ ಎಂಬುದನ್ನು ನಿರ್ದಿಷ್ಟವಾಗಿ ಹೇಳುವಂತಿಲ್ಲ.

ಅವನ ಮೈದುನನಾದ ಆನಂದನಲ್ಲಿ ಅವನಿಗೆ ಪ್ರೀತಿಯು ಹುಟ್ಟಿ ವೃದ್ಧಿಹೊಂದಿತು.

ಶಾಕ್ಯಮುನಿತನದ ಮೂಲಪುರುಷನಾದ ಇಕ್ಷ್ವಾಕುವೆಂಬಾತನ ತರುವಾಯ ಆತನ ಸಂತತಿ ಪರಂಪರೆಗೆ ಸೇರಿದ ವಿರೂಢಕನೆಂಬ ರಾಜನು ಎರಡನೆಯ ಮದುವೆ ಮಾಡಿಕೊಂಡನು.

**ಶಾಕ್ಯರೆಂದು ಹೆಸರು ಬಂದುದಕ್ಕೆ ಕಾರಣ**

ಎರಡನೆಯ ಹೆಂಡತಿಯ ಹೊಟ್ಟೆಯಲ್ಲಿ ಗಂಡು ಮಗುವು ಹುಟ್ಟಿದರೆ ಅದಕ್ಕೆ ವಿರೂಢಕನ ಸಿಂಹಾಸನದ ಅಧಿಕಾರವೇ ಹೊರತು, ಆತನ ಮೊದಲನೆಯ ಹೆಂಡತಿಯ ಮಕ್ಕಳಾದ ಉಲ್ಕಾಮುಖ, ಕರಕರ್ಣ, ಹಸ್ತಿಸಾಜಕ, ನೂಪುರ ಎಂಬ ನಾಲ್ವರಲ್ಲಿ ಯಾರೊಬ್ಬರಿಗೂ ಪ್ರಭುತ್ವವು* ದೊರೆಯಕೂಡದೆಂಬ ಒಪ್ಪಂದದಮೇಲೆ ಆ ವಿವಾಹವು ನಡೆಯಿತು. ಎರಡನೆಯ ಹೆಂಡತಿಯು ಗಂಡುಮಗುವನ್ನು ಪಡೆದು ಅವನಿಗೆ ರಾಜ್ಯನಂದನೆಂದು ಹೆಮ್ಮೆಯಿಂದ ಹೆಸರಿಡಿಸಿದಳು; ಸವತಿಯ ಮಕ್ಕಳಿಗೆ ಪಟ್ಟವಾಗದೆ ತಪ್ಪಿ ತನ್ನ ಮಗನಿಗೆ ರಾಜ್ಯಲಾಭವಾಗಬೇಕೆಂಬ ಬಯಕೆಯಿಂದಲೇ ತೃಪ್ತಳಾಗದೆ, ಅವರು ದೇಶಭ್ರಷ್ಟರಾಗಬೇಕೆಂದೂ ಕೋರಿದಳು. ವಿರೂಢಕರಾಜನು ಅವಕ್ಕೂ

---

* ಇಕ್ಷ್ವಾಕುವಿನಿಂದ ವಿರೂಢಕನವರೆಗೂ ಆ ಸಂತತಿಯವರೆಲ್ಲರೂ ಪಾತಾಳ ಲೋಕದಲ್ಲಿ ಆಳುತ್ತಿದ್ದರೆಂದೂ, ಅವರು ಸೂರ್ಯವಂಶೀಯರೆಂದೂ ಕೆಲವು ಬೌದ್ಧಗ್ರಂಥಗಳಲ್ಲಿ ಹೇಳಿದೆ. ಪೂರ್ವಕಾಲದ ರಾಜರುಗಳಲ್ಲಿ ಅನೇಕರು ಸೂರ್ಯವಂಶ ಚಂದ್ರವಂಶಗಳವರೆಂದೂ, ಅವರಿಗೆ ನಾನಾ ಲೋಕಗಳ ಮೇಲೆ ಅಧಿಪತ್ಯವಿದ್ದಿತೆಂದೂ ಕಟ್ಟುಕಥೆಗಳು ಹೊರಡುತ್ತಿದ್ದುದು ವಾಡಿಕೆ. ಇಕ್ಷ್ವಾಕು ಸಂತತಿಯವರು ಸೂರ್ಯನ ಸಂಬಂಧವೇನೂ ಇಲ್ಲದೆ ಅವುದೋ ಒಂದು ರಾಜ್ಯದಲ್ಲಿ ಪ್ರಭುತ್ವ ಮಾಡುತ್ತಿದ್ದರೆಂದು ತೋರುತ್ತದೆ. ಆದುದರಿಂದ ಪಾತಾಳ ಲೋಕದ ವಿಚಾರವನ್ನೂ ಸೂರ್ಯವಂಶದ ವಿಚಾರವನ್ನೂ ಬಿಡುವುದೇ ಸರ್ವೋತ್ತಮವೆಂದು ಕಾಣುತ್ತದೆ.

ಸಮ್ಮತಿಸಿ ಪುತ್ರಸ್ನೇಹಕ್ಕಿಂತಲೂ ಪತ್ನಿಯ ಪ್ರೇಮವೇ ಮಿಗಿಲೆಂದು ಭಾವಿಸಿದನು. ವಿರೂಢಕನ ನಾಲ್ವರು ಮಕ್ಕಳೂ ತಮ್ಮ ಸಹೋದರಿಯರೊಡನೆಯೂ ಅನೇಕ ಮಂದಿ ಪರಿಜನರೊಡನೆಯೂ, ಕಪಿಲ ಮಹರ್ಷಿಯ ಆಶ್ರಮಕ್ಕೆ ಹೋಗಿ ಆತನ ಆಶ್ರಯವನ್ನು ಪಡೆದರು. ಕಪಿಲಮಹರ್ಷಿಯು ರೋಹಿಣೀ ನದಿಯ ತೀರದಲ್ಲಿ ಅವರಿಗೆ ಪ್ರಶಸ್ತವಾದೊಂದು ಪ್ರದೇಶವನ್ನು ತೋರಿಸಿ ಅಲ್ಲಿ ರಾಜಧಾನಿಯನ್ನು ನಿರ್ಮಿಸಿ ರಾಜ್ಯವನ್ನು ಕಟ್ಟಬೇಕೆಂದು ಬೆಸಸಿದನು. ಅವರು ಆತನ ಆಜ್ಞೆಯನ್ನು ನೆರವೇರಿಸಿ, ತಾವು ನಿರ್ಮಿಸಿದ ನಗರಕ್ಕೆ ಕಪಿಲವಸ್ತುವೆಂದು ಹೆಸರಿಟ್ಟು, ಕಪಿಲ ಮಹರ್ಷಿಯಲ್ಲಿ ತಮಗಿದ್ದ ಕೃತಜ್ಞತೆಯನ್ನು ತೋರಿಸಿದರು. ಆ ಬಳಿಕ ಸ್ವಲ್ಪ ಕಾಲದಮೇಲೆ ವಿರೂಢಕ ರಾಜನು ತನ್ನ ಮಕ್ಕಳ ಗತಿಯೇನಾಯಿತೆಂಬುದನ್ನು ವಿಚಾರಿಸಬೇಕೆಂದು ತನ್ನ ಮಂತ್ರಿಗಳಿಗೆ ಅಪ್ಪಣೆಮಾಡಿದನು. ತನ್ನ ಮಕ್ಕಳು ಕಪಿಲವಸ್ತುವಿನಲ್ಲಿ ರಾಜ್ಯಭಾರ ಮಾಡುತ್ತಿದ್ದ ವಾರ್ತೆಯನ್ನು ಕೇಳಿ, "ನನ್ನ ಮಕ್ಕಳು ಅಸಮಸಾಹಸಿಗಳು; ಅವರು ಶಕ್ಯರು, ಶಕ್ಯರು" ಎಂದನಂತೆ. ಆದಕಾರಣ, ಆತನ ಆ ನಾಲ್ವರು ಪುತ್ರರಿಗೂ ಶಕ್ಯರೆಂದೂ, ಅವರ ಸಂತತಿಯವರಿಗೆ ಶಾಕ್ಯರೆಂದೂ ಹೆಸರು ಬಂದಿತು. ಶಾಕ್ಯರ ರಾಜ್ಯವು ಪೂರ್ವದಿಕ್ಕಿನಲ್ಲಿ ರೇವತೀ ನದಿಯಿಂದಲೂ, ಉತ್ತರಕ್ಕೆ ನೇಪಾಳ ರಾಜ್ಯದ ಪರ್ವತಗಳಿಂದಲೂ, ಪಶ್ಚಿಮ ದಿಕ್ಕುಗಳಲ್ಲಿ ಅಚಿರಾವತೀ ನದಿಯಿಂದಲೂ ಕೂಡಿ ಶೋಭಿಸುತ್ತಿದ್ದಿತು. ಅಚಿರಾವತೀ ನದಿಯ ಈಗಿನ ಹೆಸರು ರಪ್ತೀ ನದಿಯೆಂದು. ಶಾಕ್ಯ ಮನೆತನಕ್ಕೆ ಸೇರಿದವನಾದ ಶುದ್ಧೋದನ ರಾಜನೂ ಯಥಾಕಾಲದಲ್ಲಿ ಕಪಿಲವಸ್ತು ನಗರದಲ್ಲಿ ಪ್ರಭುತ್ವ ಮಾಡುತ್ತಿದ್ದನು.*

---

* ಶುದ್ಧೋದನನು ರಾಜನಾಗಿರಲಿಲ್ಲವೆಂದೂ, ಆತನೊಬ್ಬ ಧನಿಕನಾದ ಭೂಸ್ವಾಮಿ (ಜಮೀನ್ದಾರನು) ಮಾತ್ರವೇ ಎಂದೂ ಕೆಲವರ ಅಭಿಪ್ರಾಯ. ಗೌತಮ ಬುದ್ಧನೇ ಒಮ್ಮೆ ಹೇಳಿಕೊಂಡಂತೆ ಬುದ್ಧವಂಶವೆಂಬ ಗ್ರಂಥದಲ್ಲಿ ಚಿತ್ರಿತ

ಶುದ್ಧೋದನನ ತಂದೆಯಾದ ಸಿಂಹ ಹನು ರಾಜನು ಪ್ರಜಾರಂಜನ ಪರಾಯಣನಾಗಿ ರಾಜ್ಯವಾಳುತ್ತಿದ್ದನು. ಕಪಿಲವಸ್ತುವಿನ ನೆರೆಯ ರಾಜ್ಯವೊಂದರಲ್ಲಿ ಪ್ರಭುತ್ವಮಾಡುತ್ತಿದ್ದ ಸುಪ್ರಬುದ್ಧ ರಾಜನಿಗೆ ಮಹಾ ಪ್ರಜಾಪತೀದೇವಿಯೆಂದೂ ಮಾಯಾದೇವಿಯೆಂದೂ ಸುಂದರಿಯರಾದ ಈರ್ವರು ಪುತ್ರಿಯರಿದ್ದರು.* ಅವರೀರ್ವರಲ್ಲಿ ಮಹಾಪ್ರಜಾಪತೀದೇವಿಯುಂತೂ, ಭುವನೈಕ ಸುಂದರಿಯೆನಿಸು

ರಾಜ ದಂಪತಿಗಳು

---

ವಾಗಿರುವ ಆತನ ವೈಭವದ ವಿವರವನ್ನೂ, ಸಿದ್ಧಾರ್ಥನು ರಾಜಪುತ್ರನೆಂದ ಅನೇಕ ಬೌದ್ಧಗ್ರಂಥಗಳಲ್ಲಿ ಹೇಳಿರುವುದನ್ನೂ, ನೋಡಿದರೆ ಆ ಅಭಿಪ್ರಾಯವು ಸಾಧುವಲ್ಲವೆಂದು ತೋರುತ್ತದೆ. ಅಶ್ವಘೋಷನು, "ಅನೇಕ ರಾಜರುಗಳಿಗೆ ಚಕ್ರವರ್ತಿಯೆನಿಸಿ ಮೂರ್ಧಾಭಿಷಿಕ್ತನಾದವನೂ, ಸೂರ್ಯವಂಶೀಯನೂ, ಶ್ವೇತಚ್ಛತ್ರ ವಿರಾಜಿತನೂ, ಶುದ್ಧಾಂತಃಕರಣವುಳ್ಳವನೂ ದಯಾರ್ದ್ರಚಿತ್ತನೂ ಆದ ಶುದ್ಧೋದನನೆಂಬ ಹೆಸರಿನ ರಾಜನು ಪ್ರಭುತ್ವ ಮಾಡುತ್ತಿದ್ದನು" ಎಂದು ಕಂಠೋಕ್ತವಾಗಿ ಒಂದು ಶ್ಲೋಕದಲ್ಲಿ ಹೇಳಿದ್ದಾನೆ. ಆ ಶ್ಲೋಕವಾವುದೆಂದರೆ:—"ಮಹೀಭೃತಾಂ ಮೂರ್ಧ್ನಿಕೃತಾಭಿಷೇಕಃ । ಶುದ್ಧೋದನೋ ನಾಮ ನೃಪೋऽರ್ಕಬಂಧುಃ ॥ ಶುದ್ಧಾಶಯೋ ಯಃ ಸ್ಫುಟ ಪುಂಡರೀಕೋ । ದಯಾರ್ದ್ರಚೇತಾಸ್ತದಲಂಚಕಾರ ॥ ೯ ॥"

ಶುದ್ಧೋದನನು ಚಕ್ರವರ್ತಿಯಾಗಿದ್ದನೆಂಬುದು ಅತಿಶಯೋಕ್ತಿಯಾಗಿದ್ದರೂ ಚುಲ್ಲವಗ್ಗ ಮುಂತಾದುವುಗಳಲ್ಲಿ ಹೇಳಿರುವುದನ್ನು ನೋಡಿದರೆ ಆತನು ರಾಜನಾಗಿದ್ದನೆಂದು ಮಾತ್ರ ಧಾರಾಳವಾಗಿ ಹೇಳಬಹುದು. ಈ ಅಂಶಗಳನ್ನೆಲ್ಲಾ ಪರ್ಯಾಲೋಚಿಸಿದರೆ ಆತನು ರಾಜನಾಗಿರಲಿಲ್ಲವೆನ್ನುವುದಕ್ಕೆ ತಕ್ಕಷ್ಟು ಕಾರಣಗಳಿಲ್ಲ.

* ಹಿರಿಯಳ ಹೆಸರು ಮಾಯಾದೇವಿಯೆಂದೂ, ಕಿರಿಯಳ ಹೆಸರು ಮಹಾಮಾಯೆಯೆಂದೂ ಕೆಲವು ಗ್ರಂಥಗಳಲ್ಲಿ ಹೇಳಿದೆ. ಆದರೂ ಮೇಲೆ ಸೂಚಿಸಿರುವ ಹೆಸರುಗಳೇ ಬಹುಜನ ಪಂಡಿತರಿಂದ ಅಂಗೀಕೃತವಾಗಿವೆ.

ವಷ್ಟು ಸುಂದರಿಯಾಗಿದ್ದಳು. ಸುಪ್ರಬುದ್ಧರಾಜನು ಶುದ್ಧೋದನನಿಗೆ ಅವರನ್ನು ಕೊಟ್ಟು ವಿವಾಹ ಮಾಡುವುದಾಗಿ ಸಿಂಹ ಹನು ರಾಜನಿಗೆ ಬಿನ್ನೈಸಿದನು. (ಆದರೆ ಶಾಕ್ಯಮನೆತನದಲ್ಲಿ ಒಬ್ಬ ಗಂಡಸು ಇಬ್ಬರು ಹೆಂಡತಿಯರನ್ನು ಮದುವೆಯಾಗುವುದಕ್ಕೆ ಶಾಕ್ಯರ ಸಂಪ್ರದಾಯಪ್ರಕಾರ ಸ್ವಲ್ಪವೂ ಅವಕಾಶವಿರಲಿಲ್ಲ.) ಮಾಯಾದೇವಿಯು ಚಕ್ರವರ್ತಿ ಲಕ್ಷಣಗಳಿಂದ ಕೂಡಿದ ಪುತ್ರನನ್ನು ಪ್ರಸವಿಸುವಳೆಂದು ಜ್ಯೋತಿಷ್ಕರು ಹೇಳಿದ್ದುದರಿಂದ ಸಿಂಹ ಹನು ರಾಜನು ಕಿರಿಯಳಾದರೂ ಅವಳನ್ನೇ ಸೊಸೆಯಾಗಿ ಸ್ವೀಕರಿಸಿ ಶುದ್ಧೋದನನ ವಿವಾಹವನ್ನು ನೆರವೇರಿಸಿದನು. ಆದರೂ ಲೋಕೈಕ ಸುಂದರಿಯಾದ ಮಹಾಪ್ರಜಾಪತೀದೇವಿಯನ್ನೂ ಮಗನಿಗೆ ತಂದುಕೊಳ್ಳಬೇಕೆಂಬ ಆಶೆಯು ಆತನನ್ನು ಬಿಡಲಿಲ್ಲ. ಅದಕ್ಕೆ ಅನುಕೂಲವೂ ದೊರೆಯಿತು. ಪಾಂಡವ ಪಂಗಡದವರೆಂಬ ಬೆಟ್ಟದಸೀಮೆಯ ಜನರು ಶಾಕ್ಯರ ನಾಡನ್ನು ಮುತ್ತಿ ದಾಂಧಲೆ ಮಾಡಲಾರಂಭಿಸಿದರು. ಅವರನ್ನು ಸೋಲಿಸಲು ಶುದ್ಧೋದನನನ್ನು ಕಳುಹಿಸಿ ಕಾಪಾಡಬೇಕೆಂದು ಶಾಕ್ಯರು ಸಿಂಹ ಹನುವನ್ನು ಪ್ರಾರ್ಥಿಸಿದರು. ವೀರಾಗ್ರೇಸರನಾದ ಆತನ ಪುತ್ರನಿಂದ ಹೊರಗಿನವರ ಹಾವಳಿಯು ನಿಂತಿತು. ಮಹಾಪ್ರಜಾಪತೀದೇವಿಯನ್ನು ತಂದು ಮದುವೆ ಮಾಡಲು ರಾಜಪುತ್ರನ ಶೌರ್ಯಕ್ಕೆ ಕಾಣಿಕೆಯಾಗಿ ಅನುಮತಿಯನ್ನು ತನಗೆ ಕೊಡಬೇಕೆಂದು ಸಿಂಹ ಹನು ರಾಜನು ಪ್ರಜೆಗಳನ್ನು ಪ್ರಾರ್ಥಿಸಿ, ಪ್ರಜಾಸತ್ತಾತ್ಮಕವಾದ ಪ್ರಭುತ್ವ ಕ್ರಮದಲ್ಲಿ ತನಗೆ ಪ್ರವೃತ್ತಿಯಿದ್ದುದನ್ನು ವ್ಯಕ್ತಪಡಿಸಿದನು. ಹಿಂದೆ ಮಹಾರಾಜ ದಶರಥನು ರಾಮನಿಗೆ ಪಟ್ಟಾಭಿಷೇಕ ಮಾಡಿಸುವುದಕ್ಕೆ ಪ್ರಜೆಗಳ ಅನುಮತಿಯನ್ನು ಕೇಳಿದ ಮನೋಹರವಾದ ಮಾದರಿಯನ್ನೇ ಅನುಸರಿಸಿ ಕೋಸಲದೇಶದ ಸಮೀಪದಲ್ಲಿದ್ದ ಕಪಿಲವಸ್ತು ರಾಜ್ಯದ ಸಿಂಹ ಹನು ರಾಜನು ಪ್ರಜೆಗಳ ಅನುಮತಿಯನ್ನು ಕೇಳಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಸುಂದರೀಮಣಿಯಾದ ಮಹಾಪ್ರಜಾಪತೀದೇವಿಯು ತನ್ನ ಸೊಸೆಯಾಗಬೇಕೆಂಬ ಆಸೆಯಿಂದ

ಅವನು ಆ ರೀತಿ ಸಮಯವನ್ನು ಕಾದಿದ್ದನು. ಪ್ರಜೆಗಳೂ ವಿಜಯೋತ್ಸವದ ಉತ್ಸಾಹಭರದಲ್ಲಿ, ಯಾವನೊಬ್ಬನಿಗೇ ಆಗಲಿ ಒಬ್ಬಳಿಗಿಂತ ಹೆಚ್ಚು ಮಡದಿಯರಿರುವುದು ಶಾಕ್ಯಸಂಪ್ರದಾಯ ವಿರುದ್ಧವೆಂಬ ಅಂಶವನ್ನೇ ಗಮನಿಸದೆ ರಾಜನ ಕೋರಿಕೆಯನ್ನು ಸಲ್ಲಿಸಿದರು. ಶುದ್ಧೋದನನ ಎರಡನೆಯ ಮದುವೆಯನ್ನು ಸಡಗರದಿಂದ ನೆರವೇರಿಸಿ ಆ ಬಳಿಕ ಸ್ವಲ್ಪಕಾಲದ ಮೇಲೆ ಸಿಂಹಹನು ರಾಜನು ಮೃತನಾದನು. ತರುವಾಯ ಶುದ್ಧೋದನನು ಸಿಂಹಾಸನವನ್ನೇರಿ, ಶತ್ರುಗಳನ್ನು ನಿಗ್ರಹಿಸಿ, ಧರ್ಮದಿಂದ ರಾಜ್ಯಭಾರ ಮಾಡಲಾರಂಭಿಸಿದರು. ಆತನ ಪಟ್ಟಮಹಿಷಿಯಾದ ಮಾಯಾದೇವಿಯು ಪ್ರಜೆಗಳಲ್ಲಿ ಮಾತೆಯಂತೆ ಹಿತಪ್ರವೃತ್ತಿಯುಳ್ಳವಳಾಗಿಯೂ, ಗುರುಹಿರಿಯರಲ್ಲಿ ಮೂರ್ತಿಮತಿಯಾದ ಭಕ್ತಿಯೋ ಎಂಬಂತೆ ವಿಧೇಯಳಾಗಿಯೂ, ತನ್ನ ಪ್ರಾಣೇಶನ ಕುಲದಲ್ಲಿ ಲಕ್ಷ್ಮಿಯಂತೆ ರಾರಾಜಿಸುತ್ತ ಆತನ ರಾಜ್ಯದಲ್ಲಿ ಉತ್ತಮ ದೇವತೆಯಂತೆ ಶೋಭಿಸುತ್ತಿದ್ದಳು.† ಗೌತಮ ಬುದ್ಧನಂತಹ ಜಗದ್ವಿಭೂತಿಯಾದ ಶಕಪುರುಷನಿಗೆ ತಕ್ಕ ತಂದೆತಾಯಿಗಳಾಗಿ ದಂಪತಿಗಳು ಸದ್ಗುಣಮಂಡಿತರಾಗಿದ್ದರು.

**ಪುತ್ರಾರ್ಥವಾಗಿ ವ್ರತಾಚರಣೆ**

ಸತ್ಸಂತಾನಕ್ಕಾಗಿ ವ್ರತನಿಯಮಗಳನ್ನು ಪರಿಪಾಲಿಸುವುದು ಭರತಖಂಡದಲ್ಲಿ ಬಹಳ ಪ್ರಾಚೀನಕಾಲದಿಂದಲೂ ಆಚರಣೆಯಲ್ಲಿರುವ ಪದ್ಧತಿಯಾಗಿದೆ. ಅದನ್ನನುಸರಿಸಿ ಸುಪುತ್ರನನ್ನು ಪಡೆಯುವ ಅಭಿಲಾಷೆಯು ಮಹಾರಾಣಿಯಾದ ಮಾಯಾದೇವಿಗೂ ಹುಟ್ಟಿತು. ಒಂದು ದಿನ ಮಾಯಾದೇವಿಯು ಅಭ್ಯಂಜನಮಾಡಿ ದಿವ್ಯದುಕೂಲವನ್ನುಟ್ಟು ದಿವ್ಯಾಭರಣ ಭೂಷಿತೆಯಾಗಿ ಅನೇಕ ಮಂದಿ

---

† "ಪ್ರಜಾಸು ಮಾತೇವ ಹಿತಪ್ರವೃತ್ತಾ ಗುರೌ ಜನೇ ಭಕ್ತಿರಿವಾನುವೃತ್ತಾ । ಲಕ್ಷ್ಮೀರಿವಾಧೀಶ ಕುಲೇ ಕೃತಾಭಾ ಜಗತ್ಯಭೂದುತ್ತಮದೇವತಾ ಸಾ ॥"

ದಾಸಿಯರಿಂದೊಡಗೂಡಿ ಶುದ್ಧೋದನ ರಾಜನ ಬಳಿಗೆ ಬಂದಳು. ಆತನು ಹೃಷ್ಟಮನಸ್ಕನಾಗಿ ಸಂಗೀತ ಶಾಲೆಯಲ್ಲಿ ಭದ್ರಾಸನದಲ್ಲಿ ಮಂಡಿಸಿದ್ದನು. ಸತ್ಪುತ್ರಲಾಭಕ್ಕಾಗಿ ತಾನೊಂದು ದೊಡ್ಡ ವ್ರತವನ್ನು ನೆರವೇರಿಸಲು ಅನುಜ್ಞೆಯನ್ನು ಕೊಡಬೇಕೆಂದು ಮಾಯಾದೇವಿಯು ತನ್ನ ಪತಿಯನ್ನು ಪ್ರಾರ್ಥಿಸಿದಳು. ತನ್ನ ಪತ್ನಿಯ ಸದುದ್ದೇಶವನ್ನು ಕಂಡು ಆತನಿಗೂ ಸಂತೋಷವಾಯಿತು. ಆತನು ಸಂತೋಷದಿಂದ ವ್ರತಾಚರಣೆಗೆ ಅನುಜ್ಞೆಯನ್ನಿತ್ತು, ವ್ರತಕ್ಕೆ ಬೇಕಾದ ಸಂಭರಗಳನ್ನೊದಗಿಸುವಂತೆ ಪರಿಜನರಿಗೆ ಆಜ್ಞೆಮಾಡಿದನು. ವ್ರತಾಚರಣೆಯು ಸಾಂಗವಾಗಿ ನೆರವೇರಿತು.

ಮಾಯಾದೇವಿಯ ಸ್ವಪ್ನ

ಮಹಾರಾಣಿಯಾದ ಮಾಯಾದೇವಿಯು ಗರ್ಭವನ್ನು ಧರಿಸಿದಳು. ಅವರಿಂದ ಒಟ್ಟು ಅರಮನೆಯೇ ಸಂತೋಷದಿಂದ ಕಳಕಳಿಸುವಂತೆ ತೋರಿತು. ಒಂದು ದಿನ ರಾತ್ರಿ ಮಾಯಾದೇವಿಯು ವಿಚಿತ್ರವಾದೊಂದು ಸ್ವಪ್ನವನ್ನು ಕಂಡಳು. ಲೋಕ ಪಾಲರಾದ ದೇವತೆಗಳು ತನ್ನನ್ನು ಹಿಮವತ್ಪರ್ವತದ ಮೇಲಕ್ಕೆ ಕರೆದುಕೊಂಡು ಹೋಗಿ ಸರೋವರದಲ್ಲಿ ಸ್ನಾನಮಾಡಿಸಿ ಬೆಳ್ಳಿಯ ಬೆಟ್ಟವೊಂದರ ಮೇಲಿದ್ದ ಚಿನ್ನದ ಅರಮನೆಯಲ್ಲಿ ದಿವ್ಯ ಪರ್ಯಂಕದಲ್ಲಿ ಮಲಗಿಸಿದಂತೆಯೂ, ಸೊಂಡಿಲಿನಲ್ಲಿ ಕಮಲ ಪುಷ್ಪವನ್ನು ಧರಿಸಿದ್ದ ಬಿಳಿಯ ಆನೆಯೊಂದು ಉತ್ತರದಿಕ್ಕಿನಿಂದ ತನ್ನ ಬಳಿಗೆ ಬಂದು ಹೊಟ್ಟೆಯ ಬಲಪಾರ್ಶ್ವವನ್ನು ಸ್ಪರ್ಶಿಸಿ ಅಲ್ಲಿಂದ ಹೊಟ್ಟೆಯೊಳಕ್ಕೆ ಪ್ರವೇಶಿಸಿದಂತೆಯೂ, ಸ್ವಪ್ನದಲ್ಲಿ ಆಕೆಯ ಮನಸ್ಸಿಗೆ ಬೋಧೆಯಾಯಿತು.‡ ಮಾಯಾದೇವಿಯು ತನ್ನ ಸ್ವಪ್ನವನ್ನು

‡ ತುಷಿತವೆಂಬ ಸ್ವರ್ಗದಲ್ಲಿದ್ದ ಬೋಧಿಸತ್ವನು ತಾನು ಜಗದ್ವ್ಯಸನ ಕ್ಷಯಕ್ಕಾಗಿ ಅವತರಿಸುವ ಕಾಲವು ಸಮೀಪಿಸಿತೆಂದು ಭಾವಿಸಿ, ಆರು ದಂತಗಳಿಂದ ಕೂಡಿದ ಬಿಳಿಯ ಆನೆಯ ರೂಪವನ್ನು ಧರಿಸಿ ಮಾಯಾದೇವಿಯ ಗರ್ಭವನ್ನು ಹೊಕ್ಕನೆಂಬುದು ಬೌದ್ಧರ ನಂಬಿಕೆ:—

ಶುದ್ಧೋದನನಿಗೆ ತಿಳಿಸಿ, ಅದರ ಫಲವೇನೆಂಬುದನ್ನು ತಿಳಿಸಲು ದೈವಜ್ಞರನ್ನು ಬರಮಾಡಬೇಕೆಂದು ಪ್ರಾರ್ಥಿಸಿದಳು. ಆ ಸ್ವಪ್ನವು ಶುಭಾವಹವೆಂದೂ, ಸಲ್ಲಕ್ಷಣಗಳಿಂದ ಕೂಡಿದ ಸುಪುತ್ರನ ಜನನ ವನ್ನು ಅದು ಸೂಚಿಸುವುದೆಂದೂ ದೈವಜ್ಞರು ಬಿನ್ನೈಸಿದರು. ಅಲ್ಲದೆ, ಮುಂದೆ ಹುಟ್ಟುವ ಮಗುವು ಪ್ರಭುತ್ವಾಕಾಂಕ್ಷೆಯಿಂದ ಕೂಡಿ ಸಿಂಹಾಸನವನ್ನೇರಿದರೆ ಚಕ್ರವರ್ತಿಯಾಗುವ ಯೋಗವುಂಟೆಂದೂ, ಹಾಗಿಲ್ಲದೆ ವಿರಕ್ತಭಾವವನ್ನಾಶ್ರಯಿಸುವುದಾದರೆ ವಿರಕ್ತ ಸಾರ್ವ ಭೌಮನಾಗಿ ಜಗತ್ತನ್ನುದ್ಧರಿಸುವ ಬುದ್ಧನಾಗುವ ಯೋಗವುಂಟೆಂದೂ ಅವರು ಭವಿಷ್ಯವಾಣಿಯನ್ನು ನುಡಿದರು. ಮುಂದೆ ಹುಟ್ಟುವ ಮಗು ವಿಗೆ ವಿರಕ್ತಿಯೇ ಹುಟ್ಟದಿರುವಂತೆ ಮಾಡುವುದು ಅತ್ಯಾವಶ್ಯಕ ವೆಂದು ನಿರ್ಧರಿಸಿ, ಅದಕ್ಕೆ ತಕ್ಕ ಸನ್ನಿವೇಶವನ್ನು ಕಲ್ಪಿಸುವ ಆಲೋಚನೆಯಲ್ಲೇ ಶುದ್ಧೋದನನು ಮಗ್ನನಾದನು. ತನ್ನ ಸ್ವಪ್ನ ದಿಂದ ಯಾವ ಬಗೆಯ ವಿಪತ್ತು ಸಂಭವಿಸುವುದೋ ಎಂದು ಆತಂಕ ಪಡುತ್ತಿದ್ದ ಮಾಯಾದೇವಿಯು ಸ್ವಪ್ನದ ಫಲವನ್ನು ಕೇಳಿ, ತನ್ನ ಆತಂಕವನ್ನು ತೊರೆದು ನೆಮ್ಮದಿಯಾಗಿದ್ದಳು.

**ಪುತ್ರ ಜನನ**

ಗರ್ಭಿಣಿಯಾದ ಮಾಯಾದೇವಿಯು ವಿದ್ಯುದ್ವಿಲಾಸದಿಂದ ಪರಿ ಶೋಭಿಸುವ ಮೇಘಮಾಲೆಯಂತೆ ಕಂಗೊಳಿಸುತ್ತಿದ್ದಳು. ಪುತ್ರ ರತ್ನವನ್ನು ಕಾಣುವೆನೆಂಬ ಸಂತೋಷದಿಂದ ಆಕೆಯು ಮೈಮರೆತು, ಪಾರಿತೋಷಿಕಗಳ ಸುರಿ ಮಳೆಯಿಂದ ಪರಿಜನರ ದಾರಿದ್ರ್ಯವನ್ನು ಪರಿಹರಿ

---

"ಧೃತ್ವಾ ಹಿಮಾದ್ರಿ ಧವಲಂ ಗುರು ಷಡ್ವಿಷಾಣಂ
ದಾನಾಧಿವಾಸಿತಕರಂ ಹಿ ಗಜಸ್ಯ ರೂಪಮ್ ।
ಶುದ್ಧೋದನಸ್ಯ ವಸುಧಾಧಿಪತೇರ್ಮಹಿಷ್ಯಾಃ
ಕುಕ್ಷಿಂ ವಿವೇಶ ಸ ಜಗದ್ವ್ಯಸನ ಕ್ಷಯಾಯ ॥"

ಸಿದಳು. ಒಂದುದಿನ ಮಾಯಾದೇವಿಯು ತನ್ನ ಪತಿಯ ಬಳಿಸಾರಿ ತಾನು ಲಂಬಿಣೀವನವೆಂಬ‡ ಹೆಸರಿನ ವಸಂತೋದ್ಯಾನಕ್ಕೆ ಹೋಗಬೇಕೆಂದು ಬಯಕೆಯನ್ನು ಸೂಚಿಸಿದಳು. ಆಗ ವಸಂತ ಕಾಲವಾದುದರಿಂದ ಫಲಪುಷ್ಪ ಸಮೃದ್ಧವಾಗಿ ಕೋಗಿಲೆಗಳ ಮತ್ತು ನವಿಲುಗಳ ಮಧುರ ಧ್ವನಿಯಿಂದ ತುಂಬಿದ್ದ ವಸಂತೋದ್ಯಾನಕ್ಕೆ ಹೋಗಬೇಕೆಂದು ಬಯಸಿದಳು. ಒಡನೆಯೇ ಆ ಪ್ರಯಾಣಕ್ಕಾಗಿ ಆನೆ ಕುದುರೆಗಳೂ, ರಥಪದಾತಿಗಳೂ, ಪರಿಜನರೂ ಸಿದ್ಧವಾಗುವಂತೆ ಶುದ್ಧೋದನನು ಅಪ್ಪಣೆ ಮಾಡಿದನು. ರಾಣಿಯ ಮೇಲಿನ ಪ್ರೀತಿ ಗೌರವಗಳಿಂದ ಅವಳ ಸಖೀಜನರೇ ಅವಳ ರಥವನ್ನೆಳೆದುಕೊಂಡು ಹೊರಟರು. ಗೀತ ವಾದ್ಯಗಳ ಮಧುರಧ್ವನಿಯು ಗಗನವನ್ನೇ ತುಂಬುತ್ತಿದ್ದಿತು. ಲಂಬಿಣೀವನವನ್ನು ಸೇರಿದಮೇಲೆ ಮಾಯಾದೇವಿಯು ನಾನಾ ತರುಲತೆಗಳನ್ನೂ ಫಲಪುಷ್ಪಗಳನ್ನೂ ಸಂಭ್ರಮದಿಂದ ನೋಡಿ ನೋಡಿ ಹಿಗ್ಗಿದಳು. ಎಲ್ಲಿ ಯಾವುದನ್ನು ಎಷ್ಟುಸಲ ನೋಡಿದರೂ (ಪ್ರಕೃತಿ ಪ್ರೇಮದಿಂದ ಹಿಗ್ಗುತ್ತಿದ್ದ) ಆಕೆಯ ಮನಸ್ಸಿಗೆ ತೃಪ್ತಿಯಿರಲಿಲ್ಲ. ವಿಶ್ವಪ್ರೇಮಿಯಾದ ಮಹಾನುಭಾವನನ್ನು ಗರ್ಭದಲ್ಲಿಟ್ಟುಕೊಂಡಿದ್ದವಳು ಆ ರೀತಿ ವರ್ತಿಸಿದುದರಲ್ಲಿ ಆಶ್ಚರ್ಯವೇನು? ಅಥವಾ ಪ್ರೇಮಮಯಿಯಾದ ಮಾಯಾದೇವಿಯ ಗರ್ಭದಲ್ಲಿ ವಿಶ್ವಪ್ರೇಮಿಯಾದ ಮಹಾನುಭಾವನು ಜನಿಸಿದುದರಲ್ಲಿ ಆಶ್ಚರ್ಯವೇನು? ಮಾಯಾದೇವಿಯು ಮಧುಮಾಸದ ಶೋಭೆಯನ್ನು ಕಂಡು ತಲೆದೂಗಿ ಬಹುಕಾಲ ವನವಿಹಾರ ಮಾಡುತ್ತಿದ್ದು, ಆ ಬಳಿಕ ಒಂದು ಪ್ಲಕ್ಷ

‡ ಲಂಬಿಣೀವನವು ಶುದ್ಧೋದನನ ಪ್ರಜೆಗಳಿಗೂ, ಮಾಯಾದೇವಿಯ ತಂದೆಯಾದ ಸುಪ್ರಬುದ್ಧರಾಜನ ಪ್ರಜೆಗಳಿಗೂ, ಉಭಯತ್ರರಿಗೂ ಸೇರಿದ್ದಿತೆಂದು ಕೆಲವು ಗ್ರಂಥಕರ್ತರ ಅಭಿಪ್ರಾಯ. ಮಾಯಾದೇವಿಯು ತನ್ನ ತಂದೆಯ ಮನೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಲಂಬಿಣೀವನದಲ್ಲಿ ಪ್ರಸವಿಸಿದಳೆಂದೂ ಕೆಲವರು ಅಭಿಪ್ರಾಯಪಟ್ಟಿದ್ದಾರೆ.

ವೃಕ್ಷದ‡ ಬಳಿಗೆ ಬಂದಳು. ತಂಗಾಳಿಗೆ ಅದರ ಕೊನೆಗಳು ತೂಗಾಡುತ್ತಿದ್ದವು. ಗಾಳಿಗೆ ಮೆಲ್ಲನೆ ಅಲುಗಾಡುತ್ತಿದ್ದ ರೆಂಬೆಗಳನ್ನೂ ಕೋಮಲವಾದ ಚಿಗುರುಗಳನ್ನೂ ನೋಡಿದರೆ ಆ ವೃಕ್ಷವು ಮಾಯಾದೇವಿಗೆ ಸ್ವಾಗತವನ್ನು ನೀಡುವಂತೆ ತೋರುತ್ತಿದ್ದಿತು. ಆಕೆಯು ಆ ವೃಕ್ಷದ ಬಳಿಗೆ ಬರುವ ವೇಳೆಗೆ ಪ್ರಸವವೇದನೆಯು ಪ್ರಾರಂಭವಾಗಿ ಅಲ್ಲಿಯೇ ಪುತ್ರರತ್ನವನ್ನು ಪ್ರಸವಿಸಿದಳು.*

ಯುವರಾಜನು ಜನಿಸಿದನೆಂಬ ವಾರ್ತೆಯನ್ನು ಕೇಳಿದ ಮೇಲೆ ರಾಜಧಾನಿಯಲ್ಲಿ ಎಲ್ಲಿ ನೋಡಿದರೂ ಸಂತೋಷದ ಕೋಲಾಹಲ ಧ್ವನಿಯೇ! ಯಾರ ಮುಖದಲ್ಲಿ ನೋಡಿದರೂ ಮುಗುಳುನಗೆಯೇ! ಪ್ರಜೆಗಳು ಎಲ್ಲೆಲ್ಲಿಯೂ ಜಯಘೋಷ ಮಾಡುತ್ತಾ ಬಾಲಕನಿಗೆ ಶ್ರೇಯಸ್ಸುಂಟಾಗಲೆಂದು ಪ್ರಾರ್ಥಿಸಿದರು. ಶ್ರೋತ್ರಿಯರೂ ಸುವಾಸಿ

---

‡ ಆಕೆಯು ಪಲಾಶ ವೃಕ್ಷದ (ಮುತ್ತುಗದ ಮರದ) ಕೆಳಕ್ಕೆ ಬಂದು ಪ್ರಸವಿಸಿದಳೆಂದೂ, ಪ್ಲಕ್ಷವೃಕ್ಷದ ಕೆಳಗೆ ಪ್ರಸವಿಸಿದಳೆಂದೂ, ಸಾಲವೃಕ್ಷದ ಕೆಳಗೆ ಪ್ರಸವಿಸಿದಳೆಂದೂ, ಅಶೋಕವೃಕ್ಷದ ಕೆಳಗೆ ಪ್ರಸವಿಸಿದಳೆಂದೂ ಗ್ರಂಥಕರ್ತರಲ್ಲಿ ಬಗೆಬಗೆಯಾಗಿ ಭಿನ್ನಾಭಿಪ್ರಾಯಗಳಿವೆ ಗೌತಮ ಬುದ್ಧನು ಜನಿಸಿದ ಸ್ಥಳವೆಂದು ಸೂಚಿಸಿ ಅಶೋಕ ಚಕ್ರವರ್ತಿಯು ನೆಡಿಸಿದ ಶಿಲಾಸ್ತಂಭವು ಈಗಲೂ ಅಚ್ಚಳಿಯದೆ ನಿಂತಿದೆ.

* ಪುತ್ರಜನನವಾದಾಗ ವೃಕ್ಷಗಳೆಲ್ಲ ಅಕಾಲದಲ್ಲಿ ಪುಷ್ಪಿಸಿದುವೆಂದೂ, ತಣ್ಣೀರಿನ ಮತ್ತು ಬಿಸಿನೀರಿನ ಬುಗ್ಗೆಗಳು ಭೂಗರ್ಭದಿಂದ ಉಕ್ಕಿದುವೆಂದೂ, ಶಿಶುವು ಮಾಯಾದೇವಿಯನ್ನು ಭೇದಿಸಿಕೊಂಡು ಬಂದು ಏಳು ಹೆಜ್ಜೆಗಳನ್ನಿಟ್ಟು, ಆ ಬಳಿಕ ತಾನು ಜಗತ್ತಿನ ಹಿತಕ್ಕಾಗಿ ಕೊನೆಯ ಜನ್ಮವನ್ನು ತಾಳಿರುವುದಾಗಿ ಹೇಳಿತೆಂದೂ ಬೌದ್ಧರ ನಂಬಿಕೆ. ಶ್ರೀಕೃಷ್ಣನು ಅವತರಿಸಿದಾಗ ಕಂಡುಬಂದ ಮಹಿಮೆಗಳೆಂದು ಕೆಲವು ಅತಿಮಾನುಷ ವ್ಯಾಪಾರಗಳು ಸೂಚಿತವಾಗಿವೆ. ಬೌದ್ಧರೂ ಬುದ್ಧನ ಜನನ ಕಾಲದ ಈ ಮಹಿಮೆಯನ್ನು ಸೂಚಿಸಿದ್ದಾರೆ.

ನಿಯರೂ ತಂಡೋಪತಂಡವಾಗಿ ಬಂದು, ಗೌರವರ್ಣದಿಂದ ಕೂಡಿ ಕಂಗೊಳಿಸುತ್ತಿದ್ದ ತೇಜಸ್ವಿಯಾದ ಆ ಶಿಶುವನ್ನು ನೋಡಿ ಹರ್ಷಿಸಿ ಆಶೀರ್ವದಿಸಿದರು. ಸುಂದರಿಯರಾದ ಸ್ತ್ರೀಯರು ಮಾಯಾದೇವಿಯ ಸಮೀಪದಲ್ಲಿ ತೂರ್ಯ, ಮೃದಂಗ, ವೀಣೆ, ಮುಕುಂದಾ,‡ ಮುರಜ ಮುಂತಾದ ವಾದ್ಯಗಳನ್ನು ಬಾರಿಸುತ್ತ ಅವುಗಳ ಮಧುರಸ್ವನದೊಡನೆ ತಮ್ಮ ಇಂಪಾದ ಕಂಠಸ್ವರವನ್ನೂ ಸೇರಿಸಿ ಗಾನಮಾಡುತ್ತಿದ್ದರು. ಶುದ್ಧೋದನರಾಜನು ಪುತ್ರೋತ್ಸವದಿಂದ ಸುಪ್ರೀತನಾಗಿ ದಾನಾದಿಗಳಿಂದಲೂ, ಸನ್ಮಾನ ಸತ್ಕಾರಾದಿಗಳಿಂದಲೂ ಪ್ರಜೆಗಳನ್ನು ಆನಂದದಿಂದ ಆರಾಧಿಸಿದನು. ವೃಕ್ಷಗಳು ಅಕಾಲದಲ್ಲಿ ಪುಷ್ಪಿಸಿ ಪ್ರಫುಲ್ಲವಾದ ಕುಸುಮಗಳಿಂದಲೂ, ಸುಗಂಧ ಪೂರಿತವಾದ ಮಂದ ಮಾರುತದಿಂದಲೂ, ಭ್ರಮರಗಳ ಗುಂಜಾರವದಿಂದಲೂ ಕೂಡಿ, ಒಟ್ಟು ಪ್ರಕೃತಿಯೇ ಪ್ರಸನ್ನವಾದಂತೆ ತೋರುತ್ತಿದ್ದಿತು. ಚಕ್ರವರ್ತಿ ಲಕ್ಷಣಗಳಿಂದ ಕೂಡಿದ ಮಹಾತೇಜಸ್ವಿಯಾದ ಪುತ್ರನು ಜನಿಸಿದುದಕ್ಕಾಗಿ ಮಾಯಾದೇವಿಗುಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಶಿಶುವಿಗೆ ಚಕ್ರವರ್ತಿ ಲಕ್ಷಣಗಳುಂಟೆಂಬುದನ್ನು ಕೇಳಿದಾಗ ಆಕೆಯು ಆನಂದ ಪಾರವಶ್ಯದಿಂದ "ನನ್ನ ಕಂದನಿಗೆ ಚಕ್ರವರ್ತಿ ಲಕ್ಷಣಗಳಿವೆಯೇ, ಚಕ್ರವರ್ತಿ ಲಕ್ಷಣಗಳಿವೆಯೇ!" ಎಂದಳಂತೆ.

**ಪುರಪ್ರವೇಶ**

ಪತ್ನೀಪುತ್ರರನ್ನು ಲಂಬಿಣೀವನದಿಂದ† ರಾಜಧಾನಿಗೆ ಕರೆದು ತರಲು ಶುದ್ಧೋದನನು ಯಥಾಕಾಲದಲ್ಲಿ ಅಪ್ಪಣೆ ಮಾಡಿದನು. ಮಗುವಿಗೂ ಬಾಣಂತಿಗೂ ಸ್ವಲ್ಪವೂ ಆಯಾಸವಾಗದಂತೆ ಪುರಪ್ರವೇಶ

---

‡ ಮುಕುಂದಾ: ಮೃದಂಗ ಜಾತಿಯ ಅತಿ ಮನೋಹರವಾದ ಚರ್ಮವಾದ್ಯವಂತೆ.

† ಸಂಸ್ಕೃತದಲ್ಲಿ ಲುಂಬಿನೀ ವನವೆಂದಿರುವುದನ್ನು ಇಲ್ಲಿ ಲಂಬಿಣೀವನವೆಂದು ಬರೆಯಲಾಗಿದೆ. "ಕಾಲಿದಾಸ" ಎಂಬುದನ್ನು "ಕಾಳಿದಾಸ" ಎಂದು ಬರೆಯುವಂತೆ.

ಮಾಡಿಸಲು ಸಕಲಸನ್ನಾಹಗಳೂ ಸಾಂಗವಾಗಿ ನೆರವೇರಿದುವು. ಪ್ರಯಾಣಕಾಲದಲ್ಲಿ ರಥವು ಲೇಶಮಾತ್ರವೂ ಕುಲಕದಂತೆ ಅರಮನೆಯಿಂದ ಲುಂಬಿನೀವನದವರೆಗೂ ಕನ್ನಡಿಯಂತೆ ರಾಜಮಾರ್ಗವನ್ನೇರ್ಪಡಿಸುವಂತೆ ಶುದ್ಧೋದನನು ಆಜ್ಞಾಪಿಸಿದ್ದನು. ಬಗೆಬಗೆಯ ಮಂಗಳ ವಾದ್ಯಗಳು ಭೋರ್ಗರೆಯುತ್ತಿರುವಲ್ಲಿ, ನಗರ ದೇವತೆಯಂತಿದ್ದ ಮಾಯಾದೇವಿಯು ಪ್ರಿಯಪುತ್ರನಿಂದೊಡಗೂಡಿ ರಾಜ್ಞೀಪದವಿಗನುರೂಪವಾದ ವಿಜೃಂಭಣೆಯಿಂದಲೂ, ಅಟ್ಟಹಾಸದಿಂದಲೂ ಪುರಪ್ರವೇಶಮಾಡಿದಳು.‡ ಪುರಜನರು ತಮಗೆ ಮಾತೆಯಂತಿದ್ದ ಮಾಯಾದೇವಿಯನ್ನೂ, ತಮ್ಮ ಯುವರಾಜನನ್ನೂ, ಎಷ್ಟು ನೋಡಿದರೂ ತೃಪ್ತಿಹೊಂದದೆ ಆರತಿಗಳ ರೂಪದಲ್ಲಿಯೂ, ಲಾಜಾಕ್ಷತೆಗಳ ರೂಪದಲ್ಲಿಯೂ, ಪುಷ್ಪಾಂಜಲಿಗಳ ರೂಪದಲ್ಲಿಯೂ ತಮ್ಮ ಹೃದಯವನ್ನೇ ಕಾಣಿಕೆಯಾಗಿ ಸಮರ್ಪಿಸಿದರು.

ರಾಜಮಹಿಷಿ ಮಾಯಾದೇವಿಯು ಮಹಾಪುರುಷನಾದ ಮಗನನ್ನು ಹೆತ್ತಳಾದರೂ, ಮಗನನ್ನು ಹೆಚ್ಚುಕಾಲ ಲಾಲಿಸಿ ಪಾಲಿಸಿ

---

‡ ಸಾಧ್ಯವಾದಷ್ಟು ಶೀಘ್ರವಾಗಿ ಮಕ್ಕಳನ್ನು ದೇವಾಲಯಕ್ಕೆ ಕರೆದು ಕೊಂಡು ಹೋಗುತ್ತಿದ್ದುದು ಶಾಕ್ಯಮನೆತನದವರ ಸಂಪ್ರದಾಯ. ಪುರ ಪ್ರವೇಶಕ್ಕೆ ಮೊದಲೇ ಮಾಯಾದೇವಿಯು ತನ್ನ ಮಗುವನ್ನು ದೇವಾಲಯಕ್ಕೆ ಕರೆದುಕೊಂಡು ಹೋದಳೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಆಕೆಯು ಹೆರಿಗೆಯಾದ ಏಳನೆಯ ದಿನವೇ ಮೃತಳಾದಳೆಂದು ಅನೇಕ ಬೌದ್ಧ ಗ್ರಂಥಗಳಲ್ಲಿ ಹೇಳಿರುವುದರಿಂದ, ಶುದ್ಧಸ್ನಾನಕ್ಕೆ ಮೊದಲೇ ದೇವಾಲಯಕ್ಕೆ ಹೋದಳೆಂಬುದು ಅಷ್ಟೇನೂ ಯುಕ್ತವಾಗಿರುವಂತೆ ಕಾಣುವುದಿಲ್ಲ. "ಲಲಿತ ವಿಸ್ತರ"ದಲ್ಲಿ ಹೇಳಿರುವಂತೆ ಮಾಯಾದೇವಿಯ ಮರಣಾನಂತರ ಮಗುವನ್ನು ದೇವಾಲಯಕ್ಕೆ ಕರೆದೊಯ್ದರೆಂಬುದೂ, ಮಾಯಾದೇವಿಯು ಜೀವಂತಳಾಗಿದ್ದಾಗ ಪುರಪ್ರವೇಶವು ಮಾತ್ರ ನಡೆಯಿತೆಂಬುದೂ, ಯುಕ್ತವಾಗಿದ್ದಂತೆ ತೋರುತ್ತದೆ.

ನಲಿದಾಡುವ ಪುಣ್ಯವನ್ನು ಪಡೆದು ಬಂದಿರಲಿಲ್ಲ. ಪುತ್ರಜನನವಾದ ಏಳನೆಯ ದಿನವೇ ಆಕೆಯು ತನ್ನ ಪತಿಯಾದ ಶುದ್ಧೋದನನನ್ನೂ, ಬಂಧುವರ್ಗದವರನ್ನೂ ಶೋಕಸಾಗರದಲ್ಲಿ ಮುಳುಗಿಸಿ ಪರಲೋಕಯಾತ್ರೆ ಮಾಡಿದಳು.* ಶುದ್ಧೋದನನಿಗೆ ಸಂತೋಷ ಮಧ್ಯದಲ್ಲಿಯೇ ಸಂತಾಪವು ಬಂದೊದಗಿತು. ಮಾಯಾದೇವಿಯ ಅಕಾಲಮರಣಾನಂತರ ಮಗುವನ್ನು ನೋಡಿಕೊಳ್ಳುವ ಭಾಗ್ಯವು ನನಗೆ ತನಗೆಂದು ಅಂತಃಪುರದ ಸ್ತ್ರೀಯರೆಲ್ಲರೂ ಮೇಲಾಡಿದರು. ಶುದ್ಧೋದನನು ಮಹಾಪ್ರಜಾಪತೀದೇವಿಯೇ ಶಿಶುವಿನ ಪೋಷಣೆಯ ಭಾರವನ್ನು ವಹಿಸಬೇಕೆಂದು ಕೋರಿದನು. ಆ ಶಿಶುವಿನ ಪೋಷಣೆಯನ್ನು ಮಾತೃಸಮಾನಳಾದ ಮಹಾಪ್ರಜಾಪತೀದೇವಿಯು ಅತ್ಯಾದರದಿಂದ ವಹಿಸಿ ಮಗುವು ತನ್ನದೆಂದೇ ಭಾವಿಸಿ ಲಾಲಿಸತೊಡಗಿದಳು.

**ಮಾಯಾ ದೇವಿಯ ಮರಣ**

ಹಿಮವತ್ಪರ್ವತದ ಸಮೀಪದಲ್ಲಿ ವಾಸಮಾಡುತ್ತಿದ್ದ ಅಸಿತನೆಂಬ ಋಷಿಯು ಮುಂದೆ ಬುದ್ಧನಾಗುವ ಶಿಶುವಿನ ಜನನ ವೃತ್ತಾಂತವನ್ನು ತಿಳಿದು ಆ ಶಿಶುವನ್ನು ನೋಡುವ ಕುತೂಹಲದಿಂದ ಕಪಿಲವಸ್ತು

**ಅಸಿತನೆಂಬ ಋಷಿಯ ಆಗಮನ**

---

* ಮಾಯಾದೇವಿಯು ದೇವರ್ಷಿಸದೃಶನಾದ ತನ್ನ ಮಗನನ್ನು ನೋಡಿದುದರಿಂದುಂಟಾದ ಆನಂದವನ್ನು ತಾಳಲಾರದೆ ಮೃತಳಾದಳೆಂಬುದು ಕೆಲವು ಮಂದಿ ಬೌದ್ಧ ಲೇಖಕರ ಅಭಿಪ್ರಾಯ. ಎಲ್ಲ ಬುದ್ಧರ ತಾಯಿಯರೂ ಶಿಶುವು ಜನಿಸಿದ ತರುಣದಲ್ಲಿಯೇ ಮೃತರಾಗುವುದೇ ನಿಯಮವೆಂದೂ, ತಮ್ಮ ಮಕ್ಕಳು ಸುಖವನ್ನು ಪರಿತ್ಯಜಿಸಿ ಲೋಕೋದ್ಧಾರ ದೀಕ್ಷೆಯನ್ನು ತಳೆದು ಹೊರಟುಹೋಗುವುದನ್ನು ನೋಡಿ ಸಹಿಸುವುದು ಅವರಿಗೆ ಶಕ್ಯವಿಲ್ಲದ ಕಾರಣ, ಆ ಸನ್ನಿವೇಶವನ್ನೇ ತಪ್ಪಿಸುವುದಕ್ಕಾಗಿ ಹಾಗೆ ನಿಯಮವು ಏರ್ಪಟ್ಟಿದೆಯೆಂದೂ, ಅದಕ್ಕನುಸಾರವಾಗಿ ಮಾಯಾದೇವಿಯೂ ಅಕಾಲದಲ್ಲಿ ಮೃತಳಾದಳೆಂದೂ ಮತ್ತೆ ಕೆಲವು ಮಂದಿ ಬೌದ್ಧ ಲೇಖಕರು ಸೂಚಿಸಿದ್ದಾರೆ.

ನಗರಕ್ಕೆ ಬಂದನು.† ಬ್ರಹ್ಮವರ್ಚಸ್ಸಿನಿಂದಲೂ, ತಪಸ್ಸಾಮರ್ಥ್ಯ ದಿಂದಲೂ, ಕೂಡಿ ಬ್ರಹ್ಮರ್ಷಿಗಳ ಮಧ್ಯದಲ್ಲಿ ಶೋಭಿಸುತ್ತಿದ್ದ ಆತನನ್ನು ರಾಜಗುರುವಾದ ಪುರೋಹಿತನು ಗೌರವದಿಂದ ಸತ್ಕರಿಸಿ ಶುದ್ಧೋದ ನನ ಅಂತಃಪುರಕ್ಕೆ ಕರೆದುಕೊಂಡು ಹೋದನು.* (ಶಾಕುಂತಲ ನಾಟಕ ಮುಂತಾದ ಗ್ರಂಥಗಳಿಂದ ಗೊತ್ತಾಗುವಂತೆ ಋಷಿಗಳೂ, ಉದ್ದಾಮ ಪಂಡಿತರೂ ಬಂದಾಗ ಅವರನ್ನು ಸತ್ಕರಿಸಿ ರಾಜನ ಬಳಿಗೆ ಕರೆದೊಯ್ಯುವುದು ರಾಜಗುರುವಾದ ಪುರೋಹಿತನ ಕರ್ತವ್ಯವಾಗಿದ್ದಿ ತೆಂದು ಹೇಳಬಹುದಾಗಿದೆ.) ವಿದ್ಯಾನಿಧಿಯಾಗಿದ್ದ ಆ ಅಸಿತ ಮಹರ್ಷಿಯು ರಾಜನ ಅಂತಃಪುರವನ್ನು ಪ್ರವೇಶಿಸಿದನು. ಶುದ್ಧೋ ದನ ರಾಜನು ಆತನನ್ನು ಪ್ರೀತಿ ಗೌರವಗಳಿಂದ ಬರಮಾಡಿಕೊಂಡು ಭದ್ರಾಸನದಲ್ಲಿ ಕುಳ್ಳಿರಿಸಿ ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ, "ಪೂಜ್ಯರೆ! ತಮ್ಮ ದರ್ಶನದಿಂದ ನಾನು ಕೃತಾರ್ಥನಾದೆನು. ನನ್ನ ಕುಲವೂ ತಮ್ಮ ಆಗಮನದಿಂದ ಪವಿತ್ರವಾಯಿತು. ನನ್ನಿಂದ ಆಗ ಬೇಕಾದುದನ್ನು ಆಜ್ಞಾಪಿಸಬೇಕು. ತಮ್ಮ ಶಿಷ್ಯನಾದ ನನ್ನಲ್ಲಿ ಕೃಪೆತೋರಿ ಅಪ್ಪಣೆ ಮಾಡಬೇಕು" ಎಂದು ಆದರದಿಂದ ಅರಿಕೆ ಮಾಡಿದನು. ರಾಜನ ವಿನಯದಿಂದಲೂ ಸತ್ಕಾರದಿಂದಲೂ ಸುಪ್ರೀತ ನಾಗಿ ಅಸಿತಮಹರ್ಷಿಯು, "ಅತಿಥಿಯಾಗಿ ಬಂದ ನನ್ನಲ್ಲಿ ಈ ರೀತಿ ಆದರವನ್ನು ತೋರಿಸಿ ಸತ್ಕರಿಸಿದುದು, ತ್ಯಾಗಿಯೂ ಧರ್ಮಕಾಮನೂ

---

† ಆತನು ತನ್ನ ತಪಸ್ಸಿದ್ಧಿಯ ಪ್ರಭಾವದಿಂದ ಸ್ವರ್ಗಲೋಕಕ್ಕೆ ಹೋಗಿದ್ದು ಬೋಧಿಸತ್ವನು ಭೂಲೋಕದಲ್ಲಿ ಅವತರಿಸಿರುವ ಸಂಗತಿಯನ್ನು ತಿಳಿದು, ಆತನ ದರ್ಶನಾರ್ಥವಾಗಿ ಅಲ್ಲಿಂದ ಹೊರಟು ಅಂತರಿಕ್ಷಗಮನದಿಂದ ಕಪಿಲವಸ್ತುವಿಗೆ ತಲುಪಿದನೆಂದು ಕೆಲವು ಬೌದ್ಧಗ್ರಂಥಗಳಲ್ಲಿ ಹೇಳಿದೆ.

* "ಸ ಬ್ರಹ್ಮವಿದ್ ಬ್ರಹ್ಮವಿದಾಂ ಜ್ವಲಂತಂ ಬ್ರಾಹ್ಮ್ಯಾಶ್ರಿಯಾ ಚೈವ ತಪಃಶ್ರಿಯಾಚ। ರಾಜ್ಞೋ ಗುರುರ್ಗೌರವ ಸತ್ಕೃತಂ ತಂ ಪ್ರವೇ ಶಯಾಮಾಸ ನರೇಂದ್ರಸದ್ಮ ॥"

ಮಹಾತ್ಮನೂ ಆದ ನಿನ್ನ ಸತ್ತ್ವಕ್ಕೂ ಸದ್ವಂಶಕ್ಕೂ ಸುಜ್ಞಾನಕ್ಕೂ ಅನುರೂಪವಾಗಿದೆ. ಶಾಕ್ಯ ಕುಲಧ್ವಜನು ಜನ್ಮವೆತ್ತಿರುವನೆಂದು ಕೇಳಿ ಆತನ ದರ್ಶನಾಕಾಂಕ್ಷೆಯಿಂದ ಇಲ್ಲಿಗೆ ಬಂದೆನು" ಎಂದು ಹೇಳಿದನು. ಶುದ್ಧೋದನನು ಅದಕ್ಕಾಗಿ ಸಂತೋಷಿಸಿ ಧಾತ್ರಿಯ ತೊಡೆಯ ಮೇಲೆ ಮಲಗಿದ್ದ ತನ್ನ ಮುದ್ದು ಕುಮಾರನನ್ನು ಆತನಿಗೆ ತೋರಿಸಿದನು. ಮಹಾಪುರುಷ ಲಕ್ಷಣಗಳಿಂದ ಕೂಡಿದ್ದ ಆ ಶಿಶುವನ್ನು ನೋಡಿ, ಅಸಿತ ಮಹರ್ಷಿಯು ನಿಟ್ಟುಸಿರನ್ನು ಬಿಡುತ್ತ ಕಂಬನಿ ದುಂಬಿ ಅಂತರಿಕ್ಷದ ಕಡೆಗೆ ಮುಖವನ್ನು ತಿರುಗಿಸಿ ನಿಂತನು. ಆತನ ಆ ಬಗೆಯ ವರ್ತನೆಯಿಂದ ಶುದ್ಧೋದನನು ತನ್ನ ಪುತ್ರನಿಗೆ ಅಮಂಗಳವನ್ನು ಶಂಕಿಸಿದನು.

**ಅಸಿತ ಮಹರ್ಷಿಯ ಭವಿಷ್ಯವಾಣಿ**

ಶುದ್ಧೋದನನ ಪತ್ನಿಯಾದ ಮಾಯಾದೇವಿಯು ಮೃತಳಾದ ದುಃಖವೇ ಆತನಿಗೆ ಇನ್ನೂ ಕಡಿಮೆಯಾಗಿರಲಿಲ್ಲ. "ಕುರುವಿನ ಮೇಲೆ ಬೊಕ್ಕೆಯಂತೆ" ಅದರ ಮೇಲೆ ಪುತ್ರ ಶೋಕವೂ ಸಂಘಟಿಸಬಹುದೆಂಬ ಕಳವಳದಿಂದ ಆತನು ನಡುಗಿದನು. ಕೊನೆಗೆ ಆತನು ಭಯ ವಿಹ್ವಲಚಿತ್ತನಾಗಿ "ಪೂಜ್ಯರೆ! ಕುಮಾರನು ಸ್ಥಿರಾಯುವೆ? ಅವನು ನನ್ನ ಶೋಕ ಸಂತಾಪಗಳಿಗೆ ಕಾರಣನಾಗಲು ಜನಿಸಿಲ್ಲವಷ್ಟೆ? ಅವನಿಂದ ನನ್ನ ವಂಶವು ವೃದ್ಧಿಯಾಗುವುದೆ? ಕುಮಾರನು ಅಲ್ಪಾಯುವೊ ಎಂದು ನನ್ನ ಹೃದಯವು ನಡುಗುತ್ತಿದೆ. ತಾವು ಕಂಬನಿದುಂಬಿದುದಕ್ಕೆ ಕಾರಣವೇನೆಂಬುದನ್ನು ತಿಳಿಸಿ ಕೃಪೆಮಾಡಬೇಕು. ಪುತ್ರಸ್ನೇಹವು ಪ್ರಬಲವಾದುದೆಂಬುದು ತಮಗೆ ವಿದಿತವಾಗಿಯೇ ಇದೆ" ಎಂದು ದೈನ್ಯವಚನಗಳಿಂದ ಬೇಡಿಕೊಂಡನು. ಅಸಿತ ಮಹರ್ಷಿಯು, "ಮಹಾರಾಜ! ಶಾಂತನಾಗು. ನಿನ್ನ ಮಗನಿಗೆ ಯಾವ ಅಮಂಗಳವೂ ಸಂಭವಿಸುವಂತಿಲ್ಲ. ನಾನು ರೋದಿಸಿದುದು ನನ್ನ ದೌರ್ಭಾಗ್ಯಕ್ಕಾಗಿ ಮಾತ್ರವೇ. ಆತನಿಂದ ನಡೆಯುವ ಮಹತ್ಕಾರ್ಯಗಳನ್ನು ನೋಡಿ

ಆನಂದಿಸುವಷ್ಟು ಕಾಲ ನಾನು ಜೀವಿಸಿರುವ ಸಂಭವವಿಲ್ಲವಲ್ಲಾ ಎಂದು ನಾನು ಸ್ವಾರ್ಥಬುದ್ಧಿಯಿಂದ ಕಂಬನಿದುಂಬಿದೆನು. ನಿನ್ನ ಪುತ್ರನು ವಿಷಯಸುಖ ವಿಮುಖನಾಗಿ ರಾಜ್ಯವನ್ನು ಪರಿತ್ಯಜಿಸಿ ಸ್ವಪ್ರಯತ್ನದಿಂದ ತತ್ತ್ವಸಾಕ್ಷಾತ್ಕಾರವನ್ನು ಪಡೆದು ಜಗದ್ವಂದ್ಯನಾಗಿ ಬಾಳುತ್ತಾನೆ. ದೀರ್ಘಾಯುವೂ ಮಹಾತ್ಮನೂ ಆಗಿರುವ ಈ ಸುಪುತ್ರನನ್ನು ಪಡೆದ ನೀನೇ ಧನ್ಯನು" ಎಂದು ಉತ್ತರ ಹೇಳಿದನು. ಶುದ್ಧೋದನನು ತನ್ನ ಮಗನ ಮಹತ್ವವನ್ನು ಕೇಳಿ ಸಂತೋಷಿಸಿದನಾದರೂ, ಅವನು ರಾಜ್ಯವನ್ನು ಪರಿತ್ಯಜಿಸಿ ಹೊರಟುಹೋಗುವನೆಂದು ಕೇಳಿ ಕಳವಳಕ್ಕೊಳಗಾದನು.

ಶುದ್ಧೋದನನು ಯಥಾಕಾಲದಲ್ಲಿ ಶಿಶುವಿಗೆ ನಾಮಕರಣ ಮಾಡಿ ಸಿದ್ಧಾರ್ಥನೆಂದು ಹೆಸರಿಟ್ಟನು.* ಬಂಧುಗಳನೇಕರು ಬಾಲಕನನ್ನು ಸುರಕ್ಷಿತವಾಗಿ ಕಾಪಾಡುವ ಓಷಧಿಗಳಿಂದ ಕೂಡಿದ ರತ್ನಹಾರಗಳನ್ನೂ, ಚಿನ್ನದಿಂದ ಮಾಡಿದ್ದ ಪುಟ್ಟರಥಗಳನ್ನೂ ವಯಸ್ಸಿಗೆ ಅನುರೂಪವಾದ ಭೂಷಣಗಳನ್ನೂ, ಸುವರ್ಣರಚಿತವಾದ ಆನೆ ಕುದುರೆ ಹಸು ಜಿಂಕೆ ಮುಂತಾದ ಆಟದ ಸಾಮಾನುಗಳನ್ನೂ, ಮಗುವನ್ನು ಕುಳ್ಳಿರಿಸಿ ಓಡಾಡಿಸಲು ಬೆಳ್ಳಿಯ ಬಂಡಿಗಳನ್ನೂ ತಂದೊಪ್ಪಿಸಿ ಸಂತೋಷಿಸಿದರು. ಶಾಕ್ಯವೃದ್ಧರನೇಕರು ಶುದ್ಧೋದನನ ಬಳಿಗೆ ಬಂದು ಶಾಕ್ಯಸಂಪ್ರದಾಯಕ್ಕನುಸಾರವಾಗಿ ಮಗುವನ್ನು ದೇವಾಲಯಕ್ಕೆ ಕರೆದೊಯ್ಯಬೇಕೆಂದು ನಮ್ರತೆಯಿಂದ ಅರಿಕೆಮಾಡಿದರು. ಆತನು ಅದಕ್ಕೆ ಸಮ್ಮತಿಸಿದನು. ಶುಭಲಗ್ನದಲ್ಲಿ ಶಾಕ್ಯವರ್ಧನ ದೇವಾಲಯಕ್ಕೆ ಅಟ್ಟಹಾಸದಿಂದ ಮೆರವಣಿಗೆಯು ಹೊರಟಿತು. ರಾಜಮನೆತನದವರೂ, ಬ್ರಾಹ್ಮಣರೂ,

**ಜಾತಕರ್ಮ ಮತ್ತು ದೇವತಾದರ್ಶನ**

---

* ಸರ್ವಾರ್ಥಸಿದ್ಧನೆಂದು ಹೆಸರಿಟ್ಟಂತೆ ಕೆಲವು ಗ್ರಂಥಕಾರರು ಅಭಿಪ್ರಾಯಪಟ್ಟಿದ್ದಾರೆ. ಬಾಲಕನು ಹುಟ್ಟಿದ ಐದನೆಯ ದಿನ ನಾಮಕರಣವು ನಡೆಯಿತೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ.

ಶ್ರೇಣಿಮುಖ್ಯರೂ, ಪುರಜನರೂ, ಸಚಿವಸಾಮಂತರೂ, ಅಧಿಕಾರಿಗಳೂ, ರಾಜನ ಮಿತ್ರವರ್ಗದವರೂ, ಅಸಂಖ್ಯಾತಮಂದಿ ದೇವಾಲಯಕ್ಕೆ ಹೊರಟರು. ಪುರಜನರು, ದಾರಿಯುದ್ದಕ್ಕೂ ಲಾಜಾಕ್ಷತೆಗಳನ್ನೂ ಪುಷ್ಪಗಳನ್ನೂ ಎರಚುತ್ತಿದ್ದರು. ದೇವಾಲಯದಲ್ಲಿ ಪೂಜೆಯು ನಡೆದ ಬಳಿಕ‡ ಶುದ್ಧೋದನನು ರಾಣಿಯಾದ ಮಹಾಪ್ರಜಾಪತೀ ದೇವಿಯನ್ನು ನೋಡಲು ವಿಮಲವ್ಯೂಹವೆಂಬ ಉದ್ಯಾನಕ್ಕೆ ಆ ಮೆರೆವಣಿಗೆಯು ಹೋಗುವಂತೆ ಆಜ್ಞಾಪಿಸಿದನು.

---

**ಬುದ್ಧನು ಹುಟ್ಟಿದ ಸಂವತ್ಸರ**

ಬುದ್ಧನು ( ಸಿದ್ಧಾರ್ಥನು) ಹುಟ್ಟಿದ ಸಂವತ್ಸರದ ವಿಚಾರವಾಗಿ ಪಂಡಿತರಲ್ಲಿ ಭಿನ್ನಾಭಿಪ್ರಾಯವಿದೆ. ಸಿದ್ಧಾರ್ಥನು ಕ್ರಿಸ್ತಪೂರ್ವ ೫೪೪ರಲ್ಲಿ ಹುಟ್ಟಿದನೆಂದೂ ಆತನು ಕ್ರಿಸ್ತಪೂರ್ವ ೫೬೦ರಲ್ಲಿ ಹುಟ್ಟಿದನೆಂದೂ, ಆತನು ಕ್ರಿಸ್ತಪೂರ್ವ ೫೫೦ರಲ್ಲಿ ಹುಟ್ಟಿದನೆಂದೂ ಹಲವರು ಹಲವು ವಿಧಗಳಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಆದರೆ, ಈಚೆಗೆ ನಿಷ್ಕರ್ಷೆಯಾಗಿರುವ ಪ್ರಕಾರ ಸಿದ್ಧಾರ್ಥನು ಕ್ರಿಸ್ತಪೂರ್ವ ೬೨೩ ನೆಯ ಸಂವತ್ಸರದ ವೈಶಾಖಮಾಸದ ಹುಣ್ಣಿಮೆಯ ದಿನ ಹುಟ್ಟಿದನೆಂದು ಹೇಳಬಹುದಾಗಿದೆ.†

---

‡ ದೇವಾಲಯದಲ್ಲಿ ಸಿದ್ಧಾರ್ಥನ ಮಹಿಮೆಯನ್ನು ತೋರ್ಪಡಿಸುವಂತಹ ಪವಾಡವೊಂದು ನಡೆಯಿತೆಂಬುದು ಕೆಲವು ಬೌದ್ಧರ ನಂಬಿಕೆ. ಸಿದ್ಧಾರ್ಥನನ್ನು ಶಾಕ್ಯವರ್ಧನ ವಿಗ್ರಹದ ಬಳಿಗೆ ಕರೆದೊಯ್ಯಲು ಆ ವಿಗ್ರಹವೇ ಸಿದ್ಧಾರ್ಥನೆದುರಿಗೆ ತಲೆಬಾಗಿಸಿ ಗೌರವಿಸಿತೆಂಬುದೇ ಆ ಪವಾಡ.

† ಡಾಕ್ಟರ್ ರಾಧಾಕುಮುದ ಮುಖರ್ಜಿಯವರು "ಮೆನ್ ಅಂಡ್ ಥಾಟ್ ಇನ್ ಏನ್ಷೆಂಟ್ ಇಂಡಿಯ" (Men and Thought In Ancient India) ಎಂಬ ಹೆಸರನ್ನಿಟ್ಟು ಇಂಗ್ಲಿಷ್ ಭಾಷೆಯಲ್ಲಿ ಬರೆದಿರುವ ಗ್ರಂಥದ ೩೧ನೆಯ ಪುಟವನ್ನು ದಯೆಯಿಟ್ಟು ನೋಡಿ.

# ಮೂರನೆಯ ಅಧ್ಯಾಯ

---

## ಸಿದ್ಧಾರ್ಥನ ಬಾಲ್ಯ ಯೌವನಗಳು

ಬಾಲಕನಾದ ಸಿದ್ಧಾರ್ಥನು ತನ್ನ ರೂಪ ಮಾಧುರ್ಯದಿಂದಲೂ, ಸದ್ಗುಣಸಂಪತ್ತಿನಿಂದಲೂ ಸಮಸ್ತರ ಕಣ್ಮನಗಳನ್ನೂ ಸೆಳೆಯುತ್ತ, ಶುಕ್ಲಪಕ್ಷದ ಚಂದ್ರನಂತೆ ಪ್ರವರ್ಧಮಾನಕ್ಕೆ ಬರುತ್ತಿದ್ದನು. ಶುದ್ಧೋದನನು ಶುಭ ಲಗ್ನದಲ್ಲಿ ಮಗನಿಗೆ ಅಕ್ಷರಾಭ್ಯಾಸಮಾಡಿಸಿ, "ಗೋಶೀರ್ಷ ಚಂದನ" ಹಲಗೆಯಮೇಲೆ* ಆ ಬಾಲಕನು ಬರೆಯುತ್ತಿದ್ದ ಅಕ್ಷರಗಳನ್ನು ನೋಡಿ ನೋಡಿ ಹಿಗ್ಗುತ್ತಿದ್ದನು. ಮೊಟ್ಟಮೊದಲು ವಿಶ್ವಾಮಿತ್ರನೆಂಬ ಗುರುವಿನಲ್ಲಿ ಸಿದ್ಧಾರ್ಥನ ವ್ಯಾಸಂಗವು ನಡೆಯಿತು. ಸಿದ್ಧಾರ್ಥನ ಮೇಧಾಶಕ್ತಿಯನ್ನು ನೋಡಿ ಆತನು ಅಚ್ಚರಿಗೊಂಡನಂತೆ. ವಿಶ್ವಾಮಿತ್ರನಲ್ಲಿ ಸಿದ್ಧಾರ್ಥನ ವ್ಯಾಸಂಗವು ಪೂರೈಸಿದ ಬಳಿಕ, ರಾಮ, ಧಜ, ಲಕ್ಷಣ, ಮಂತ್ರಿ, ಯಜ್ಞ ಸುಯಾಮ, ಸುಭೋಗ, ಸುದತ್ತ ಎಂಬೀ ಎಂಟು ಮಂದಿಗಳಲ್ಲಿ ಅವನು ವ್ಯಾಸಂಗ ಮಾಡಿದನು. ವೇದವೇದಾಂಗಗಳಲ್ಲಿ ಪ್ರವೀಣನಾಗಿ ವೈಶೇಷಿಕದಲ್ಲಿಯೂ ವ್ಯಾಕರಣದಲ್ಲಿಯೂ ಅಪ್ರತಿಮಪಾಂಡಿತ್ಯವನ್ನು ಪಡೆದಿದ್ದ ಸರ್ವಮಿತ್ರನೆಂಬ ಬ್ರಾಹ್ಮಣನನ್ನು ಶುದ್ಧೋದನನು

**ವಿದ್ಯಾಭ್ಯಾಸ**

---

* ಗೌತಮ ಬುದ್ಧನ ಕಾಲದಲ್ಲಿ ಉತ್ತಮ ಜಾತಿಯ ಮರದ ಹಲಗೆಯ ಮೇಲೆ ಅಕ್ಷರಗಳನ್ನು ಬರೆದು ಕಲಿತುಕೊಳ್ಳುತ್ತಿದ್ದುದು ವಾಡಿಕೆಯೆಂದು ತೋರುತ್ತದೆ. ಗೋಶೀರ್ಷ ಚಂದನವೆಂಬುದು ಶ್ರೀಗಂಧದ ಮರದ ಒಂದು ಜಾತಿಯೆಂದು ತೋರುತ್ತದೆ. ಗೌತಮ ಬುದ್ಧನು "ಉರಗಸಾರ ಚಂದನ"ದ ಹಲಗೆಯ ಮೇಲೆ ಅಕ್ಷರಗಳನ್ನು ಬರೆಯಲುಪಕ್ರಮಿಸಿದನೆಂದು "ಲಲಿತ ವಿಸ್ತರ"ವೆಂಬ ಗ್ರಂಥದಲ್ಲಿ ಹೇಳಿದೆ.

ವಾಯುವ್ಯ ಪ್ರಾಂತದಿಂದ ಕರೆಯಿಸಿ ಅವನಿಂದಲೂ ತನ್ನ ಮಗನಿಗೆ ಪಾಠಹೇಳಿಸಿದನು. ಸರ್ವಮಿತ್ರನು ಸತ್ಕುಲ ಪ್ರಸೂತನೂ, ಸಚ್ಚಾರಿತ್ರ ವುಳ್ಳವನೂ ಆಗಿದ್ದುದರಿಂದ ಶುದ್ಧೋದನನಿಗೆ ಆತನು ಅಚ್ಚುಮೆಚ್ಚಾಗಿದ್ದನು. ಸಿದ್ಧಾರ್ಥನ ಜೊತೆಗೆ ಅನೇಕ ಮಂದಿ ಶಾಕ್ಯಬಾಲಕರೂ ವ್ಯಾಸಂಗ ಮಾಡುವಂತೆ ರಾಜನು ಏರ್ಪಡಿಸಿದ್ದನು. ಸಿದ್ಧಾರ್ಥನಿಗೆ ಧನುರ್ವಿದ್ಯೆಯ ಪಾಠವೂ ಆಯಿತು. ಸುಲಭನೆಂಬವನು ಸಿದ್ಧಾರ್ಥನಿಗೆ ಆನೆಗಳನ್ನು ವಶಪಡಿಸಿಕೊಳ್ಳುವುದು, ಆನೆಯ ಮೇಲೆ ಕುಳಿತು ಯುದ್ಧಮಾಡುವುದು, ಮುಂತಾದುವುಗಳನ್ನು ಕಲಿಸಿದನು. ಯುವರಾಜ ಪದವಿಯ ಉನ್ನತ ಸ್ಥಿತಿಗೆ ತಕ್ಕಂತೆ ಸಿದ್ಧಾರ್ಥನು ಕಲಾಸಂಪನ್ನನಾಗಿ ಸುಶಿಕ್ಷಿತನೆನಿಸುವುದಕ್ಕೆ ಅವಶ್ಯವಾದ ಸಮಸ್ತ ಸಾಧನ ಸಂಪತ್ತಿಗಳನ್ನೂ ಶುದ್ಧೋದನನು ಕಲ್ಪಿಸಿದ್ದನು.

**ಕರುಣೆಯ ಪುತ್ಥಳಿ**

ಸಿದ್ಧಾರ್ಥನು ಕಾರುಣ್ಯದ ಸಿರಿಬೀಡೆನಿಸಿ ಲೋಕವಿಖ್ಯಾತನಾಗುವನೆಂಬ ಭವಿಷ್ಯವನ್ನು ಸಿದ್ಧಾರ್ಥನ ಹೃದಯವು ಆತನ ಬಾಲ್ಯದಲ್ಲಿಯೇ ಬಹುಚೆನ್ನಾಗಿ ಸೂಚಿಸಿ ಜನರನ್ನು ಮುಗ್ಧಗೊಳಿಸಿತು. ಅವನ ಚಿಕ್ಕಪ್ಪನ ಮಗನಾದ ದೇವದತ್ತನು ಒಂದುದಿನ ತನ್ನ ಉದ್ಯಾನದ ಕಡೆಗೆ ಹಾರಿಬರುತ್ತಿದ್ದ ಹಂಸವೊಂದನ್ನು ಕಂಡು, ಬಾಲಭಾವದ ಚಾಪಲ್ಯದಿಂದ ಅದರ ಕಡೆಗೆ ಬಾಣಪ್ರಯೋಗಮಾಡಿ ಘಾತಿಸಿದನು. ನಿರಪರಾಧಿಯಾದ ಆ ಬಡಪ್ರಾಣಿಯು, ಕುಸುಮ ರಾಶಿಗೆ ಬಿದ್ದ ಕಿಡಿಯಂತೆ ತನ್ನ ದೇಹಕ್ಕೆ ತಗುಲಿದ ಬಾಣದಿಂದ ಗಾಯಹೊಂದಿ ಸಿದ್ಧಾರ್ಥನಿಗೆಂದು ಏರ್ಪಟ್ಟಿದ್ದ ಉದ್ಯಾನದಲ್ಲಿ ಬಿದ್ದಿತು. ಬಾಲಕನಾದ ಸಿದ್ಧಾರ್ಥನು ಅದರ ಬಾಧೆಗೆ ಮನನೊಂದು ಪ್ರಿಯ ಬಂಧುವಿಗೆ ಸೇವೆಮಾಡುವಂತೆ ಅದಕ್ಕೆ ಚಿಕಿತ್ಸೆಮಾಡಿ ಉಪಚರಿಸಿದನು. ಗಾಯದಿಂದ ಅಂಬನ್ನು ಕಿರಿದು ತೆಗೆದಾಗ ಹಂಸದ ಶುಭ್ರ ದೇಹದಿಂದ ಚಿಮ್ಮಿದ ರಕ್ತವನ್ನು ನೋಡಿ ಸಿದ್ಧಾರ್ಥನು ಕಂಬನಿ

ದುಂಬಿದನಂತೆ. ಆ ಬಳಿಕ ಅವನು ಅದರ ಗಾಯವನ್ನು ತೊಳೆದು ಔಷಧವನ್ನು ಹಾಕಿದನು. ಆತನ ಪೋಷಣೆಯಿಂದಲೂ ಆದರ ದಿಂದಲೂ ಹಂಸವು ಮತ್ತೊಮ್ಮೆ ಆರೋಗ್ಯಲಾಭವನ್ನು ಪಡೆಯಿತು. ತನ್ನ ಬಾಣ ಹತ್ತಿಯಿಂದ ನೆಲಕ್ಕೆ ಬಿದ್ದ ಹಂಸೆಯು ತನಗೆ ಸೇರ ಬೇಕೆಂದೂ, ಅದನ್ನು ತನಗೆ ಕಳುಹಿಸಬೇಕೆಂದೂ ದೇವದತ್ತನಿಂದ ಸಿದ್ಧಾರ್ಥನಿಗೆ ಬಿನ್ನಹವು ಬಂದಿತು. ಬಡಹಕ್ಕಿಯ ಹರಣವನ್ನು ನೀಗುವುದಕ್ಕೆ ಪ್ರಯತ್ನಿಸಿದವನಿಗೆ ಅದು ಸೇರತಕ್ಕುದಿಲ್ಲವೆಂದೂ, ಅದಕ್ಕೆ ಪ್ರಾಣದಾನಮಾಡಿದ ತನಗೇ ಅದು ಸೇರತಕ್ಕುದು ಯುಕ್ತ ವೆಂಮೂ ಸಿದ್ಧಾರ್ಥನು ಉತ್ತರ ಹೇಳಿದನು. ಅಂದಿನಿಂದ ಸಿದ್ಧಾರ್ಥನ ಮೇಲೆ ದೇವದತ್ತನಿಗೆ ದ್ವೇಷವು ಮೂಡಿತು. ಅಂದು ದೇವದತ್ತನ ಹೃದಯದಲ್ಲಿ ಹೊತ್ತಿದ ದ್ವೇಷ ಜ್ವಾಲೆಯು ದಿನದಿನವೂ ಪ್ರಜ್ವಲಿ ಸುತ್ತ ಬಂದು, ಕೊನೆಗೆ ಕಾಡುಗಿಚ್ಚಾಗಿಯೇ ಪರಿಣಮಿಸಿತು.

ಬುದ್ಧನ ಹೃದಯವು ಕಾರುಣ್ಯನಿಧಿಯಾಗಿದ್ದಿತೆಂಬುದಕ್ಕೆ ಮತ್ತೊಂದು ನಿದರ್ಶನವೂ ಇದೆ. ಕಪಿಲವಸ್ತು ನಗರದಲ್ಲಿ ಪ್ರತಿ ವರ್ಷವೂ ಉಳುವಹಬ್ಬವು ವಿಶೇಷ ಸಂಭ್ರಮದಿಂದ ನಡೆಯುತ್ತಿದ್ದಿತು. ಆ ಹಬ್ಬದ ದಿನ ಎಲ್ಲಿ ನೋಡಿದರೂ ಉತ್ಸಾಹ ಸಂತೋಷಗಳೇ ತಾಂಡವವಾಡುತ್ತಿದ್ದುವು. ಪ್ರಜೆಗಳು ಒಟ್ಟು ನಗರವೇ ಒಂದು ತೇರಿ ನಂತೆ ಕಾಣುವ ಹಾಗೆ ತಳಿರು ತೋರಣಗಳಿಂದಲೂ ಧ್ವಜಪತಾಕೆ ಗಳಿಂದಲೂ ಶೃಂಗರಿಸುತ್ತಿದ್ದರು. ಮನೆಗಳು ನಾರಣೆ ಕಾರಣೆಗಳಿಂದ ಶೋಭಿಸುತ್ತಿದ್ದುವು. ಬಾಗಿಲುಗಳು ಹೂವಿನ ಹಾರಗಳಿಂದ ಅಲಂಕೃತ ವಾಗುತ್ತಿದ್ದುವು. ಮಂಗಳ ವಾದ್ಯಗಳು ಭೋರ್ಗರೆಯುತ್ತಿರುವಲ್ಲಿ, ರಾಜನು ಉತ್ತಮಾಶ್ವಗಳಿಂದ ಕೂಡಿದ ರಥದಲ್ಲಿ ಉತ್ಸವ ಹೊರಟು, ಮಂತ್ರಿ ಸೇನಾಧಿಪರೊಡನೆ ನಗರದ ಹೊರೆವಲಯಕ್ಕೆ ಬಿಜಯ ಮಾಡುತ್ತಿದ್ದನು. ಪ್ರಜೆಗಳು ಅಲ್ಲಿ ಕಿಕ್ಕಿರಿದು ಸೇರಿ, ಉಳುವ ಹಬ್ಬ ವನ್ನು ನೋಡಿ ಸಂತೋಷಿಸುತ್ತಿದ್ದರು. ರಾಜನೂ ಮಂತ್ರಿ ಸೇನಾ

ಧಿಪರೂ ನೇಗಿಲನ್ನು ಹಿಡಿದು ಉಳುವ ಹಬ್ಬವನ್ನು ನೆರವೇರಿಸುತ್ತಿದ್ದ ರೆಂದಮೇಲೆ, ಹಬ್ಬದ ವೈಭವ ವಿಜೃಂಭಣೆಗಳನ್ನು ವರ್ಣಿಸಲೂ ಬೇಕೆ? ಪುರಜನರಲ್ಲಿ ಯುವಕರಾದವರು ಸಾವಿರ ನೇಗಿಲುಗಳನ್ನು ಸಿದ್ಧಪಡಿಸಿ, ಎರಡು ಸಾವಿರ ಎತ್ತುಗಳನ್ನು ಆ ನೇಗಿಲುಗಳಿಗೆ ಹೂಡಿ ಅಣಿಮಾಡಿರುತ್ತಿದ್ದರು. ರಾಜನು ಅವರೆಲ್ಲರಿಗೂ ಅಧಿನಾಯಕನಾಗಿ ನಿಂತು' ಚಿನ್ನದ ನೇಗಿಲಿನಿಂದ ಉತ್ತು ಕೃಷಿಕಾರ್ಯದ ಆರಂಭ ಮಹೋತ್ಸವವನ್ನು ನೆರವೇರಿಸಿ ನಗರಕ್ಕೆ ಹಿಂತಿರುಗುತ್ತಿದ್ದನು. ಮಂತ್ರಿ ಸೇನಾಧಿಪರು ಬೆಳ್ಳಿಯ ನೇಗಿಲುಗಳನ್ನು ಹಿಡಿದು ತಮ್ಮೊಡೆಯ ನನ್ನು ಹಿಂಬಾಲಿಸುತ್ತಿದ್ದರು. ಅವರ ಹಿಂದೆ ವಿವಿಧ ವರ್ಣಗಳ ಉಡುಪುಗಳನ್ನು ಧರಿಸಿ ಅವುಗಳನ್ನು ಬೆಳಗಿಸುವ ಉತ್ಸಾಹದಿಂದ ಕಳಕಳಿಸುತ್ತಿದ್ದ ಪುರಜನರ ಸಾವಿರ ನೇಗಿಲುಗಳೂ ಸಾಲು ಸಾಲಾಗಿ ನಡೆಯುತ್ತಿದ್ದುವು.

ಸಿದ್ಧಾರ್ಥನು ಇನ್ನೂ ಬಾಲಕನಾಗಿದ್ದಾಗ, ಶುದ್ಧೋದನನು ಯುವರಾಜನಾದ ತನ್ನ ಮಗನನ್ನು ನೋಡಿ ಪ್ರಜೆಗಳೆಲ್ಲರೂ ಸಂತೋಷಿಸಲೆಂಬ ಬಯಕೆಯಿಂದಲೂ ಪ್ರಜೆಗಳ ಸಮುದಾಯವನ್ನು ನೋಡಿ ತನ್ನ ಮಗನು ಹಿಗ್ಗಬೇಕೆಂಬ ಆಶೆಯಿಂದಲೂ ಅವನನ್ನು ಉಳುವ ಹಬ್ಬಕ್ಕೆ ಕರೆದೊಯ್ದನು. ಪುರಜನರ ಉತ್ಸಾಹವನ್ನೂ, ನಗರಶೃಂಗಾರ ವನ್ನೂ, ನೇಗಿಲುಗಳ ಸಾಲುಗಳನ್ನೂ ನೋಡಿ ನೋಡಿ ಸಿದ್ಧಾರ್ಥನಿಗೆ ಉಲ್ಲಾಸವಾಯಿತು. ಆದರೆ, ಕೃಷಿಕರ್ಮದ ಪ್ರಾರಂಭ ಮಹೋತ್ಸವವು ನೆರವೇರಿ ನೇಗಿಲುಗಳು ಭೂಮಿಯನ್ನು ಬಗೆದೊಡನೆಯೇ ಅನೇಕ ಕ್ರಿಮಿಕೀಟಗಳು ಹೊರಬಿದ್ದುದನ್ನೂ, ಕಾಡುಪಾರಿವಾಳಗಳು ಗುಬ್ಬಚ್ಚಿಗಳು ಮುಂತಾದ ಹಕ್ಕಿಗಳು ಅವುಗಳನ್ನು ಕವಳಿಸಿದುದನ್ನೂ ಗಿಡಗಗಳು ಮೇಲಿನಿಂದ ಮಂಡಲಾಕಾರವಾಗಿ ಕೆಳಕ್ಕಿಳಿದು ಆ ಪಾರಿವಾಳ ಮುಂತಾದ ಹಕ್ಕಿಗಳನ್ನು ತಮ್ಮ ಆಹಾರಕ್ಕಾಗಿ ಕಚ್ಚಿಕೊಂಡು ಹೋದುದನ್ನೂ ಕಂಡು ಸಿದ್ಧಾರ್ಥನ ಉಲ್ಲಾಸವೆಲ್ಲ ಮಾಯ

ವಾಗಿ ಅವನ ಹೃದಯವು ಅನುಕಂಪದಿಂದ ತುಂಬಿಹೋಯಿತು. ಉಳುವ ಹುರುಡಿನಲ್ಲಿ ಎತ್ತುಗಳನ್ನು ಕೆಲವರು ತಿವಿದು ಹಿಂಸಿಸಿದುವನ್ನೂ ಅವನು ಕಂಡನು. ಜೀವನವೆಲ್ಲ ಹತ್ಯಮಯವೆಂದು ಭಾವಿಸಿ ಸಿದ್ಧಾರ್ಥನು ಮನನೊಂದನು. ಈ ಬಗೆಯ ಭೀಕರ ದೃಶ್ಯವನ್ನು ನೋಡುವುದಕ್ಕೆ ಮೊದಲು ಮೈನಾಹಕ್ಕಿಯ ಮೆಲ್ಲುಲುಹನ್ನು ಕೇಳಿ ಆನಂದಿಸಿದ ಆತನ ಕಿವಿಗಳಿಗೆ ಅದೇ ಮೈನಾಹಕ್ಕಿಯ ಗಾನವೇ ಆ ಬಳಿಕ ಕಠೋರವಾಗಿ, ಪ್ರಾಣಿವಧೆಯ ರಣಕಹಳೆಯ ವಿಕಟಧ್ವನಿಯೆಂದು ತೋರಿತು. ಅಲ್ಲಿ ನಿಲ್ಲಲಾರದವನಾಗಿ ಮೃದು ಮನಸ್ಸಿನ ಆ ಧೀರಬಾಲಕನು ಮನಸ್ಸಿಗೆ ಶಾಂತಿಯನ್ನು ದೊರೆಯಿಸುವ ನೆಲೆಯನ್ನು ಹುಡುಕಿಕೊಂಡು ಹೋದನು. ದಾರಿಯಲ್ಲಿ ಕಂಡ ಕಾಲುವೆಯೊಂದರಲ್ಲಿ ಹಾವಿನ ಹೊಟ್ಟೆಗೆ ಗ್ರಾಸವಾಗುತ್ತಿದ್ದ ಕಪ್ಪೆಯೊಂದರ ಕೊನೆಯ ಸಲದ ಆರ್ತಧ್ವನಿಯು ಆತನ ಹೃದಯವನ್ನು ವಿಶೇಷವಾಗಿ ಕಲಕಿತು. ಹಾವಿನ ಹಿಡಿತದಿಂದ ಅದನ್ನು ಬಿಡಿಸಲು ಸಿದ್ಧಾರ್ಥನು ಮುಂದೆ ಬರುವುದರೊಳಗಾಗಿ ಅದನ್ನು ಹಾವು ನುಂಗಿದುದನ್ನು ಕಂಡು ಅವನ ಮನಸ್ಸೇ ಕರಗಿಹೋಯಿತು. ಸಿದ್ಧಾರ್ಥನು ಹತಾಶನಾಗಿ ನೇರಿಳೆಯ ಮರವೊಂದನ್ನು ಕಂಡು ಶಾಂತಿಮಯವಾಗಿ ಪ್ರಶಸ್ತವಾಗಿದ್ದ ಅದರ ನೆರಳಿನಲ್ಲಿ ಆಲೋಚನಾಮಗ್ನನಾಗಿ ಕುಳಿತನು. ಅನೇಕ ಜನ್ಮಗಳ ಸಂಸ್ಕಾರದಿಂದ ಪುಟವಿಟ್ಟ ಚಿನ್ನದಂತಿದ್ದ ಆ ಮಹಾನುಭಾವನ ಮನಸ್ಸು ದೀರ್ಘಾಲೋಚನೆಯಲ್ಲಿ ಲೀನವಾಗಿ ಆತನಿಗೆ ಬಾಹ್ಯಸ್ಮರಣೆಯೇ ತಪ್ಪಿಹೋಯಿತು. ಹೀಗೆ ಸ್ವಲ್ಪಕಾಲವು ಕಳೆಯಿತು. ರಾಜಕುಮಾರನ ಪರಿಜನರು ಅತ್ತ ರಾಜನ ಚಿನ್ನದ ನೇಗಿಲನ್ನು ನೋಡುವ ಸಡಗರದಲ್ಲಿದ್ದುದರಿಂದಲೂ, ರಾಜಕುಮಾರನು ಅಲ್ಲಲ್ಲಿ ಸುತ್ತಾಡುತ್ತಿದ್ದುದರಿಂದ ಆತನು ಸಮೀಪದಲ್ಲಿಯೇ ಇರುವನೆಂಬ ಭ್ರಾಂತಿಯು ಅವರ ಮನಸ್ಸನ್ನಾವರಿಸಿದ್ದುದರಿಂದಲೂ, ಸಿದ್ಧಾರ್ಥನು ಜನಸಂದಣಿಯಿಂದ ನುಸುಳಿಹೋಗಿ ಮರೆಯಾದುದನ್ನು ಅವರು ನೋಡಲಿಲ್ಲ. ಕೊನೆಗೆ, ಶುದ್ಧೋದನರಾಜನು ತನ್ನ ಪುತ್ರ

ನನ್ನು ಕಾಣದೆ ಕಳವಳಪಡುತ್ತ ಪರಿಜನರೊಡನೆ ಮಗನನ್ನು ಹುಡುಕುತ್ತ ಬಂದನು. ಸಮಾಧಿಸ್ಥನಾದ ಯೋಗಿಯಂತೆ ಆ ಬಾಲ್ಯ ವಯಸ್ಸಿನಲ್ಲಿಯೇ ಬಾಹ್ಯಪ್ರಪಂಚ ಪರಿಜ್ಞಾನವನ್ನೇ ಕಳೆದುಕೊಂಡು ಆಲೋಚನಾಮಗ್ನನಾಗಿದ್ದ ತನ್ನ ಮಗನನ್ನು ಕಂಡು ರಾಜನು ಬೆರಗಾದನು. ರಾಜನನ್ನು ಹಿಂಬಾಲಿಸಿದ್ದ ಪ್ರಜೆಗಳ ಗುಂಪಿನಲ್ಲಿದ್ದ ಕೆಲವು ಮಂದಿ ಬಾಲಕ ಬಾಲಕಿಯರು ಚಪ್ಪಾಳೆ ಹೊಡೆಯುತ್ತಲೂ, ನಗುವಿನ ಲಹರಿಯಿಂದ ಲಲ್ಲೆಮಾಡುತ್ತಲೂ ಅರ್ಥವಿಲ್ಲದ ಮಾತುಗಳಿಂದ ಗಲಭೆಮಾಡಿದರು. ನೀರವವಾಗಿ ನಿಂತು ತಮ್ಮ ಮುಂದಿನ ಅಚ್ಚರಿಯ ನೋಟವನ್ನು ಸವಿಯುತ್ತಿದ್ದವರ ಶಾಂತಿಗೆ ಆ ಬಾಲಕ ಬಾಲಕಿಯರ ಲಲ್ಲೆಯಿಂದ ಸ್ವಲ್ಪ ಭಂಗವುಂಟಾಯಿತು. ಉತ್ತರ ಕ್ಷಣದಲ್ಲಿಯೇ ದೊಡ್ಡವರ ಸಂಜ್ಞೆಗಳಿಂದ ಮಕ್ಕಳ ಕಲಕಲ ಧ್ವನಿಯು ನಿಂತು, ಒಟ್ಟು ದೃಶ್ಯವೇ ಚಿತ್ರಗತವಾಗಿದ್ದಂತೆ ಸ್ತಬ್ಧತೆಯಿಂದ ಕಂಗೊಳಿಸಿತು. ಸಿದ್ಧಾರ್ಥನ ಕುಸುಮ ಕೋಮಲವಾದ ಹೃದಯವು ಕಲಕಿಹೋಗಿ ಆತನು ತನ್ನ ದೇಹವನ್ನೇ ಮರೆತು ಕುಳಿತಿದ್ದುದರ ಕಾರಣವನ್ನು ಕೇಳಿ, ಕಾರುಣ್ಯನಿಧಿಯಾದ ಸುಕುಮಾರ ಸಿದ್ಧಾರ್ಥನ ಮನೋವೃತ್ತಿಯ ಪರಿಚಯವನ್ನು ಪಡೆದು ಸಮಸ್ತರೂ ಮುಗ್ಧರಾಗಿ ಮೂಕಭಾವವನ್ನು ಪಡೆದರು.*

---

* ಶುದ್ಧೋದನನು ಅಲ್ಲಿಗೆ ಬಂದು ನೋಡಿದಾಗ ಸೂರ್ಯನು ಗಗನ ಮಧ್ಯದಿಂದ ಓರೆಯಾಗಿದ್ದರೂ, ಸಿದ್ಧಾರ್ಥನು ಕುಳಿತಿದ್ದ ಬಳಿಯಲ್ಲಿಯ ಮರದ ನೆರಳು ಮಾತ್ರ ಅದಕ್ಕನುಗುಣವಾಗಿ ಚಲಿಸದೆ ಇದ್ದಲ್ಲಿಯೇ ಇದ್ದುದನ್ನು ಕಂಡು ಸಿದ್ಧಾರ್ಥನು ಮಹಾಮಹಿಮನೆಂದು ಬಗೆದು, ಆತನಿಗೆ ನಮಸ್ಕಾರ ಮಾಡಿದನೆಂದು ಲಲಿತ ವಿಸ್ತರ ಮುಂತಾದ ಕೆಲವು ಬೌದ್ಧ ಗ್ರಂಥಗಳಲ್ಲಿ ಹೇಳಿದೆ. ಮತಸ್ಥಾಪಕರೆಲ್ಲರ ಜೀವನದಲ್ಲಿಯೂ ಅತಿಮಾನುಷ ವ್ಯಾಪಾರಗಳು ನಡೆದಂತೆ ವರ್ಣಿತವಾಗಿರುವುದರಿಂದ, ಅದಕ್ಕಾಗಿ ಒಂದು ಮತದವರು ಮತ್ತೊಂದು ಮತದವರನ್ನು ಆಕ್ಷೇಪಿಸುವಂತಿಲ್ಲ.

ಏಕಾಗ್ರಚಿತ್ತದಿಂದ ಕೂಡಿ ಆ ಬಾಲ್ಯ ವಯಸ್ಸಿನಲ್ಲಿಯೇ ಪರಿಣತರನ್ನೂ ವಿಸ್ಮಯಗೊಳಿಸುವಂತೆ ಆಲೋಚನಾಮಗ್ನನಾಗಿ ಹೊರಗಿನ ಪ್ರಪಂಚವನ್ನೇ ಮರೆಯುವಷ್ಟು ಸಾಮರ್ಥ್ಯವು ಸಿದ್ಧಾರ್ಥನಿಗಿದ್ದುದನ್ನು ಕಂಡು ಶುದ್ಧೋದನನು ಹರ್ಷಿಸಿದನು. ಆದರೂ, ತನ್ನ ಕಂದನೆಲ್ಲಿ ತನಗೂ ತನ್ನ ರಾಜ್ಯವೈಭವಕ್ಕೂ ದಕ್ಕದೆ ವಿರಕ್ತನಾಗಿ ಹೊರಟುಹೋಗುವನೋ–ಎಂದು ಆತನು ಒಡನೆಯೇ ಕಳವಳ ಹೊಂದಿದನು. ಜೀವನದಲ್ಲಿ ಕಂಡುಬರುವ ದುಃಖಮಯವಾದ ಸನ್ನಿವೇಶವಾವುದೂ ಸಿದ್ಧಾರ್ಥನ ದೃಷ್ಟಿಗೆ ಗೋಚರವಾಗದಂತೆ ಮಾಡಿ, ಅವನನ್ನು ಭೋಗಸಾಧನಗಳ ಮಧ್ಯದಲ್ಲಿ ನೆಲೆಗೊಳಿಸಿ ಸುಖದ ತೂಗು ಮಂಚದಲ್ಲಿ ಮಲಗಿಸಿದರೆ, ಅವನ ಮನಸ್ಸು ಮೋಹನಿದ್ರೆಯಲ್ಲಿ ಮೈಮರೆತು ವಿರಕ್ತಿಯ ಕಡೆಗೆ ಸುಳಿಯುವುದಕ್ಕೇ ಅವಕಾಶವಿಲ್ಲದಂತಾಗುವುದೆಂದು ಶುದ್ಧೋದನನು ನಿಶ್ಚಯ ಮಾಡಿದನು. ಬಾಲಕನ ವಯಸ್ಸು ಹೆಚ್ಚುತ್ತ ಬಂದಹಾಗೆಲ್ಲ ಶುದ್ಧೋದನನು ಅವನನ್ನು ಸುಖದ ಸೋಪಾನ ಮಾರ್ಗದಲ್ಲಿ ಮೇಲಕ್ಕೇರಿಸುತ್ತ ಬಂದನು. ಸಿದ್ಧಾರ್ಥನು ವಿದ್ಯಾಭ್ಯಾಸದಲ್ಲಿ ಮುಂದುವರಿದು ಪ್ರಪಂಚ ಪರಿಜ್ಞಾನವನ್ನು ಪಡೆದ ನವಯುವಕನಾಗಿ ಪರಿಣಮಿಸುವ ವೇಳೆಗೆ ಶುದ್ಧೋದನನು ಅವನಿಗೆ ಭೋಗಸಾಧನಗಳ ರೂಪದ ಸುವರ್ಣ ಪಂಜರವನ್ನು ನಿರ್ಮಿಸಿ ಅವನು ಅರಗಿಳಿಯಂತೆ ಅದರಲ್ಲಿ ಸುತ್ತಾಡುತ್ತಿದ್ದರೆ ಸಾಕೆಂದು ನಿರೀಕ್ಷಿಸಿಕೊಂಡಿದ್ದನು.

ಭೋಗಸಾಧನಗಳ ಸುವರ್ಣ ಪಂಜರ

ಬೇಸಗೆಯ ಕಾಲಕ್ಕೊಂದು, ಮಳೆಗಾಲಕ್ಕೊಂದು, ಮತ್ತು ಚಳಿಗಾಲಕ್ಕೊಂದು, ಈರೀತಿ ಮೂರು ಅರಮನೆಗಳು ಸಿದ್ಧಾರ್ಥನಿಗಾಗಿ ಸಿದ್ಧವಾದುವು. ಆ ಋತುಧರ್ಮವನ್ನನುಸರಿಸುವ ವಾಯುಗುಣ ಮುಂತಾದವುಗಳ ಪ್ರತಿಕೂಲಸ್ಥಿತಿಯಲ್ಲಿ ಕೂಡ ಹಿತಕರವಾಗಿರುವಂತೆ ಅವುಗಳನ್ನು ಕಟ್ಟಿದ್ದರು. ಅವುಗಳಿಗೆ ರಾಮಾ, ಸುರಾಮಾ, ಸುಭಟ,

ಎಂಬ ಹೆಸರುಗಳಿದ್ದುವು. ಬೇಸಗೆಯ ಕಾಲಕ್ಕೆಂದು ಕಟ್ಟಿದ್ದ ಅರಮನೆಯು ಒಂಬತ್ತು ಅಂತಸ್ತುಗಳುಳ್ಳದಾಗಿಯೂ, ತಣ್ಣಗಿರುವಂತೆ ಅಮೃತಶಿಲೆಯಿಂದ ನಿರ್ಮಿತವಾದ ಅಂತಃಪುರಗಳು, ಚಂದ್ರಶಾಲೆಗಳು, ಮುಂತಾದುವುಗಳಿಂದ ಕೂಡಿದುದಾಗಿಯೂ ಇದ್ದಿತು. ಅದರ ಸುತ್ತಲೂ ತಂಪಾದ ನೆರಳನ್ನು ಕೊಡುವ ದೊಡ್ಡದೊಡ್ಡ ಮರಗಳು ಬೆಳೆದಿದ್ದ ಮನೋಹರವಾದ ಉದ್ಯಾನವಿದ್ದಿತು. ಮಳೆಗಾಲವನ್ನು ಕಳೆಯುವುದಕ್ಕಾಗಿ ನಿರ್ಮಿಸಿದ್ದ ಅರಮನೆಯು ಐದು ಅಂತಸ್ತುಗಳುಳ್ಳದಾಗಿದ್ದಿತು. ಅದನ್ನು ಗಾರೆಯಿಂದಲೂ ಇಟ್ಟಿಗೆಗಳಿಂದಲೂ ಕಟ್ಟಿ ಥಳಿಥಳಿಸುವ ಬಣ್ಣ ಬಣ್ಣದ ಚದರ ಬಿಲ್ಲೆಗಳನ್ನು ಗೋಡೆಗಳಿಗೂ ನೆಲಕ್ಕೂ ಖಚಿತಪಡಿಸಿದ್ದರು. ಚಳಿಗಾಲದಲ್ಲಿ ವಾಸಮಾಡುವುದಕ್ಕಾಗಿ ಕಟ್ಟಿದ್ದ ಅರಮನೆಯಲ್ಲಿ ಚಳಿಯಿಂದ ನಡುಗಬೇಕಾದ ಆವಶ್ಯಕತೆಯೇ ಇಲ್ಲದಂತೆ ಗೋಡೆಗಳ ಒಳಮೈಯಿಗೆ ಗಾಜಿನಂತೆ ನುಣ್ಣಗಿದ್ದ ಮರದ ಹಲಗೆಗಳನ್ನು ಕೀಲಿಸಿ, ಬಹಳ ಬೆಲೆಬಾಳುವ ಹಸನಾದ ರತ್ನಕಂಬಳಿಗಳ ತೆರೆಗಳನ್ನು ಅಂತಃಪುರಗಳಲ್ಲಿ ಗೋಡೆಗಳ ಸುತ್ತಲೂ ಬಿಟ್ಟಿದ್ದರು. ಅಲ್ಲದೆ ಚಳಿಯು ವ್ಯಾಪಿಸದಂತೆ ಮಾಡುವ ಉದ್ದೇಶದಿಂದ ಹುಲಿಯ ಚರ್ಮಗಳನ್ನು ಗೋಡೆಗಳ ಒಳಮೈಯಲ್ಲಿ ಕೀಲಿಸಿ ಅನುಕೂಲಪಡಿಸಿದ್ದರು. ಚಳಿಗಾಲದ ಅರಮನೆಯು ಏಳು ಅಂತಸ್ತುಗಳಿಂದ ಕೂಡಿ, "ಸುಭಟ" ಎಂಬ ಹೆಸರಿಗೆ ತಕ್ಕಂತೆ ಚಳಿಯನ್ನು ಒಳಗೆ ಬಿಡದೆ ಒಳ್ಳೆಯ ಭಟನ ಹಾಗೆಯೇ ಕಾವಲಿದ್ದಿತು. ಉಳಿದ ಎರಡು ಅರಮನೆಗಳೂ "ರಾಮಾ", "ಸುರಾಮಾ" ಎಂಬ ಹೆಸರುಗಳಿಗೆ ತಕ್ಕಂತೆಯೇ ಮನೋಹರವಾಗಿಯೂ ರಮ್ಯವಾಗಿಯೂ ಇದ್ದುವು.

ಆ ಅರಮನೆಗಳು ಸಮಸ್ತ ಸುಖಸಾಧನಗಳಿಂದಲೂ ಸಮೃದ್ಧವಾಗಿ ಸೊಬಗಿನ ಸಿರಿಬೀಡೆನಿಸಿ ಚಿತ್ತಾಕರ್ಷಕವಾಗಿದ್ದುವು. ಅವುಗಳಲ್ಲಿ ಅತ್ಯಂತ ಬೆಲೆಬಾಳುವ ಶ್ಲಾಘ್ಯತರವಾದ ಸಾಮಾನುಗಳು ತುಂಬಿದ್ದುವು. ಎಲ್ಲಿ ನೋಡಿದರೂ ಅಂದ ಚಂದಗಳೇ! ಆ ಅರಮನೆಗಳ

ಸುತ್ತಲೂ ಪುಷ್ಪವಾಟಿಗಳೂ, ಫಲವೃಕ್ಷಗಳೂ, ಲತಾಮಂಟಪಗಳೂ ಅಮೃತ ಶಿಲಾಪಟ್ಟಿಕೆಗಳೂ, ಕಮಲ ಪುಷ್ಪಗಳಿಂದ ತುಂಬಿದ ಕಾಸಾರಗಳೂ, ಶೋಭಿಸುತ್ತಿದ್ದುವು. ಆ ಅರಮನೆಗಳ ಸುತ್ತಲೂ ಆಯುಧಪಾಣಿಗಳಾದ ಕಾವಲುಗಾರರು ತುಂಬಿದ್ದರು.

ಸಿದ್ಧಾರ್ಥನು ಮುಂದೆ ಚಕ್ರವರ್ತಿಯಾಗಬೇಕೆಂದು ಹಾರೈಸುತ್ತಿದ್ದ ಶುದ್ಧೋದನನು ವಿರಕ್ತಿಹೇತುವಾದ ಸನ್ನಿವೇಶವನ್ನೇ ತಪ್ಪಿಸಬೇಕೆಂಬ ಬಯಕೆಯಿಂದ, ವೃದ್ಧರು, ರೋಗಿಗಳು, ದರಿದ್ರರು ಮುಂತಾದವರಾರೂ ಆ ಪ್ರಾಸಾದಗಳ ಸುತ್ತಲೂ ಇದ್ದ ಉದ್ಯಾನದ ಹೊರಪ್ರಾಕಾರದ ಪ್ರದೇಶಕ್ಕೆ ಕೂಡ ಸುಳಿಯಲು ಅವಕಾಶಕೊಡಕೂಡದೆಂದು ಕಾವಲುಗಾರರಿಗೆ ಅಪ್ಪಣೆಮಾಡಿದ್ದನು. ಶಾಕ್ಯಮನೆತನದವರಲ್ಲಿ ಅಭಿಜಾತ್ಯವುಳ್ಳ ಅನೇಕ ಮಂದಿ ಯುವಕರು ಸಿದ್ಧಾರ್ಥನೊಡನೆ ಇರತಕ್ಕದೆಂದು ರಾಜಾಜ್ಞೆಯಾಗಿದ್ದಿತು. ಅವರೆಲ್ಲರೂ ಸೇರಿ ಸುಖಸಂಕಥಾವಿನೋದದಿಂದ ಕಾಲಕ್ಷೇಪಮಾಡುತ್ತಲೂ, ಒಟ್ಟಿಗೆ ಓದಿಬರೆದು ನಲಿದಾಡುತ್ತಲೂ ಇರಬೇಕೆಂದು ಶುದ್ಧೋದನನು ವ್ಯವಸ್ಥೆಮಾಡಿದ್ದನು. ಸಿದ್ಧಾರ್ಥನ ಸೇವೆಗೆ ಆತನು ಹಲವು ಮಂದಿ ಸೇವಕರನ್ನು ನೇಮಕಮಾಡಿದ್ದನು. ಸ್ನಾನಮಾಡಿಸಲು ಕೆಲವರು, ಎಣ್ಣೆಯನ್ನೊತ್ತಿ ಅಭ್ಯಂಜನಮಾಡಿಸುವುದಕ್ಕೆ ಕೆಲವರು, ತಲೆಯನ್ನು ಬಾಚುವುದಕ್ಕೆ ಕೆಲವರು, ಕನ್ನಡಿಯನ್ನು ಹಿಡಿಯುವುದಕ್ಕೆ ಕೆಲವರು, ಉಡುಪುಗಳಿಗೆ ಪುಷ್ಪಸಾರಗಳನ್ನು ("ಸೆಂಟು"ಗಳನ್ನು) ಹಾಕುವುದಕ್ಕೆ* ಕೆಲವರು, ಉಡುಪುಗಳನ್ನು ಹಾಕುವುದಕ್ಕೆ ಕೆಲವರು, ಈ ರೀತಿ ಸಿದ್ಧಾರ್ಥನ ಸೇವೆಗೆ ಅಸಂಖ್ಯಾತಮಂದಿ ಸೇವಕ ಸೇವಕಿ

* ಪ್ರಾಚೀನ ಕಾಲದಲ್ಲಿ ನಮ್ಮ ದೇಶದಿಂದ ಗ್ರೀಸ್ ರಾಜ್ಯಕ್ಕೂ ರೋಮನ್ ಚಕ್ರಾಧಿಪತ್ಯದ ನಾನಾ ಪ್ರಾಂತಗಳಿಗೂ ಪುಷ್ಪಸಾರಗಳು ಹೋಗುತ್ತಿದ್ದುದು ಸುಪ್ರಸಿದ್ಧವಾದ ಸಂಗತಿ. ಇಲ್ಲಿಯವರು ಅವುಗಳನ್ನು ಮೆಚ್ಚಿ ಕೊಂಡಾಡಿ ಭಾರಿ ಪ್ರಮಾಣದಲ್ಲಿ ಕೊಳ್ಳುತ್ತಿದ್ದರು.

ಯರಿದ್ದರು. ಅವನ ಸೇವೆಗೆ ನೇಮಕವಾಗಿದ್ದವರೆಲ್ಲರಿಗೂ ಶುದ್ಧವಾದ ಸಾತ್ವಿಕಾಹಾರವನ್ನು ಕೊಡಬೇಕೆಂದು ರಾಜಾಜ್ಞೆಯಾಗಿದ್ದುದು ಮತ್ತೊಂದು ಹೆಚ್ಚಿನ ಸಂಗತಿ. ಈ ವಿಚಾರವು ಶ್ಲಾಘನೆಗೆ ಅರ್ಹವಾದುದು. ರಾಜಕುಮಾರನ ಆಹಾರವಂತೂ, ತೀರಪರಿಶುದ್ಧವೆನಿಸಿದ ಸಾತ್ವಿಕಾಹಾರವೇ ಆಗಿರಬೇಕೇ ಹೊರತು, ತಾಮಸಾಹಾರವಾವುದನ್ನೂ ಅವನಿಗೆ ಕೊಡಕೂಡದೆಂದು ಶುದ್ಧೋದನನು ಕಟ್ಟಪ್ಪಣೆ ಮಾಡಿದ್ದನು. ಪಕ್ವವಾದ ಮತ್ತು ರುಚಿಕರವಾದ ಬಗೆ ಬಗೆಯ ಹಣ್ಣುಗಳನ್ನು ಅವನು ಭಕ್ಷಿಸಬೇಕೆಂದೂ, ಹಗಲಿನಲ್ಲಿ ಅವನು ಉದ್ಯಾನ ವಿಹಾರಕ್ಕೆ ಹೊರಟಾಗ ಬಿಸಿಲಿನಿಂದ ಆಯಾಸವಾಗದಂತೆ ಬಿಳಿಯ ಬಣ್ಣದ ಕೌಶೇಯದ ಶ್ವೇತಚ್ಛತ್ರವನ್ನು ಹಿಡಿಯಬೇಕೆಂದೂ ರಾತ್ರಿಯ ವೇಳೆ ಅವನ ಮಂಚದ ಸುತ್ತಲೂ ಮತ್ತು ಮೇಲುಭಾಗದಲ್ಲಿಯೂ ನೆಯ್ದು ಗಾಳಿಯು ಪರೆಯುಂತಿದ್ದ ಢಾಕಾನಗರದ ಮಸ್ಲಿನಿನ ಸೊಳ್ಳೆಯ ತೆರೆಯಿರಬೇಕೆಂದೂ ಗೊತ್ತಾಗಿದ್ದಿತು. ರಾಜಭೋಗದ ನಿತ್ಯೋತ್ಸವದ ವೈಭವ ಮಧ್ಯದಲ್ಲಿ ಸಿದ್ಧಾರ್ಥನು ಸುಖದ ಸುಪ್ಪತ್ತಿಗೆಯನ್ನೇರಿ ಆನಂದಿಸುತ್ತಿದ್ದನು. ಮುಂದೆ ರಾಜನಾಗಬೇಕಾದವನನ್ನು ಶೌರ್ಯದೂರನನ್ನಾಗಿ ಮಾಡುವ ಭೋಗ ಸಾಮ್ರಾಜ್ಯದಲ್ಲಿ ಆರೀತಿ ಬಿಟ್ಟಿರುವುದು ಯುಕ್ತವಲ್ಲವೆಂದೂ, ಅವನ ತೋಳುಬಲವನ್ನು ಹೆಚ್ಚಿಸಬೇಕೆಂದೂ, ಶುದ್ಧೋದನನ ಸಹೋದರರೂ ಬಂಧುಗಳೂ ಶುದ್ಧೋದನನಿಗೆ ಮೊರೆಯಿಟ್ಟರು.

ಸಿದ್ಧಾರ್ಥನ ವಯಸ್ಸು ಹೆಚ್ಚುತ್ತ ಬಂದಹಾಗೆಲ್ಲ ಶುದ್ಧೋದನನು ಅವನಲ್ಲಿ ಐಹಿಕ ಸುಖವನ್ನು ಕಾಲಿನಿಂದೊದೆದು ವಿರಕ್ತನಾಗುವನೋ ಎಂದು ಕಳವಳಪಡಲಾರಂಭಿಸಿದನು.

**ವಧೂವರಣ**

ತನ್ನ ಮಗನ ವಿಚಾರದಲ್ಲಿ ದೈವಜ್ಞರು ಸೂಚಿಸಿದ್ದ ಭವಿಷ್ಯವಾಣಿಯು ಆತನನ್ನು ಬಾಧಿಸುತ್ತಿದ್ದಿತು. ಸಿದ್ಧಾರ್ಥನಿಗೆ ಹದಿನಾರು ವರ್ಷ ವಯಸ್ಸಾಯಿತು. ಅವನಿಗೆ ವಿರಕ್ತಿಯುಂಟಾಗದಂತೆ ಮಾಡಲು ವಿವಾಹವೇ ಸಿದ್ಧೌಷಧ

ವೆಂದು, ಆಪ್ತರ ಮಂತ್ರಾಲೋಚನೆಯನ್ನು ಕೇಳಿದ ಬಳಿಕ, ಆತನು ನಿಷ್ಕರ್ಷೆಮಾಡಿದನು. ಆದರೂ ಆತನಿಗೆ ಹೆಜ್ಜೆಹೆಜ್ಜೆಗೂ ಅನುಮಾನದ ಆತಂಕ. ಸಿದ್ಧಾರ್ಥನ ಮನಸ್ಸಿಗೆ ಬೇಡದವಳನ್ನು ತಾನೆಲ್ಲಿ ಆರಿಸಿ ಪ್ರಮಾದವಾದೀತೋ, ಅವನೆಲ್ಲಿ ವಿವಾಹವೇ ಬೇಡವೆನ್ನುವನೋ ಅಥವಾ ವಿವಾಹ ಮಾಡಿಕೊಂಡರೂ ಒಲ್ಲದ ಹೆಂಡತಿಯೊಡನೆ ಸಂಸಾರ ಮಾಡಿಕೊಂಡಿರಲಾರದೆ ರಾಜತ್ವವನ್ನೇ ಪರಿತ್ಯಜಿಸಿ ಅವನೆಲ್ಲಿ ಅರಣ್ಯ ವನ್ನು ಆಶ್ರಯಿಸುವನೋ ಎಂಬ ಶಂಕೆಗಳಿಂದಲೂ ಆತನು ಬಳಲಿ ಬೆಂಡಾದನು. ಸಿದ್ಧಾರ್ಥನು ಮೆಚ್ಚುವವಳನ್ನು ಕಂಡುಹಿಡಿಯುವು ದಕ್ಕೆ ಆತನು ಪ್ರಶಸ್ತವಾದುದೊಂದು ಉಪಾಯವನ್ನು ಮಾಡಿದನು. ಸಿದ್ಧಾರ್ಥನ ಅರಮನೆಯಲ್ಲಿ ಶಾಕ್ಯಮನೆತನಕ್ಕೆ ಸೇರಿದ ಸ್ತ್ರೀಯರಿಗೂ ಕನ್ಯೆಯರಿಗೂ ರಾಜಕುಮಾರನು ಆಭರಣಗಳ ಮೆಚ್ಚನ್ನು ಕೊಡುವ ನೆಂದೂ, ಅದಕ್ಕಾಗಿ ಅವರೆಲ್ಲರೂ ಬರಬೇಕೆಂದೂ ವಾರ್ತೆಯನ್ನು ಕಳುಹಿಸಿ ಶುದ್ಧೋದನನು ಅದಕ್ಕಾಗಿ ಒಂದು ಶುಭದಿನವನ್ನು ಗೊತ್ತು ಮಾಡಿ ಆಭರಣಗಳನ್ನು ಮಾಡಿಸಿದನು. ರಾಜಪುತ್ರನ ಕೈಯಿಂದ ಆಭರಣವು ದೊರೆಯುವುದೆಂಬ ಸಂಗತಿಯನ್ನು ಕೇಳಿ ಶಾಕ್ಯವಂಶದ ಸ್ತ್ರೀಯರೆಲ್ಲರೂ ತಮ್ಮ ಪುತ್ರಿಯರನ್ನು ಕರೆದುಕೊಂಡು ವಿಶೇಷ ಸಡಗರದಿಂದ ಅರಮನೆಯಲ್ಲಿ ಗುಂಪು ಕೂಡಿದರು. ಸಿದ್ಧಾರ್ಥನು ಭದ್ರಾಸನದಲ್ಲಿ ಮಂಡಿಸಿ, ಒಬ್ಬೊಬ್ಬರಾಗಿ ತನ್ನ ಬಳಿಗೆ ಬಂದ ಮಹಿಳೆಯರಿಗೆ ಆಭರಣಗಳನ್ನು ಕೊಡಲುಪಕ್ರಮಿಸಿದನು. ಇತರರ ಇಂಗಿತವನ್ನರಿಯಲು ಸಮರ್ಥರಾದ ಕೆಲವು ಮಂದಿ ಆಪ್ತರು ಭದ್ರಾಸನದ ಬಳಿಯಲ್ಲಿದ್ದು, ಸಿದ್ಧಾರ್ಥನು ಯಾವ ಕನ್ಯೆಯ ರೂಪ ವನ್ನು ನೋಡಿ ಮುಗ್ಧನಾಗಿ ಆನಂದಿಸುವನೆಂಬುದನ್ನು ಪರಿಶೀಲಿಸಿ ತನಗೆ ರಹಸ್ಯವಾಗಿ ತಿಳಿಸುವಂತೆ ಶುದ್ಧೋದನನು ಕಟ್ಟುಮಾಡಿದ್ದನು.

ಒರಿಯ ಮುತ್ತೈದೆಯರೆಲ್ಲರೂ ಸಿದ್ಧಾರ್ಥನ ವಿನಯಸಂಪನ್ನವಾದ ಮುಖಭಾವವನ್ನು ನೋಡಿ ಆನಂದಿಸಿ, ಅವನು ಆದರದಿಂದ ಕೊಟ್ಟ

ಆಭರಣಗಳನ್ನು ಸ್ವೀಕರಿಸಿ ಅವನ ಶ್ರೇಯಸ್ಸನ್ನು ವರ್ಧಿಸಿ ಅವನು ಸುಖವಾಗಿ ಬಾಳಲೆಂದು ಹರಸಿ ಮಂದಹಾಸವನ್ನು ಬೀರುತ್ತ ಮರೆಯಾಗುತ್ತಿದ್ದರು. ಅವಿವಾಹಿತೆಯರಾದವರು ಕೆಲವರು ಅವನ ಯುವರಾಜ ಪದವಿಯ ಭಯದಿಂದಲೂ, ಕೆಲವರು ಮುಗ್ಧಭಾವದ ಮಂದಸ್ಮಿತದಿಂದಲೂ, ಕೆಲವರು ಬಾಲಿಕಾ ಭಾವದ ಚಪಲತೆಯ ನೋಟದಿಂದಲೂ, ಕೆಲವರು ರಾಜಕುಮಾರನ ಮುಖದ ಮೇಲೆ ತಾಂಡವವಾಡುತ್ತಿದ್ದ ತೇಜಸ್ಸಿನ ಪ್ರಭಾವದ ದೆಸೆಯಿಂದ ತಮ್ಮ ಹೃದಯದಲ್ಲಿ ಹುಟ್ಟಿದ ಅಧೀರತೆಯ ಕಳವಳದಿಂದಲೂ, ಆತನಿತ್ತ ಆಭರಣಗಳನ್ನು ಸ್ವೀಕರಿಸಿ ಮೌನದಿಂದ ಮುಂದೆ ಸಾಗಿದರು.

ಕೊನೆಯಲ್ಲಿ ಒಬ್ಬಳು ಮಾತ್ರವೇ ಉಳಿದಳು. ಅವಳು ಶುದ್ಧೋದನನ ಸಚಿವನಾದ ಮಹಾನಾಮನ* ಮುದ್ದು ಮಗಳಾದ ಯಶೋಧರೆಯೆಂಬ ಕನ್ಯೆ. ಜನಸಂದಣಿಯಲ್ಲಿ ನುಗ್ಗಿ ದಾರಿಯನ್ನು ಬಿಡಿಸಿಕೊಂಡು ಆತುರದಿಂದ ಮುಂದೆ ಹೋಗುವುದು ಅಸಭ್ಯತೆಯ ಕುರುಹೆಂದು ಭಾವಿಸಿ, ಸುಸಂಸ್ಕೃತಳಾದ ಆಕೆಯು ಕೊನೆಯವರೆಗೂ ಕಾದಿದ್ದು ಬಳಿಕ ಸಿದ್ಧಾರ್ಥನ ಭದ್ರಾಸನದ ಬಳಿಗೆ ಬಂದಳು. ಅಮೋಘವಾದ ಆಕೆಯ ರೂಪರಾಶಿಯಿಂದಲೂ, ಆಕೆಯ ಮಂದಗಮನದ ಘನತೆ ಗಾಂಭೀರ್ಯಗಳಿಂದಲೂ, ರಾಜಪುತ್ರನ ಕೈಯಿಂದ ತಾನು ಆಭರಣವನ್ನು ಸ್ವೀಕರಿಸುವುದು ಆತನಿಗೇ ಒಂದು ಉಪಕಾರವೆಂಬ ಭಾವನೆಯಿಂದ ಆಕೆಯು ಅವನೆಡೆಗೆ ಬರುತ್ತಿದ್ದಳೋ ಎಂಬಂತೆ ತೋರುತ್ತಿದ್ದ ಅಭಿಮಾನಪೂರಿತವಾದ ಆಕೆಯ ವಿಲಾಸದಿಂದಲೂ ಸಿದ್ಧಾರ್ಥನು ಚಕಿತನಾಗಿ ಆಕೆಯ ಮುಖವನ್ನೇ ಮುಗುಳುನಗೆಯಿಂದ ದೃಷ್ಟಿಸಿ ನೋಡಿದನು.

---

* ಯಶೋಧರೆಯ ತಂದೆಯ ಹೆಸರು ಮಹಾನಾಮನೆಂದು ಕೆಲವು ಗ್ರಂಥಗಳಲ್ಲಿಯೂ, ಶಾಕ್ಯದಂಡಪಾಣಿಯೆಂದು ಕೆಲವು ಗ್ರಂಥಗಳಲ್ಲಿಯೂ, ಸುಪ್ರಬುದ್ಧನೆಂದು ಕೆಲವು ಗ್ರಂಥಗಳಲ್ಲಿಯೂ ಹೇಳಿವೆ.

 

ಆಕೆಯು ಸಿದ್ಧಾರ್ಥನ ಬಳಿಗೆ ಬಂದು, ಅವನು ತನಗೆ ಚಿರಪರಿಚಿತನಾಗಿದ್ದವನೋ, ಎಂಬಂತೆ "ಯುವರಾಜ! ನನಗಾಗಿ ಯಾವ ರತ್ನಾಭರಣವನ್ನು ಸಿದ್ಧಪಡಿಸಿಟ್ಟಿರುವೆ?" ಎಂದು ಕೇಳಿದಳು. ಆದರೆ ಆಕೆಯು ಬರುವ ವೇಳೆಗೆ ಎಲ್ಲ ಆಭರಣಗಳೂ ಮುಗಿದುಹೋಗಿದ್ದುವು. ಸಿದ್ಧಾರ್ಥನು "ಎಲ್ಲ ಒಡವೆಗಳನ್ನೂ ಕೊಟ್ಟು ಮುಗಿಸಿದೆನು. ಇನ್ನಾವುದೂ ಉಳಿದಿಲ್ಲ" ಎಂದನು. ಯಶೋಧರೆಯು ದಿಟ್ಟತನದಿಂದ, "ರಾಜಕುಮಾರ! ನನಗಾಗಿ ಒಂದು ಒಡವೆಯನ್ನೂ ಉಳಿಸದೆ ಎಲ್ಲವನ್ನೂ ಇತರರಿಗೇ ಹಂಚಲು ನಾನು ಮಾಡಿದ ಅಪರಾಧವಾದರೂ ಏನು?" ಎಂದಳು. ಸಿದ್ಧಾರ್ಥನು ಅವಳ ಸೌಂದರ್ಯವನ್ನೂ, ಧೀರತೆಯನ್ನೂ ಕಂಡು ವಿಸ್ಮಿತನಾಗಿ, ಮುಗುಳುನಗೆಯಿಂದ ಅವಳನ್ನೇ ದೃಷ್ಟಿಸಿ ನೋಡುತ್ತ, ತನ್ನ ಕೈಬೆರಳಿನಲ್ಲಿದ್ದ (ಲಕ್ಷಸುವರ್ಣ ನಾಣ್ಯಗಳಷ್ಟು ಬೆಲೆಬಾಳುತ್ತಿದ್ದ) ಉತ್ತಮವಾದ ವಜ್ರದುಂಗುರವನ್ನು ತೆಗೆದು ಅವಳಿಗೆ ಕೊಡಹೋದನು. ಧೀರೆಯಾದರೂ ಉದಾರ ಹೃದಯೆಯಾದ ಯಶೋಧರೆಯು "ಬೇಡ, ರಾಜಕುಮಾರ, ಬೇಡ. ಸುಕುಮಾರನಾದ ನಿನ್ನ ಬೆರಳಿನಲ್ಲಿದ್ದರೆ ಆ ಉಂಗುರಕ್ಕೆ ಅನಿರ್ವಚನೀಯವಾದ ಚೆಲುವು. ಅದನ್ನು ಬೆರಳಿನಿಂದ ಕಳಚಬೇಡ. ಆ ಬೆರಳಿನಲ್ಲಿಷ್ಟೇ ಅದು ಬೆಳಗಲಿ!" ಎಂದಳು. ಸಿದ್ಧಾರ್ಥನು ಮತ್ತಷ್ಟು ವಿಸ್ಮಿತನಾಗಿ ಮಾತನಾಡುವ ಶಕ್ತಿಯನ್ನೇ ಕಳೆದುಕೊಂಡು ಯಶೋಧರೆಯ ಮುಖವನ್ನೇ ನೋಡಿದನು. ಇಬ್ಬರ ದೃಷ್ಟಿಗಳೂ ಕ್ಷಣಕಾಲ ಒಟ್ಟುಗೂಡಿದುವು. ಆ ಕ್ಷಣಕಾಲದಲ್ಲಿಯೇ ಅವರಲ್ಲಿ ಪರಸ್ಪರವಾಗಿ ಒಬ್ಬರ ಹೃದಯದಿಂದ ಮತ್ತೊಬ್ಬರ ಹೃದಯಕ್ಕೆ ಒಂದು ಪ್ರೇಮ ಜಲಧಿಯೇ ಪ್ರವಹಿಸಿದಂತಾಗಿ ಅವರೀರ್ವರೂ ಮೌನವಾಂತರು. ಯಶೋಧರೆಯು ಹೊರಟುಹೋದಳು; ಅವಳನ್ನು ಹಿಂಬಾಲಿಸಿದ ಸಿದ್ಧಾರ್ಥನ ಮನಸ್ಸು ಬೇರೆ ಆತನ ಬಳಿಗೆ ಹಿಂತಿರುಗಲಿಲ್ಲ.

ಯಶೋಧರೆಯು ತನ್ನ ದೇಹವು ತನ್ನೊಡನೆ ಬರುತ್ತಿದ್ದರೂ ತನ್ನ ಮನಸ್ಸು ಮಾತ್ರ ಸಿದ್ಧಾರ್ಥನ ಸೆರೆಯಲ್ಲಿಯೇ ಉಳಿದುಹೋಯಿ

ತೆಂಬುದನ್ನು ಕಂಡುಕೊಂಡು, ನಿರ್ವಾಹವಿಲ್ಲದೆ ಮನೆಗೆ ಹಿಂತಿರುಗಿದಳು. ಅವರೀರ್ವರಿಗೂ ನಡೆದ ಸರಸ ಸಂಭಾಷಣೆಗಳ ವಿಚಾರವು ರಹಸ್ಯವಾಗಿ ಶುದ್ಧೋದನನ ಕಿವಿಗಳಿಗೆ ತಲುಪಿತು. ಸತ್ಕುಲಪ್ರಸೂತೆಯಾಗಿಯೂ ರೂಪರಾಶಿಯಾಗಿಯೂ ಇದ್ದ ಯಶೋಧರೆಯು ತನ್ನ ಸೊಸೆಯಾಗುವಳೆಂದು ಆತನು ಹಿಗ್ಗಿದನು.

**ಮಹಾನಾಮನು ಕೇಳಿದ ಶುಲ್ಕ**

ಯಶೋಧರೆಯನ್ನು ವಿವಾಹ ಮಾಡಿಕೊಳ್ಳಲು ಸಿದ್ಧಾರ್ಥನಿಗೆ ಸಮ್ಮತಿಯುಂಟೆ ಎಂಬುದನ್ನು ಶುದ್ಧೋದನನು ಪ್ರೀತಿಯಿಂದ ವಿಚಾರಿಸಿದನು. ಮಗನು ನಸುನಾಚಿ ತನ್ನ ಸಮ್ಮತಿಯನ್ನು ಸೂಚಿಸಿದ ಮಾತುಗಳು ತಂದೆಗೆ ಕರ್ಣಾಮೃತವೆನಿಸಿದುವು. ಸಚಿವನಾದ ಮಹಾನಾಮನಿಗೆ ರಾಜನಿಂದ ಬಿನ್ನಪವು ಹೋಯಿತು. ಶಾಕ್ಯಮನೆತನದವರೆಲ್ಲರೂ ಸ್ವಾತಂತ್ರ್ಯಪ್ರೇಮಿಗಳಾದ ಕೆಚ್ಚೆದೆಯ ಕಟ್ಟಾಳುಗಳು. ರಾಜಕೀಯ ಕ್ಷೇತ್ರದಲ್ಲಿ ರಾಜನ ಕೋರಿಕೆಯು ಶಿರೋಧಾರ್ಯವಾದರೂ, ಆತನ ಮಗನಿಗೆ ತನ್ನ ಪ್ರಿಯಪುತ್ರಿ ಯಶೋಧರೆಯನ್ನು ಕೊಡುವುದಕ್ಕೆ ಸಂಬಂಧಪಟ್ಟ ಸಾಂಸಾರಿಕಕ್ಷೇತ್ರದಲ್ಲಿ ರಾಜನ ಬಿನ್ನಪವನ್ನು ಲಾಲಿಸುವುದಕ್ಕೂ ಬಿಡುವುದಕ್ಕೂ ತಾನೇ ಸ್ವತಂತ್ರನೆಂದು ಮಹಾನಾಮನು ಭಾವಿಸಿದನು. ಸಿದ್ಧಾರ್ಥನು ಶಸ್ತ್ರಾಸ್ತ್ರಗಳ ಪ್ರಯೋಗದಲ್ಲಿಯೂ, ಮಲ್ಲಯುದ್ಧದಲ್ಲಿಯೂ, ವಿದ್ಯಾಪ್ರೌಢಿಯಲ್ಲಿಯೂ ಶಾಕ್ಯಮನೆತನದ ಯುವಕರನ್ನೆಲ್ಲ ಮೀರಿಸಿ ತನ್ನ ಕ್ಷಾತ್ರತೇಜವನ್ನು ಮೆರೆದರೆ ಯಶೋಧರೆಯು ಅವನನ್ನು ವರಿಸುವಳೆಂದೂ, ಶೌರ್ಯ ಪ್ರದರ್ಶನದ ಶುಲ್ಕವಿಲ್ಲದೆ ಹೋದಲ್ಲಿ ಯಶೋಧರೆಯು ದುರ್ಲಭಳೆಂದೂ ಮಹಾನಾಮನಿಂದ ಉತ್ತರವು ಬಂದುದನ್ನು ಕಂಡು, ಶುದ್ಧೋದನನು ಖಿನ್ನನಾದನು. ಮಹಾನಾಮನ ಸ್ವಾತಂತ್ರ್ಯಪ್ರೇಮವನ್ನು ಶುದ್ಧೋದನನು ಮನಸಾರೆ ಮೆಚ್ಚಿ ಅಭಿನಂದಿಸಿದನಾದರೂ, ಸುಕುಮಾರನಾದ ಸಿದ್ಧಾರ್ಥನಲ್ಲಿ ಅಷ್ಟು

ಸಾಮರ್ಥ್ಯವಿರಲಾರದೆಂಬ ಸಂದೇಹದಿಂದ ಪರಿತಪಿಸಿದನು. ತಂದೆಯು ಖಿನ್ನನಾಗಿದ್ದುದನ್ನು ಕಂಡು ಸಿದ್ಧಾರ್ಥನು ಅದಕ್ಕೆ ಕಾರಣವನ್ನು ಕೇಳಿದನು. ಅವನು ಬಹುವಾಗಿ ಪ್ರಾರ್ಥಿಸಿದ ಮೇಲೆ ವಿಶೇಷ ಸಂಕೋಚದಿಂದ ಶುದ್ಧೋದನನು ತನ್ನ ವಿಷಾದಕ್ಕೆ ಕಾರಣವನ್ನು ತಿಳಿಸಿದನು. ಅವಶ್ಯವಾಗಿ ಸ್ಪರ್ಧೆಯನ್ನೇರ್ಪಡಿಸಬಹುದೆಂದೂ, ಯುವಕರೆಲ್ಲರನ್ನೂ ಸೋಲಿಸುವ ಭರವಸೆಯು ತನಗಿದ್ದಿತೆಂದೂ ಸಿದ್ಧಾರ್ಥನು ತಂದೆಗೆ ಬಿನ್ನೈಸಿದನು. ಅದನ್ನು ಕೇಳಿ ಶುದ್ಧೋದನನಿಗೆ ಮಹಾನಂದವಾಯಿತು. ಅವನು ಸಡಗರದಿಂದ ಸ್ಪರ್ಧೆಯ ದಿನವನ್ನು ಗೊತ್ತುಮಾಡಿ ಡಂಗುರ ಹಾಕಿಸಿದನು.

**ವಿಜಯಮಾಲಿಕೆ**

ಸ್ಪರ್ಧೆಯು ನಡೆಯಲು ಗೊತ್ತಾಗಿದ್ದ ಪ್ರಶಸ್ತವಾದ ಬಯಲಿನ ಸುತ್ತಲೂ ಶಾಕ್ಯಮನೆತನದ ಸ್ತ್ರೀಪುರುಷರೂ, ಪ್ರಜಾಪ್ರಮುಖರೂ ಕಿಕ್ಕಿರಿದು ತುಂಬಿ ಯಥಾಯೋಗ್ಯವಾದ ಆಸನಗಳಲ್ಲಿ ಮಂಡಿಸಿದ್ದರು. ವೃದ್ಧರನ್ನು ಸಿದ್ಧಾರ್ಥನು ನೋಡುವುದು ಉದ್ವೇಗಹೇತುವಾಗಿ ಪರಿಣಮಿಸೀತೆಂಬ ಶಂಕೆಯಿಂದ ಪ್ರೇಕ್ಷಕರಲ್ಲಿ ವೃದ್ಧರಾರೂ ಸೇರದಂತೆ ಶುದ್ಧೋದನನು ಏರ್ಪಡಿಸಿದ್ದನು. ಸಿದ್ಧಾರ್ಥನೊಡನೆ ಸ್ಪರ್ಧೆಗೆ ಸೆಣಸಿನಿಂತ ಶಾಕ್ಯಯುವಕರಲ್ಲಿ ದೇವದತ್ತನೂ ಸೇರಿದ್ದನು. ಸಿದ್ಧಾರ್ಥನನ್ನು ವಿದ್ಯೆಯಲ್ಲಿ ಸೋಲಿಸುವುದು ತನ್ನಿಂದ ಸಾಗದಿದ್ದರೂ ಶಕ್ತಿಸಾಮರ್ಥ್ಯ ಪ್ರದರ್ಶನಗಳಲ್ಲಿ ತನಗೆ ಜಯವಾಗಿ ಯಶೋಧರೆಯು ತನಗೇ ದೊರೆಯುವಳೆಂಬುದು ದೇವದತ್ತನ ಸವಿಗನಸು. ತನ್ನ ಮಗ ಸಿದ್ಧಾರ್ಥನು ಸ್ಪರ್ಧೆಯಲ್ಲಿ ಜಯಶೀಲನಾಗಿ ಯಶೋಧರೆಯ ಕೈಹಿಡಿದರೆ ಸಾಕೆಂಬುದು ಶುದ್ಧೋದನನ ಹಾರೈಕೆ. ತಮ್ಮ ತಮ್ಮ ಮಕ್ಕಳಿಗೆ ಜಯಲಕ್ಷ್ಮಿಯು ಒಲಿಯಲೆಂಬುದು ಶಾಕ್ಯ ಗೃಹಸ್ಥರೆಲ್ಲರ ಕೋರಿಕೆ. ಬೆಳದಿಂಗಳು ಬೇಡವೆಂದು ಯಾರು ಹೇಳುವರು? ಸುರಸುಂದರಿಯರನ್ನು ಮೀರಿದ್ದ ರೂಪವತಿಯಾದ ಯಶೋಧರೆಯು

ಸೊಸೆಯಾಗುವುದೆಂದರೆ, ಅದು ಯಾರಿಗೆ ತಾನೆ ಇಷ್ಟವಿರಲಿಲ್ಲ? ವಿದ್ಯಾಪ್ರೌಢಿಯಲ್ಲಿಯೂ ಬರೆವಣಿಗೆಯಲ್ಲಿಯೂ ಸಿದ್ಧಾರ್ಥನು ಆ ಮೊದಲೇ ತನ್ನ ಜೊತೆಯ ಯುವಕರೆಲ್ಲರನ್ನೂ ಮೀರಿಸಿದ್ದುದರಿಂದ ಅವುಗಳಲ್ಲಿ ಸ್ಪರ್ಧೆಯೇನೂ ನಡೆಯತಕ್ಕದಿಲ್ಲವೆಂದು ಅವನ ಉಪಾಧ್ಯಾಯರುಗಳೇ ತಿಳಿಸಿದರು. ಆದಾಗ್ಯೂ, ಶುದ್ಧೋದನನ ಅಪ್ಪಣೆಯ ಮೇರೆಗೆ ಅವುಗಳಲ್ಲಿಯೂ ಪರೀಕ್ಷೆಯು ನಡೆದು ಸಿದ್ಧಾರ್ಥನೇ ಮೊದಲನೆಯವನಾದನು. ಗಣಿತ ಶಾಸ್ತ್ರದಲ್ಲಿ ನಿಷ್ಣಾತನಾಗಿದ್ದ ಅರ್ಜುನನೆಂಬ ಹೆಸರಿನ ಆಚಾರ್ಯನ ಸಮಕ್ಷಮದಲ್ಲಿ ಗಣಿತದ ಸ್ಪರ್ಧಾ ಪರೀಕ್ಷೆಯೂ ನಡೆದು, ಸಿದ್ಧಾರ್ಥನೇ ಅದರಲ್ಲಿಯೂ ಇತರರೆಲ್ಲರಿಗಿಂತ ಮೇಲಾಗಿ ತೇರ್ಗಡೆಹೊಂದಿದನು. ಅದನ್ನು ಕಂಡು ದೇವದತ್ತನ ಹೃದಯದಿಂದ ದ್ವೇಷಾಸೂಯೆಗಳ ಕಿಚ್ಚಿನ ಜ್ವಾಲೆಗಳು ಹಾಯುತ್ತಿದ್ದುವು. ಅವನು ತನ್ನ ಹೊಟ್ಟೆಯುರಿಯನ್ನು ಮೌನದಿಂದ ತಾನೇ ಸಹಿಸಿ ಸುಮ್ಮನಿರಬೇಕಾಗಿದ್ದಿತು. ಸಿದ್ಧಾರ್ಥನು ಸ್ಪರ್ಧೆಯಲ್ಲಿ ತಮ್ಮೆಲ್ಲರನ್ನೂ ಮೀರಿಸಿ ಜಯಶಾಲಿಯಾದುದಕ್ಕಾಗಿ ಇತರರೆಲ್ಲರೂ ಸಂತೋಷದಿಂದಲೂ ಹೆಮ್ಮೆಯಿಂದಲೂ ಜಯಘೋಷಮಾಡಿ, "ಸಾಧು, ಸಿದ್ಧಾರ್ಥ, ಸಾಧು! ಗಣಿತ ಶಾಸ್ತ್ರದಲ್ಲಿ ನೀನು ನಮ್ಮೆಲ್ಲರನ್ನೂ ಸೋಲಿಸಿದೆ. ಓದುಬರೆಹಗಳಲ್ಲಂತೂ ನೀನು ನಮ್ಮೆಲ್ಲರಿಗಿಂತಲೂ ಮೇಲಾಗಿಯೇ ಇರುವೆ. ಇವುಗಳಲ್ಲೆಲ್ಲ ನಾವು ಸೋಲನ್ನೊಪ್ಪಿಕೊಳ್ಳುತ್ತೇವೆ. ಆದರೆ ದೇಹಬಲವೇ ಮುಂತಾದವುಗಳಲ್ಲಿ ಮಾತ್ರ ನಿನ್ನೊಡನೆ ಸ್ಪರ್ಧಿಸಲಿಚ್ಛಿಸಿ ಪ್ರತಿಕಕ್ಷಿಗಳಾಗಿ ಸೆಣಸಿ ನಿಂತಿದ್ದೇವೆ" ಎಂದು ಹೇಳಿದರು.

ಆ ಬಳಿಕ ಮೊಟ್ಟಮೊದಲು ಧನುರ್ವಿದ್ಯಾ ಪರೀಕ್ಷೆಗೆ ಪ್ರಾರಂಭವಾಯಿತು. ದೂರದಲ್ಲಿದ್ದ ಒಂದು ಮಸಿಯ ಬೊಟ್ಟಿಗೆ ಬಾಣವನ್ನು ಬಿಡುವಂತೆ ಯುವಕರೆಲ್ಲರೂ ಶರಸಂಧಾನ ಮಾಡಿದರು. ದೇವದತ್ತನಂತೂ, ಚಾಪದ ಗರಡಿಯಲ್ಲಿ ನಿಸ್ಸೀಮನೆನಿಸಿ ಹೆಸರು ಪಡೆದಿದ್ದನು.

ಮೊದಲೇ ಚಾಪವಿದ್ಯೆಯ ಪರೀಕ್ಷೆಗೆ ಪ್ರಾರಂಭವಾದುದರಿಂದ ಅವನಿ ಗುಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಯುವಕರಲ್ಲಿ ಯಾರು ಅತ್ಯಂತ ಶಕ್ತಿಸಾಮರ್ಥ್ಯವುಳ್ಳವರೆಂದು ನಿರ್ಧರವಾಗುತ್ತದೋ ಅವರು ಯಶೋಧರೆಯ ಕೈಹಿಡಿಯಬಹುದೆಂದು ಮಹಾನಾಮನು ಉದ್ಘೋಷಿಸಿದನು. ಅದನ್ನು ಕೇಳಿ, ಯುವಕರೆಲ್ಲರ ಕಿವಿಗಳೂ ನಿಮಿರಿನಿಂತುವು. ದೇವದತ್ತನು ಯಶೋಧರೆಯು ತನ್ನವಳಾದಳೆಂದೇ ನಿರ್ಧರಿಸಿದನು. ಸಿದ್ಧಾರ್ಥನ ಬಲುಹು ಬಿಗುವೇರಿತು. ಯಶೋಧರೆಯು ತನಗೇ ವಿಜಯಮಾಲೆಯನ್ನು ಹಾಕುವಂತಾಗಬೇಕೆಂದು ಅವನು ತವಕಪಡುತ್ತಿದ್ದನು. ಸುಖದ ಮಧ್ಯದಲ್ಲಿದ್ದೂ ಸಿದ್ಧಾರ್ಥನು ಸುಖಕ್ಕೆ ದಾಸನಾಗದೆ ತನ್ನ ವ್ಯಕ್ತಿತ್ವವನ್ನು ಕಾಪಾಡಿಕೊಂಡಿದ್ದನು; ಭೋಗಮಗ್ನನಾಗಿ ಸುಮ್ಮನಿರದೆ ತನ್ನ ತೋಳಿನ ಬಲವು ಬೆಳೆಯುವಂತೆ ಮಾಡಬೇಕೆಂದು ಬಂಧುವರ್ಗದವರು ತನ್ನ ತಂದೆಗೆ ಮೊರೆಯಿಟ್ಟಾಗಿನಿಂದಲೂ ಅಸಮ ಸಾಹಸಿಯಾಗುವ ಛಲವನ್ನು ತೊಟ್ಟು ಅದಕ್ಕೆ ಆವಶ್ಯಕವಾದ ಅಧ್ಯವಸಾಯವನ್ನು ಅವಿಶ್ರಾಂತವಾಗಿ ನಡೆಯಿಸಿದ್ದವನು; ಅಲ್ಲದೆ ತನ್ನ ಪ್ರಯತ್ನವು ಸಿದ್ಧಿಸಿದ್ದುದನ್ನು ಕೇವಲ ರಹಸ್ಯವಾಗಿಟ್ಟುಕೊಂಡು ತೃಪ್ತನಾಗಿದ್ದವನು. ಶಾಕ್ಯಮನೆತನದ ಯುವಕರೆಲ್ಲರೂ ಒಬ್ಬೊಬ್ಬರಾಗಿ ತಮ್ಮ ಚಾಪವಿದ್ಯಾ ಕೌಶಲ್ಯವನ್ನು ಪ್ರದರ್ಶಿಸಿದರು. ದೇವದತ್ತನೂ ಸಿದ್ಧಾರ್ಥನೂ ಕೊನೆಯ ಸ್ಪರ್ಧೆಗೆ ಉಳಿದರು. ತನಗಿಂತ ಮೊದಲು ಬಾಣವನ್ನು ಹೂಡಿದ್ದ ಯುವಕರೆಲ್ಲರನ್ನೂ ಮೀರಿಸಿ ದೇವದತ್ತನು ತನ್ನೆಸುಗೆಯನ್ನು ಮೆರೆದನು. ಪ್ರೇಕ್ಷಕರಾದ ಸ್ತ್ರೀಪುರುಷರೆಲ್ಲರೂ ಅದನ್ನು ಕಂಡು ಹರ್ಷಿಸಿ ಆನಂದ ಘೋಷ ಮಾಡಿದರು.

ಆ ಬಳಿಕ ಸಿದ್ಧಾರ್ಥನು ಬಾಣವನ್ನು ಹೂಡಲು ಬಂದು ನಿಂತನು. ಆತನು ಶಿಂಜಿನಿಯನ್ನೆಳೆದೊಡನೆಯೇ ಬಿಲ್ಲು ಮುರಿದು ಹೋಯಿತು. ಸಿದ್ಧಾರ್ಥನು ಎಲ್ಲರಿಗಿಂತಲೂ ಬಲಶಾಲಿಯೆಂಬುದಕ್ಕೆ

ಅದೇ ದೊಡ್ಡ ಸಾಕ್ಷ್ಯವೆಂದು ಅನೇಕರು ಅಭಿಪ್ರಾಯಪಟ್ಟರು. ಒಡನೆಯೇ ಪ್ರೇಕ್ಷಕರ ಆನಂದ ಘೋಷದಿಂದ ಅಂತರಿಕ್ಷವೇ ತುಂಬಿ ಹೋಯಿತು. ಅದು ದೇವದತ್ತನ ಕಿವಿಗಳಿಗೆ ಬರಸಿಡಿಲಿನಂತಾಯಿತು. ಬಿಲ್ಲು ಮುರಿದುಹೋದುದಕ್ಕೆ ಸಿದ್ಧಾರ್ಥನ ಶಕ್ತಿಯು ಕಾರಣವಲ್ಲ ವೆಂದೂ, ಯುವಕರೆಲ್ಲರೂ ಮೊದಲಿನಿಂದಲೂ ಸೆಳೆದಿದ್ದುದರಿಂದ ದುರ್ಬಲವಾಗಿದ್ದ ಅದು ಮುರಿದು ಹೋಯಿತೆಂದೂ, ದೇವದತ್ತನು ವಾದವನ್ನು ಹೂಡಿದನು. ಅಲ್ಲದೆ ಬಿಲ್ಲು ಮುರಿದ ಮಾತ್ರವೇ ಎಸುಗೆಯ ಸಾಮರ್ಥ್ಯವು ವ್ಯಕ್ತವಾದಂತಾಗಲಿಲ್ಲವೆಂದೂ ಹೇಳಿದನು. ಮತ್ತೊಂದು ಭಾರಿಯ ಧನುಸ್ಸನ್ನು ತರಿಸಿ ಎಸುಗೆಯ ಪರೀಕ್ಷೆ ಯನ್ನೇಕೆ ನಡೆಯಿಸಕೂಡದೆಂದು ಕೆಲವರು ಸೂಚಿಸಿದರು. ಸಾಹಸ ಪ್ರೇಮಿಯಾದ ಶುದ್ಧೋದನನು ದೇವಾಲಯದಲ್ಲಿಟ್ಟು ಪೂಜಿಸುತ್ತಿದ್ದ ತಮ್ಮ ತಂದೆ ಸಿಂಹ ಹನುವಿನ ಧನುಸ್ಸನ್ನು ತರುವಂತೆ ಸಿದ್ಧಾರ್ಥನ ಕೋರಿಕೆಯಂತೆ ಭಟರಿಗೆ ಆಜ್ಞೆಮಾಡಿದನು. ಮಹಾ ಪರಾಕ್ರಮಿ ಯಾದ ಸಿಂಹ ಹನು ರಾಜನ ಧನುಸ್ಸಿಗೆ ಶಿಂಜಿನಿಯನ್ನೇರಿಸುವುದು ಸಾಮಾನ್ಯರಿಗೆ ಸಾಧ್ಯವಿರಲಿಲ್ಲ. ಶಕ್ತರೆಂದು ಗಣ್ಯರಾಗಿದ್ದ ಅನೇಕ ಮಂದಿ ಯುವಕರು ಆ ಧನುಸ್ಸಿನಲ್ಲಿ ಬಾಣವನ್ನು ಹೂಡಲಾರದೆ ಹೋದರು. ಸಿದ್ಧಾರ್ಥನು ಲೀಲಾಜಾಲವಾಗಿ ಆ ಧನುಸ್ಸಿಗೆ ಶಿಂಜಿನಿ ಯನ್ನೇರಿಸಿ ಬಾಣಪ್ರಯೋಗಮಾಡಿದನು. ಎಸುಗೆಯ ಪರೀಕ್ಷೆಯಲ್ಲಿ ಸಿದ್ಧಾರ್ಥನೇ ಜಯಶೀಲನಾಗಿ ದೇವದತ್ತನಿಗಿಂತಲೂ ಹೆಚ್ಚು ಸಾಮರ್ಥ್ಯವನ್ನು ತೋರಿಸಿದನು. ಆ ಬಳಿಕ ಅಂಬಿನ ವೇಗದ ಪರೀ ಕ್ಷೆಯು ನಡೆಯಿತು. ಹಸಿಯ ಜೇಡಿಯ ಮಣ್ಣಿನ ಮಡಕೆಯಲ್ಲಿ ನೀರಿಟ್ಟು, ಹೊಡೆದ ಬಾಣವು ಆ ಮಡಿಕೆಯನ್ನು ಭೇದಿಸಿಕೊಂಡು ಎಷ್ಟು ದೂರ ಹೋಗಬಲ್ಲುದೆಂಬ ಪರೀಕ್ಷೆಯೂ ನಡೆಯಿತು. ಅದರ ಲ್ಲಿಯೂ ಸಿದ್ಧಾರ್ಥನಿಗೇ ಜಯವಾಯಿತು.

ದ್ವೇಷಾಸೂಯೆಗಳ ದಾಂಧಲೆಯಿಂದಲೂ, ಅವಮಾನದ ದುಃಖದಿಂದಲೂ ದೇವದತ್ತನು ಕ್ಷತವಿಕ್ಷತನಾಗಿ, ಸ್ಪರ್ಧೆಯು

ನಡೆಯುತ್ತಿದ್ದ ಸ್ಥಳದಲ್ಲಿ ನಿಲ್ಲಲಾರದೆ ನಗರಾಭಿಮುಖವಾಗಿ ಹೊರಟನು. ಆ ಬಳಿಕ ಕುದುರೆ ಸವಾರಿಯಲ್ಲಿಯೂ ಮಲ್ಲಯುದ್ಧದಲ್ಲಿಯೂ ವಜ್ರ ಮುಷ್ಟಿಕಾಳಗದಲ್ಲಿಯೂ ಸ್ಪರ್ಧೆಯು ನಡೆದು, ಸಿದ್ಧಾರ್ಥನೇ ಜಯ ಶೀಲನಾದನು. ಕೊನೆಗೆ ಕತ್ತಿಯನ್ನು ಪ್ರಯೋಗಿಸುವ ಕೈಚಳಕದ ಪರೀಕ್ಷೆಯು ನಡೆಯಿತು. ನಂದನೆಂಬಾತನು ಕತ್ತಿಯನ್ನು ತಿರುಗಿಸುವ ನಾನಾ ವರಸೆಗಳಲ್ಲಿಯೂ, ಕತ್ತಿಯನ್ನು ಪ್ರಯೋಗಿಸುವ ಸಾಮರ್ಥ್ಯ ದಲ್ಲಿಯೂ ಪ್ರಖ್ಯಾತನಾಗಿದ್ದನು. ಅವನೂ ಇತರ ಯುವಕರೂ ತಮ್ಮ ತಮ್ಮ ಕೌಶಲವನ್ನು ಪ್ರದರ್ಶಿಸಿದ ಬಳಿಕ ಸಿದ್ಧಾರ್ಥನ ಸರದಿಯು ಬಂದಿತು. ಅವರೆಲ್ಲರೂ ತಮ್ಮ ಖಡ್ಗಗಳಿಂದ ಒಂದು ಸಣ್ಣ ಮರದ ಕೊಂಬೆಗಳನ್ನು ಕಡಿಯುವ ಸಾಹಸಕೃತ್ಯವನ್ನೆಸಗಿ ಯಥಾಶಕ್ತಿಯಾಗಿ ಒಬ್ಬೊಬ್ಬರೂ ತಮ್ಮಿಂದ ಸಾಧ್ಯವಾದಮಟ್ಟಿಗೆ ಕೃತಕಾರ್ಯರಾಗಿದ್ದರು. ಸಿದ್ಧಾರ್ಥನಿಗೆ ಮೊದಲು ನಂದನ ಸರದಿಯು ಮುಗಿದು, ಅವನು ಒಂದು ಸಣ್ಣ ಕೊಂಬೆಯನ್ನು ಕಡಿದು ಕೆಳಕ್ಕುರುಳಿಸಿದನು. ಸಿದ್ಧಾ ರ್ಥನು ಆ ಮರದ ಕೊಂಬೆ ಯಾವುದನ್ನೂ ಕಡಿಯುವ ಯತ್ನ ಮಾಡ ಲಿಲ್ಲ. ಅವನು ತನ್ನ ಕತ್ತಿಯನ್ನು ಝಳಪಿಸಿ ಆ ಚಿಕ್ಕ ಮರದ ಬುಡವನ್ನೇ ಛೇದಿಸಲು ಪ್ರಯತ್ನಿಸಿ ಕೈಚಳಕವನ್ನು ಪ್ರದರ್ಶಿಸಿದನು. ಕತ್ತಿಯನ್ನು ಬೀಸಿ ಹೊಡೆದುದೂ ಆಯಿತು; ಕತ್ತಿಯನ್ನು ಒರೆಗೆ ಸೇರಿಸಿದುದೂ ಆಯಿತು. ಮರವು ಮಾತ್ರ ನೆಲಕ್ಕುರುಳಲಿಲ್ಲ. ಮತ್ತೊಂದು ಸಲ ಕತ್ತಿಯನ್ನು ಉಪಯೋಗಿಸುವುದು ನಿಷಿದ್ಧವಾಗಿದ್ದ ಕಾರಣ, ಇದೊಂದು ಸಾಹಸಕೃತ್ಯದಲ್ಲಿ ಸಿದ್ಧಾರ್ಥನು ಹಿಂದೆಬಿದ್ದ ನೆಂದು ಶುದ್ಧೋದನನ ಮನಸ್ಸು ಸಂತಾಪದಿಂದ ಪಾತಾಳಕ್ಕಿಳಿದು ಹೋಯಿತು. ಎಲ್ಲ ಸಾಹಸ ಕೃತ್ಯಗಳಲ್ಲಿಯೂ ಜಯಶಾಲಿಯಾಗಿದ್ದ ರಾಜಕುಮಾರನು ಅದೊಂದರಲ್ಲಿ ನಂದನಿಗೆ ಕಡೆಯಾದನೆಂಬ ಆಲೋಚನೆಯಲ್ಲಿ ಮಗ್ನರಾಗಿ ಪ್ರೇಕ್ಷಕರೆಲ್ಲರೂ ಚಿತ್ರದ ಬೊಂಬೆ ಗಳಂತೆ ಕುಳಿತಿದ್ದರು. ಅತ್ತ ನಾರೀನಿವಹ ಮಧ್ಯದಲ್ಲಿ ಯಶೋ ಧರೆಯು ಖಿನ್ನಮನಸ್ಕಳಾಗಿದ್ದಳು. ಪ್ರೇಕ್ಷಕರು ಜಯಘೋಷ

ಮಾಡದೆ ಸುಮ್ಮನಿದ್ದುದೇಕೆಂದು ಯೋಚಿಸಿ ಸಿದ್ಧಾರ್ಥನು ಅವರ ಮನೋಗತವನ್ನು ಊಹಿಸಿ, ಮರದ ಬಳಿಗೆ ಹೋಗಿ ಅದರ ಮೇಲ್ಭಾಗವನ್ನು ಹಿಡಿದು ಅಲುಗಿಸಿದೊಡನೆಯೇ ಮರವು ಕೆಳಕ್ಕುರುಳಿತು. ಕಡಿದ ಮರವು ಕೆಳಕ್ಕುರುಳದಂತೆ ಅತ್ಯಂತ ಸೂಕ್ಷ್ಮವಾಗಿಯೂ ಅತ್ಯಂತ ರಭಸದಿಂದಲೂ ಕತ್ತಿಯನ್ನು ಪ್ರಯೋಗಿಸಿ ಅನನ್ಯ ಸಾಧಾರಣ ರೀತಿಯಲ್ಲಿ ಕೌಶಲ್ಯವನ್ನು ತೋರಿಸಿ ಕತ್ತಿಯನ್ನು ಒರೆಗೆ ಸೇರಿಸಿದ್ದ ಸಿದ್ಧಾರ್ಥನ ಕೈಚಳಕದ ಬಗೆಯನ್ನು ಕಂಡು ವಿಸ್ಮಿತರಾಗಿ ಪ್ರೇಕ್ಷಕರೆಲ್ಲರೂ ಸುಮ್ಮಾನ ಸಂತೋಷಗಳಿಂದ ಏಕಕಂಠದಲ್ಲಿ ಯುವರಾಜನಿಗೆ ಶ್ರೇಯಸ್ಸನ್ನು ಕೋರಿ, ಜಯಘೋಷ ಮಾಡಿದರು. ಅವರ ಜಯಘೋಷವು ಗಗನವನ್ನೇ ಭೇದಿಸುವಂತೆ ತೋರಿತು. ಸಿದ್ಧಾರ್ಥನು ಆ ಬಗೆಯ ಅಸಮ ಸಾಹಸಿಯೆಂಬುದನ್ನರಿಯದೆ ಆತಂಕಪಡುತ್ತಿದ್ದ ತನ್ನ ಅಜ್ಞತೆಯನ್ನು ಶುದ್ಧೋದನನು ಮನವಾರೆ ಹಳಿದುಕೊಂಡು, ಮಗನ ವಿಜಯಪ್ರಾಪ್ತಿಯನ್ನು ಶ್ಲಾಘಿಸಿ ಅಭೂತ ಪೂರ್ವವಾದ ಆನಂದವನ್ನನುಭವಿಸಿದನು. ಸಿದ್ಧಾರ್ಥನು ಸುಖದಲ್ಲಿಯೇ ಮಗ್ನನಾಗಿದ್ದುದರಿಂದ ಸಾಹಸಿಯಾಗುವ ಪ್ರಯತ್ನವನ್ನೇ ಮಾಡುತ್ತಿರಲಿಲ್ಲವೆಂದು ಅವನ ತಂದೆಗೆ ತಿಳಿಸಿ ಹಳಿದಿದ್ದವರೆಲ್ಲರೂ ಅವನು ರಾಜವಂಶದ ಖ್ಯಾತಿಯನ್ನು ಕಾಪಾಡಿ ಕ್ಷಾತ್ರತೇಜವನ್ನು ಮೆರೆದನೆಂದು ಮನವಾರೆ ಕೊಂಡಾಡಿದರು. ಮಹಾನಾಮನಂತೂ, ಸಿದ್ಧಾರ್ಥನು ಸುಖಜೀವಿಯಾದ ಸುಕುಮಾರನೆಂದೂ, ಕ್ಷಾತ್ರತೇಜಕ್ಕೂ, ಅವನಿಗೂ ದೂರವೆಂದೂ ತಾನು ಅವಿವೇಕ ವಶದಿಂದ ಭಾವಿಸಿದ್ದುದಾಗಿ ತಿಳಿಸಿದನು. ನಸುನಾಚಿ ಮಂದಗಮನದಿಂದ ಮುಂದೆ ಬಂದ ಯಶೋಧರೆಯು ಸಿದ್ಧಾರ್ಥನ ಕೊರಳಿಗೆ ವಿಜಯ ಮಾಲೆಯನ್ನು ಹಾಕಿದಳು. ಆಗ ಶುದ್ಧೋದನನಿಗುಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಚಿನ್ನದ ಅಂಬಾರಿಯನ್ನು ಹಾಕಿ ತನ್ನ ಮೆಚ್ಚಿನ ಆನೆಯನ್ನು ಸಿದ್ಧಾರ್ಥನ ಪುರಪ್ರವೇಶಕ್ಕಾಗಿ ಶುದ್ಧೋದನನು ತರಹೇಳಿ ಆಜ್ಞೆಮಾಡಿದ್ದನು. ಆದರೆ ಆನೆಯು ಸಕಾಲದಲ್ಲಿ ಬರಲಿಲ್ಲ;

ಅಲ್ಲದೆ ಸೇವಕರು ತಾನು ಹೇಳಿದ್ದ ಆನೆಯನ್ನು ತರದೆ ಮತ್ತೊಂದು ಆನೆಗೆ ಅಂಬಾರಿಯನ್ನು ಹಾಕಿ ತಂದುದನ್ನು ಕಂಡು, ಅವನಿಗೆ ಸ್ವಲ್ಪ ಅಸಮಾಧಾನವೂ ಆಯಿತು. ಅದಕ್ಕೆ ಕಾರಣವನ್ನು ವಿಚಾರಿಸಿದಾಗ ಸ್ಪರ್ಧೆಯ ಪರೀಕ್ಷೆಯಲ್ಲಿ ಜಯಶೀಲನಾದ ಸಿದ್ಧಾರ್ಥನ ಪುರಪ್ರವೇಶಕ್ಕಾಗಿ ಶುದ್ಧೋದನನ ಮೆಚ್ಚಿನ ಆನೆಯು ಹೋಗುವ ವಾರ್ತೆಯನ್ನು ಕೇಳಿದ ದೇವದತ್ತನು ಅದರ ಸೊಂಡಿಲನ್ನು ಕಡಿದುಹಾಕಿದನೆಂದು ಸೇವಕರು ವರದಿ ಮಾಡಿದರು. ದೇವದತ್ತನು ನಡೆಯಿಸಿದ ಕ್ರೂರ ಕೃತ್ಯಕ್ಕಾಗಿ ಸಿದ್ಧಾರ್ಥನು ಮನನೊಂದನು. ಶುದ್ಧೋದನನ ಅಪ್ಪಣೆಯ ಮೇರೆಗೆ ಸಿದ್ಧಾರ್ಥನನ್ನು ಅಂಬಾರಿಯಲ್ಲಿ ಕುಳ್ಳಿರಿಸಿ ಬಹಳ ಸಂಭ್ರಮದಿಂದ ಮೆರವಣಿಗೆ ಮಾಡಿಕೊಂಡು ಅರಮನೆಗೆ ಕರೆದೊಯ್ದರು. ತನ್ನನ್ನು ವರಿಸುವವನಾಗಿದ್ದ ಸಿದ್ಧಾರ್ಥನು ವಿಜಯವನ್ನು ಪಡೆದುದನ್ನು ಕಂಡು ಯಶೋಧರೆಯು ಸಂತೋಷದಿಂದ ಹಿಗ್ಗಿದಳು. ಯಶೋಧರೆಯು ತನಗೆ ದೊರೆತುದಕ್ಕಾಗಿ ಸಿದ್ಧಾರ್ಥನು ಹರ್ಷಿಸಿದನು.

ಕ್ಷಿಪ್ರದಲ್ಲಿಯೇ ಮಹಾನಾಮನು ಶುಭಲಗ್ನವನ್ನು ಗೊತ್ತು ಮಾಡಿಸಿ ಸಿದ್ಧಾರ್ಥನಿಗೆ ಯಶೋಧರೆಯನ್ನು ಕೊಟ್ಟು ಅತ್ಯಂತ ವೈಭವ ವಿಜೃಂಭಣೆಗಳಿಂದ ವಿವಾಹ ಮಾಡಿದನು.

**ಸಿದ್ಧಾರ್ಥನ ವಿವಾಹಗಳು**

ಆ ಬಳಿಕ ಸ್ವಲ್ಪ ಕಾಲವಾದ ಮೇಲೆ ಮನೋಧರಾ ಎಂಬೊಬ್ಬಳು ಸಿದ್ಧಾರ್ಥನ ಮಡದಿಯಾದಳು. ಅನಂತರ ಶುದ್ಧೋದನನು ಸೌಕುಮಾರ್ಯ ವಿಲಾಸಗಳಲ್ಲಿ ಪ್ರಖ್ಯಾತಳಾಗಿದ್ದ ಗೌತಮಿಯೆಂಬವಳನ್ನು ಸಿದ್ಧಾರ್ಥನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಅವಳ ತಂದೆಗೆ ತಿಳುಹಿಸಿದನು. ಅಷ್ಟರಲ್ಲಿ ಆ ಮೊದಲೇ ದೇವದತ್ತನು ಅವಳನ್ನು ತನಗೆ ಕೊಟ್ಟು ವಿವಾಹ ಮಾಡಬೇಕೆಂದು ಕೇಳಿಸಿದ್ದನು. ಹಲವು ಮಂದಿ ಶಾಕ್ಯವೀರರೂ ಗೌತಮಿಯು ಸೊಸೆಯಾಗಬೇಕೆಂದು ಬಯಸಿದರು. ಗೌತಮಿಯ ತಂದೆಯು ದಾಕ್ಷಿಣ್ಯಬದ್ಧನಾಗಿ ಪೇಚಾಡು

ತ್ತಿದ್ದುದನ್ನು ನೋಡಿ, ಅದಕ್ಕೆ ಗೌತಮಿಯೇ ಸಮಾಧಾನ ಹೇಳಿ ಸ್ವಯಂವರವನ್ನೇರ್ಪಡಿಸಬೇಕೆಂದೂ, ಹಾಗೆ ಮಾಡಿದರೆ ಆತನಿಗೆ ನಿಷ್ಠುರವೂ ಆತಂಕವೂ ತಪ್ಪುವುವೆಂದೂ ಬಿನ್ನೈಸಿದಳು. ಮಗಳ ಚಾತುರ್ಯಕ್ಕೆ ಮೆಚ್ಚಿ ಆತನು ಸ್ವಯಂವರ ಮಹೋತ್ಸವಕ್ಕೆ ಅಣಿಮಾಡಿ ಶಾಕ್ಯವಂಶೀಯರೆಲ್ಲವನ್ನೂ ಆಹ್ವಾನಿಸಿದನು. ಸ್ವಯಂವರದ ದಿನ ಸಿದ್ಧಾರ್ಥನೇ ಮುಂತಾಗಿ ಸಮಸ್ತರೂ ಸಭೆಸೇರಿದರು. ದೇವದತ್ತ ಮುಂತಾದವರೆಲ್ಲರೂ ಬಗೆಬಗೆಯ ಪುಷ್ಪಸಾರಗಳನ್ನೂ ಗಂಧವನ್ನೂ ಪೂಸಿ, ದಿವ್ಯ ವಸ್ತ್ರಾಭರಣಗಳನ್ನು ಧರಿಸಿ ಸಭೆಯಲ್ಲಿ ಪರುಠವಣೆಯಿಂದ ಕುಳಿತಿದ್ದರು. ಸಿದ್ಧಾರ್ಥನು ಮಾತ್ರ ಆಭರಣಗಳಾವುವನ್ನೂ ಧರಿಸದೆ ಶುಭ್ರವಾದ ಬಿಳಿಯ ಉಡುಪನ್ನು ಧರಿಸಿ ಬಂದಿದ್ದನು. ಗೌತಮಿಯು ದಿವ್ಯಾಲಂಕಾರ ಭೂಷಿತೆಯಾಗಿ ಮಲ್ಲಿಗೆಯ ಹೂವಿನ ಮಾಲೆಯನ್ನು ಕೈಯಲ್ಲಿ ಹಿಡಿದು ಸಭೆಗೆ ಬಂದಳು. ಸಭೆಯಲ್ಲಿದ್ದ ಯುವಕರನ್ನೆಲ್ಲ ದೃಷ್ಟಿಸಿ ನೋಡಿದ ಬಳಿಕ ಗೌತಮಿಯು ತನ್ನ ಜೊತೆಯಲ್ಲಿ ನಿಂತಿದ್ದ ತಾಯಿಯೊಡನೆ, "ಸಿದ್ಧಾರ್ಥನ ಹೊರತು ಮತ್ತಾರೂ ನನ್ನ ಮನಸ್ಸಿಗೆ ಸರಿಬೀಳುವಂತಿಲ್ಲವಮ್ಮ. ಉಳಿದವರೆಲ್ಲರೂ, ಹೆಂಗಸರು ಕೂಡ ನಾಚುವಷ್ಟು ಆಭರಣಗಳನ್ನು ಧರಿಸಿ, ತಾವು ಶೌರ್ಯದಲ್ಲಿ ಕಡಿಮೆಯಾದ ಕುಂದನ್ನು ಅಲಂಕಾರದಿಂದ ಪರಿಹರಿಸಿಕೊಳ್ಳುವ ಪ್ರಯತ್ನಮಾಡಿದ್ದಾರೆ. ಅವರಲ್ಲಿ ನಿಜವಾದ ಧೀರತೆಯಿದ್ದ ಪಕ್ಷದಲ್ಲಿ ಅವರೂ ಸಿದ್ಧಾರ್ಥನಂತೆ ಸರಳವಾದ ಮತ್ತು ಮನೋಹರವಾದ ರೀತಿಯಲ್ಲಿ ಉಡುಪುಗಳನ್ನು ಧರಿಸಿ ಬರುತ್ತಿದ್ದರು" ಎಂದು ಹೇಳಿ ಹತ್ತಾರು ಹೆಜ್ಜೆ ಮುಂದೆ ಬಂದು ಸಿದ್ಧಾರ್ಥನ ಕೊರಳಿಗೆ ಹೂವಿನ ಮಾಲೆಯನ್ನು ಹಾಕಿದಳು. ಮಂಗಳ ವಾದ್ಯಗಳು ಭೋರ್ಗರೆದುವು. ಸಿದ್ಧಾರ್ಥನು ಗೌತಮಿಯ ಕೊರಳಿಗೆ ಮತ್ತೊಂದು ಮಲ್ಲಿಕಾಮಾಲಿಯನ್ನು ಹಾಕಿ ಆಕೆಯನ್ನು ವಿವಾಹ ಮಾಡಿಕೊಂಡನು. ಒಟ್ಟು ಶಾಕ್ಯವಂಶದಲ್ಲಿಯೇ ಅತ್ಯಂತ ರೂಪವತಿಯಾಗಿಯೂ, ಗುಣವತಿಯಾಗಿಯೂ, ಸುಶಿಕ್ಷಿತ

ಕಾಗಿಯೂ ಇದ್ದ ತನ್ನ ಮೂವರು ಸೊಸೆಯರನ್ನೂ ನೋಡಿ ಶುದ್ಧೋದನನು ವಿಶೇಷವಾಗಿ ಸಂತೋಷಿಸಿದನು. ಯಶೋಧರೆಯನ್ನೊಂದು ಅರಮನೆಗೂ, ಮನೋಧರೆಯನ್ನೊಂದು ಅರಮನೆಗೂ, ಗೌತಮಿಯನ್ನೊಂದು ಅರಮನೆಗೂ ಒಡತಿಯರನ್ನಾಗಿ ಮಾಡಿ, ಸಿದ್ಧಾರ್ಥನು ಅವರೊಡನೆ ಆನಂದವಾಗಿ ಕಾಲವನ್ನು ಕಳೆಯಲುಪಕ್ರಮಿಸಿದನು.* ಸಂಗೀತಲೋಲರಾದ ಅನೇಕ ಮಂದಿ ವಿಲಾಸಿನಿಯರು ಆ ಮೂರು ಅರಮನೆಗಳಲ್ಲಿಯೂ ಯುವರಾಜನಿಗೂ ಅವನ ಪತ್ನಿಯರಿಗೂ ತಮ್ಮ ಸೇವೆಯನ್ನು ಸಮರ್ಪಿಸುತ್ತಿದ್ದರು. ಶುದ್ಧೋದನನು ಬಹಳ ಧನವನ್ನು ವೆಚ್ಚಮಾಡಿ ಸಂಗೀತಶಾಲೆಯನ್ನು ಕಟ್ಟಿಸಿ ಚಿತ್ರತರವಾಗಿ ಶೃಂಗರಿಸಿ, ವೀಣಾ ವೇಣು ಮೃದಂಗ ಮುಂತಾದ ಬಗೆ ಬಗೆಯ ವಾದ್ಯ ನಿಕಾಯವನ್ನಳವಡಿಸುವಂತೆ ಆಜ್ಞೆಮಾಡಿದನು. ಅಲ್ಲಿ ಗಾಯನ ವಾದನಗಳೂ, ನೃತ್ಯಗಳೂ, ಚಿತ್ತಾಕರ್ಷಕವಾಗಿ ನಡೆಯುತ್ತ, ಸಿದ್ಧಾರ್ಥನನ್ನೂ ಆತನ ಮಡದಿಯರನ್ನೂ ಸುಮ್ರಾಸವ ಸುಧಾಸಾಗರದಲ್ಲಿ ಮುಳುಗಿಸುತ್ತಿದ್ದುವು. ಯಶೋಧರೆಯೇ ಯುವರಾಣಿಯ ಪದವಿಯನ್ನಲಂಕರಿಸಿದ್ದಳು. ಆಕೆಯೇ ಸಿದ್ಧಾರ್ಥನ ಮೆಚ್ಚಿನ ಮಡದಿಯಾಗಿದ್ದಳು.

ಸಿದ್ಧಾರ್ಥನ ಮನಸ್ಸು ಪ್ರೇಯಸ್ಸಿಗೆ ಒಲಿದು ಅವನು ಐಹಿಕ ಭೋಗವನ್ನೇ ಆಶ್ರಯಿಸಿರುವಂತೆ ಮಾಡಲು ಮನುಷ್ಯ ಪ್ರಯತ್ನ

---

* ಅವನ ಪತ್ನಿಯರ ಹೆಸರುಗಳನ್ನು ತಿಳಿಸುವುದರಲ್ಲಿ ನಾನಾ ಗ್ರಂಥಗಳಿಗೂ ಪರಸ್ಪರ ವ್ಯತ್ಯಾಸಗಳಿವೆ. ಕೆಲವು ಗ್ರಂಥಗಳಲ್ಲಿ ಯಶೋಧರಾ, ಮನೋಧರಾ, ಗೌತಮೀ ಎಂದು ಹೇಳಿವೆ. ಲಲಿತ ವಿಸ್ತರವೆಂಬ ಗ್ರಂಥಗಳಲ್ಲಿ ಯಶೋಧರಾ, ಮೃಗಜಾ, ಉತ್ಪಲವರ್ಣಾ ಎಂಬಿವು ಸಿದ್ಧಾರ್ಥನ ಹೆಂಡತಿಯರ ಹೆಸರುಗಳೆಂದಿದೆ. ಸಿದ್ಧಾರ್ಥನ ಹೆಂಡತಿಯರ ಹೆಸರುಗಳು ಯಶೋಧರಾ, ಗೋಪಾ, ಉತ್ಪಲವರ್ಣಾ ಎಂದು ಚೀಣರ ಕೆಲವು ಗ್ರಂಥಗಳಲ್ಲಿವೆಯಂತೆ. ಯಶೋಧರೆಯು ಯುವರಾಣಿಯಾಗಿದ್ದಳೆಂಬ ವಿಚಾರದಲ್ಲಿ ಮಾತ್ರ ಭಿನ್ನಾಭಿಪ್ರಾಯವೇ ಇಲ್ಲ.

ದಲ್ಲಿ ಸಾಧ್ಯವೆನಿಸಿದುದನ್ನೆಲ್ಲ ನೆರವೇರಿಸಿಯೂ ಶುದ್ಧೋದನನ ಮನಸ್ಸಿಗೆ ತೃಪ್ತಿಯಾಗಲಿಲ್ಲ. "ಸಿದ್ಧಾರ್ಥನು ಶುದ್ಧೋದನನ ಮುಂದೆ ಸಿಂಹಾಸನವನ್ನೇರಬೇಕು. ನಾನಾ ಕರ್ತವ್ಯನಿಷ್ಠೆ ರಾಜ್ಯಗಳನ್ನೂ ಗೆದ್ದು ಚಕ್ರೇಶ್ವರನೆನಿಸಿ ಬಾಳಬೇಕು" ಎಂಬಿವೇ ಅವನ ಹೃದಯ ಕುಹರದಲ್ಲಿ ಪ್ರತಿಧ್ವನಿಕೊಡುತ್ತಿದ್ದ ವಾಕ್ಯಗಳು. ತಾನು ಎಲ್ಲ ಭೋಗಸಾಧನಗಳನ್ನೂ ಅಳವಡಿಸಿಕೊಟ್ಟಿದ್ದೂ ಸಿದ್ಧಾರ್ಥನಿಗೆಲ್ಲಿ ವಿರಕ್ತಿಯು ಹುಟ್ಟುವುದೋ—ಎಂದು ಆತನ ಮನಸ್ಸು ತಲ್ಲಣಿಸುತ್ತಿದ್ದಿತು. ಸಿದ್ಧಾರ್ಥನು ವಿರಕ್ತನಾಗದೆ ವರ್ಧಿಷ್ಣುವಾಗಬೇಕೆಂಬ ಬಯಕೆಯಿಂದ ಆತನು ಸತ್ಕರ್ಮಾಚರಣೆಗೆ ಪ್ರಾರಂಭಿಸಿದನು. ಆತನು ಆಂಗಿರಸಕುಲದ ಅಧಿದೈವವಾದ ದೇವತಾ ಮೂರ್ತಿಯನ್ನು ಅರ್ಚಿಸಿ, ಬಗೆಬಗೆಯ ಹೋಮಗಳನ್ನಾಚರಿಸಿ ಗೋದಾನ ಸುವರ್ಣದಾನಗಳನ್ನು ಕೊಟ್ಟನು; ತನ್ನ ಪಾಪಕೃತ್ಯಗಳ ದೆಸೆಯಿಂದೆಲ್ಲಿ ಪುತ್ರನನ್ನಗಲಬೇಕಾಗಿ ಬಂದೀತೋ-ಎಂಬ ಕಳವಳದಿಂದ ಕೂಡಿ ಕೇವಲ ಜಾಗರೂಕತೆಯಿಂದ ಪಾಪ ಪರಾಙ್ಮುಖತೆಯನ್ನು ಕಾಪಾಡಿಕೊಂಡು ಬರುತ್ತಿದ್ದನು. ಸಾಧುಸಂತರ ಸೇವೆಯನ್ನು ಯಥೇಷ್ಟವಾಗಿ ನಡೆಯಿಸುತ್ತ, ಶುದ್ಧೋದನ ರಾಜನು ದೇಹಶುದ್ಧಿಗಾಗಿ ತೀರ್ಥೋದಕಗಳಲ್ಲಿಯೂ ಮನಶ್ಶುದ್ಧಿಗಾಗಿ ಶಾಂತ್ಯುದಕಗಳಲ್ಲಿಯೂ ಸ್ನಾನ ಮಾಡಲುಪಕ್ರಮಿಸಿದನು.

ಯಾರ ಮನಸ್ಸನ್ನು ನೋಯಿಸಿದರೆ ಯಾವ ಪಾಪವು ಸಂಘಟಿಸುವುದೋ, ಯಾವ ಪಾಪದಿಂದ ಪುತ್ರನ ಅಗಲಿಕೆಯು ಸಂಘಟಿಸುವುದೋ ಎಂಬ ಕಳವಳದಿಂದ, ಶುದ್ಧೋದನನ ಪಾಪಭೀರುತ್ವವು ಮೊದಲಿಗಿಮ್ಮಡಿಯಾಯಿತು. ರಾಜನು ಎಲ್ಲರಲ್ಲಿಯೂ ವಿನಯದಿಂದ ಮಾತನಾಡುತ್ತಿದ್ದನು. ಅಪ್ರಿಯವಾದ ಮಾತುಗಳನ್ನು ಯಾರೊಡನೆಯೂ ಆಡುತ್ತಿರಲಿಲ್ಲ. ಪರಿಜನರಾಗಲಿ, ಅಧಿಕಾರಿ ವರ್ಗದವರಾಗಲಿ

ಅಪರಾಧ ಮಾಡಿದರೆ ಆದಷ್ಟು ಮಿತಭಾಷಿಯಾಗಿ ಅವರನ್ನು ತಿದ್ದಿ ಅವರಿಗೆ ಬುದ್ಧಿ ಕಲಿಸುತ್ತಿದ್ದನು. ಹೆಚ್ಚುಕಾಲ ಅವರಿಗೆ ಸಂಕಟವಾಗುವ ಯಾವ ಕ್ರೂರಶಿಕ್ಷೆಯನ್ನೂ ವಿಧಿಸದೆ ಅವರನ್ನು ಗದ್ದರಿಸುವಷ್ಟರಿಂದಲೇ ಮುಕ್ತಾಯಮಾಡುತ್ತಿದ್ದನು. ಶುದ್ಧೋದನ ರಾಜನ ಮನಸ್ಸು ದಿನದಿನವೂ ಮೃದುವಾಗುತ್ತ ಬಂದಿತು. ಕೊನೆಗೆ ಮರಣದಂಡನೆಗೆ ಅರ್ಹವಾದ ಅಪರಾಧಗಳನ್ನು ಮಾಡಿದವರಿಗೆ ವಧೆಯ ಶಿಕ್ಷೆಯನ್ನು ವಿಧಿಸುವುದನ್ನು ಕೂಡ ನಿಲ್ಲಿಸಿ, ಇತರ ಶಿಕ್ಷೆಗಳಿಂದಲೇ ಅವರ ಅಪರಾಧಕ್ಕೆ ಪ್ರತೀಕಾರವನ್ನೆಸಗಿದುದು ಆತನು ಅನುಸರಿಸಿದ ಶ್ಲಾಘನೀಯವಾದ ಆಚರಣೆಯಾಯಿತು. ಅದರ ಪರಿಣಾಮವಾಗಿ ಶುದ್ಧೋದನನ ರಾಜ್ಯದಲ್ಲಿ ಮರಣದಂಡನೆಯೇ ನಿಂತುಹೋಯಿತು. ಮರಣದಂಡನೆಗೆ ಅರ್ಹರಾಗಿದ್ದ ಅಪರಾಧಿಗಳಿಗೆ ಕೂಡ ಇತರ ಶಿಕ್ಷೆಗಳನ್ನು ವಿಧಿಸಿ, ಬುದ್ಧಿವಾದಗಳನ್ನು ಹೇಳಿ ಅವರ ಮನಸ್ಸನ್ನು ತಿರುಗಿಸಿ, ಅವರಿಂದ ಸಮಾಜಕ್ಕೆ ಅಪಾಯವಾಗುವ ಸಂಭವವಿಲ್ಲವೆಂದು ದೃಢವಾದ ಮೇಲೆ ಅವರನ್ನು ಬಿಡುಗಡೆಮಾಡುವಂತೆ ಆತನು ಆಜ್ಞೆ ಮಾಡಿದ್ದನು.

ರಾಜನ ಪಾಪಭೀರುತ್ವವನ್ನೂ ಕರುಣಹೃದಯವನ್ನೂ ಮನಗಂಡು ಪ್ರಜೆಗಳು ರಾಜನಂತೆಯೇ ಧರ್ಮಾಚರಣೆಯಲ್ಲಿ ಪ್ರವೃತ್ತರಾದರು. ಪ್ರಜಾವರ್ಗದಲ್ಲಿ ಬಹು ಮಂದಿ ಸಾತ್ವಿಕವೃತ್ತಿಯನ್ನವಲಂಬಿಸಿದುದರ ಪರಿಣಾಮವಾಗಿ ಶುದ್ಧೋದನನಿಗೆ ರಾಜ್ಯಭಾರಕ್ಲೇಶವು ಸ್ವಲ್ಪ ಕಡಿಮೆಯಾಗಿ ಸತ್ಕರ್ಮಾಚರಣೆಗೆ ಹೆಚ್ಚು ಅವಕಾಶವು ದೊರೆಯಿತು. ಶುದ್ಧೋದನನು ಅದನ್ನು ಸರಿಯಾಗಿ ಉಪಯೋಗಿಸಿಕೊಂಡು, ಋಷಿಗಳಿಂದ ವಿಧಾಯಕವಾಗಿ ಋಷಿಗಳಿಂದಲೇ ಸಾಧ್ಯವೆನಿಸುವಷ್ಟು ಮಟ್ಟಿನ ಕಠೋರ ನಿಯಮಗಳುಳ್ಳ ಅನೇಕ ಶ್ರೇಷ್ಠತಮವಾದ ವ್ರತಗಳನ್ನು ಮಗನ ಅಭ್ಯುದಯಾಕಾಂಕ್ಷಿಯಾಗಿ ಅತಿ ಸಂತೋಷದಿಂದ ಆಚರಿಸಿ ಯಶಸ್ವಿಯಾದನು. ಪ್ರತಿಸಿದ್ಧವಾದ

ಬಗೆಬಗೆಯ ಧರ್ಮಕಾರ್ಯಗಳನ್ನಾಚರಿಸಿ, ಮನಸ್ಸು ಶಾಂತಿಯುಕ್ತ ವಾಗಿ ಸುಪ್ರಸನ್ನವಾಗುವಂತೆ ಮಾಡಿಕೊಂಡನು. ಶುದ್ಧೋದನನು ಪ್ರಜೆಗಳ ಯೋಗಕ್ಷೇಮಕ್ಕಾಗಿ ಅತಿ ಕಷ್ಟವೆನಿಸಿದ ದುಷ್ಕರಗಳಾದ ಅನೇಕ ಕಾರ್ಯಗಳನ್ನಾಚರಿಸಿದನು. ಪೂರ್ವದಿಂದಲೂ ನಡೆದು ಬಂದಿಲ್ಲದಿದ್ದ ಯಾವ ಹೊಸ ತೆರಿಗೆಗಳ ಹೊರೆಯನ್ನೂ ಅನವಶ್ಯವಾಗಿ ಪ್ರಜೆಗಳ ಮೇಲೆ ಹೊರಿಸದೆ ಪ್ರಜೆಗಳನ್ನು ಮಕ್ಕಳಂತೆ ಕಾಪಾಡಲಾ ರಂಭಿಸಿದನು; ಯುದ್ಧವು ಹಿಂಸೆಯಿಂದ ತುಂಬಿದ ಪಾಶವಕರ್ಮ ವೆಂದು ಭಾವಿಸಿ ಆತನು ಶಸ್ತ್ರತ್ಯಾಗಮಾಡಿ ಶಾಸ್ತ್ರವಿಮರ್ಶೆಗಾರಂಭಿಸಿ ಜಿಜ್ಞಾಸುವಾದನು; ಶಾಂತಿಯನ್ನು ಭಜಿಸಿ ನಿಯಮಾಚರಣೆಯನ್ನವ ಲಂಬಿಸಿದನು; ಸಮಸ್ತ ಪ್ರಜೆಗಳಲ್ಲಿಯೂ ಸಹ ಅನುಕಂಪವನ್ನು ತೋರಿ, ತಂದೆಯಂತೆ ಅವರನ್ನು ಪ್ರೀತಿಯಿಂದ ಕಂಡನು. ಹೆಚ್ಚೇಕೆ? ಶುದ್ಧೋದನನು ಪುತ್ರನಾದ ಸಿದ್ಧಾರ್ಥನ ಹಿತಕ್ಕಾಗಿಯೂ ಧರ್ಮಾ ಚರಣೆಗಾಗಿಯೂ ಮಾತ್ರವೇ ತಾನು ಬದುಕಿರಬೇಕೆಂಬ ಭಾವನೆ ಯಿಂದ ವರ್ತಿಸಿ ಕೃತಾರ್ಥನಾದನು. ಆತನನ್ನು ಸಂದರ್ಶಿಸುವುದೇ ಒಂದು ಪುಣ್ಯಕಾರ್ಯವೆಂದು ಸಿದ್ಧಾರ್ಥನೂ, ಆತನ ಪತ್ನಿಯೂ, ಪ್ರಜಾವರ್ಗದವರೂ ಭಾವಿಸಿ ಆತನನ್ನು ಓಲೈಸುತ್ತಿದ್ದರು.

**ರಾಹುಲನ ಜನನ**

ಯಥಾಕಾಲದಲ್ಲಿ ಯಶೋಧರೆಯು ಪುತ್ರರತ್ನವನ್ನು ಪ್ರಸವಿ ಸಿದಳು. ತನ್ನ ಮೊಮ್ಮಗನು ಚಂದ್ರಮಂಡಲದಂತೆ ಆಹ್ಲಾದಕರ ವಾದ ಮುಖಮಂಡಲದಿಂದ ಕೂಡಿದ್ದುದರಿಂದ ಶುದ್ಧೋದನನು ಅವನಿಗೆ ರಾಹುಲನೆಂದು ನಾಮ ಕರಣ ಮಾಡಿಸಿದನು. ಪುತ್ರಜನನದಿಂದ ತನಗೆ ಮತ್ತೊಂದು ಬಂಧನವು ಹೆಚ್ಚಿತೆಂದೂ, ಆದುದ ರಿಂದ ಅವನಿಗೆ ರಾಹುಲನೆಂಬ ಹೆಸರನ್ನಿಡಬೇಕೆಂದೂ ಸಿದ್ಧಾರ್ಥನು ಬಯಸಿದನಂತೆ. ತನ್ನ ಕುಲವು ವೃದ್ಧಿಯಾಯಿತೆಂದು ಭಾವಿಸಿ ಶುದ್ಧೋದನನು ಆನಂದಿಸಿದನು. ಆದರೂ ತನ್ನ ಪ್ರಿಯಪತ್ನಿಯಾದ

ಮಾಯಾದೇವಿಯನ್ನು ಸ್ಮರಿಸಿಕೊಂಡು ಹುಣ್ಣಿಮೆಯ ಬೆಳದಿಂಗಳನ್ನು ಕಂಡಂತೆ ಮೊಮ್ಮಗನ ಮುದ್ದು ಮುಖವನ್ನು ನೋಡಿ ಆಹ್ಲಾದ ಪಡುವ ಸುಯೋಗವು ಅವಳಿಗಿಲ್ಲದೆ ಹೋದುದಕ್ಕಾಗಿ ವ್ಯಥೆಪಟ್ಟು ಕಂಬನಿದುಂಬಿದನು. ತನ್ನ ಹೃದಯದಲ್ಲಿ ರೂಢಮೂಲವಾಗಿ ನೆಲಸಿದ್ದಷ್ಟು ಪುತ್ರಸ್ನೇಹವೇ ತನ್ನ ಮಗ ಸಿದ್ಧಾರ್ಥನ ಮನಸ್ಸಿನಲ್ಲಿ ಮೂಡಿದರೆ ಸಾಕೆಂದು ಆತನು ಹಾರೈಸಿ, ಜಾತಕರ್ಮ ಮುಂತಾದ ನಾನಾ ಕರ್ಮಗಳನ್ನೂ ವಿಧಿಪೂರ್ವಕವಾಗಿ ಆ ಆ ಕಾಲಗಳಲ್ಲಿ ನೆರವೇರಿಸಿ ಭೂರಿದಾನಗಳಿಂದಲೂ ಸಂತರ್ಪಣೆಗಳಿಂದಲೂ ಪ್ರಜಾವರ್ಗದಲ್ಲಿ ಸಮಸ್ತರನ್ನೂ ಸಂತೋಷಪಡಿಸಿ ತಾನೂ ಆನಂದಿಸಿದನು. ರಾಹುಲನ ಮುಖವನ್ನು ನೋಡಿ ಅವನಿಗೋಸ್ಕರವಾದರೂ ಸಿದ್ಧಾರ್ಥನು ರಾಜ್ಯವನ್ನು ಬಿಟ್ಟು ಹೋಗದಿದ್ದರೆ ಸಾಕೆಂದು ಶುದ್ಧೋದನನ ಹೃದಯ ವೀಣೆಯು ಮಿಡಿಯುತ್ತಿದ್ದಿತು. ಸಿದ್ಧಾರ್ಥನಂತಹ ಸುಪುತ್ರನು ಅಕಾಲದಲ್ಲಿ ವಿರಕ್ತನಾಗಿ ತನ್ನನ್ನೆಲ್ಲಿ ಬಿಟ್ಟುಹೋಗುವನೋ—ಎಂಬ ಆತಂಕದಿಂದಲೂ, ಕಳವಳದಿಂದಲೂ ಆಹತನಾಗಿ ಶುದ್ಧೋದನನು ತಾನು ಐಹಿಕಸುಖ ಪರಾಙ್ಮುಖನಾದ ಧರ್ಮಕಾಮನಾಗಿದ್ದೂ ತನ್ನ ಮಗನು ವಿರಕ್ತಿದೂರನಾಗಿ ಸಂಸಾರ ಸುಖವನ್ನನುಭವಿಸುತ್ತಿರಬೇಕೆಂದು ಹಾರೈಸಿದನು. ಅಲ್ಲದೆ, ಯಥಾಕಾಲದಲ್ಲಿ ರಾಜ್ಯಭಾರವನ್ನು ವಹಿಸಿಕೊಂಡು ವಾನಪ್ರಸ್ಥಾಶ್ರಮಿಯಾಗಲು ಮಹಾಪ್ರಜಾಪತೀದೇವಿಯೊಡನೆ ತನ್ನನ್ನು ಅವನು ತಪೋವನಕ್ಕೆ ಕಳುಹಿಸಿಕೊಡುವ ಸುದಿನವು ಬಂದರೆ ಸಾಕೆಂದು ಆತನು ಹೃತ್ಪೂರ್ವಕವಾಗಿ ಹಾರೈಸುತ್ತಿದ್ದನು.

# ನಾಲ್ಕನೆಯ ಅಧ್ಯಾಯ

## ಉದ್ವೇಗೋತ್ಪತ್ತಿ

ರಾಹುಲನ ಜನನವಾಗುವ ವೇಳೆಗೆ ಸಿದ್ಧಾರ್ಥನು ತತ್ತ್ವ ಚಿಂತನೆಗೆ ಪ್ರಾರಂಭ ಮಾಡಿದ್ದನು. ಸಿದ್ಧಾರ್ಥನು ತನಗೆ ಪುತ್ರೋತ್ಸವವಾದ ಬಳಿಕ ವಸಂತರುತುವಿನಲ್ಲೊಂದು ದಿನ ಪಚ್ಚೆಯ ಹಾಸಿಗೆಯಂತಿದ್ದ ಹಸಿರುಹುಲ್ಲಿನ ಬಯಲನ್ನು ನೋಡಿದನು; ಚಿಗುರೆಲೆಗಳಿಂದ ತುಂಬಿ ತೇರಿನಂತೆ ಕಂಗೊಳಿಸುತ್ತಿದ್ದ ಮರಗಳಲ್ಲಿ ಮರೆಯಾಗಿ ಕುಳಿತು ಪಂಚಮಸ್ವರದಲ್ಲಿ ಕೂಗುತ್ತಿದ್ದ ಕೋಕಿಲೆಗಳ ಮೆಲ್ಲುಲುಹನ್ನು ಕೇಳಿ ಆಹ್ಲಾದಿಸಿದನು. ತನ್ನ ಪ್ರಾಸಾದದ ಸುತ್ತಲೂ ಇದ್ದ ಉದ್ಯಾನದ ಸೊಬಗೇ ಹಾಗಿದ್ದ ಬಳಿಕ, ಕಪಿಲವಸ್ತು ನಗರದ ಸುತ್ತಲೂ ಇದ್ದ ಕಾನನ ಪ್ರದೇಶದ ನೈಸರ್ಗಿಕ ಸೌಂದರ್ಯವು ಮತ್ತೆಷ್ಟು ರಮಣೀಯವಾಗಿರಬೇಕೆಂದು ಯೋಚಿಸಿ, ತಾನು ನಗರ ಶೋಭೆಯನ್ನೂ ಆ ಬಳಿಕ ಕಾನನಪ್ರಾಂತದ ರಮಣೀಯ ದೃಶ್ಯವನ್ನೂ ನೋಡಿಕೊಂಡು ಬರಲು ಅನುಜ್ಞೆಯಾಗಬೇಕೆಂದು ಅವನು ತನ್ನ ತಂದೆಗೆ ಹೇಳಿಕಳುಹಿಸಿದನು. ವಯಸ್ಸಿಗನುರೂಪವಾದ ಆ ಬಿನ್ನಹವನ್ನು ಲಾಲಿಸಿ, ಶುದ್ಧೋದನನು ವಿಹಾರಯಾತ್ರೆಗೆ ಸಂತೋಷದಿಂದ ಅನುಮತಿಯನ್ನಿತ್ತನು. ಅಲ್ಲದೆ, ರಾಜಮಾರ್ಗಗಳಲ್ಲಿ ಅಂಗಹೀನರೂ, ವಿಕಲೇಂದ್ರಿಯರೂ, ವೃದ್ಧರೂ, ರೋಗಿಗಳೂ ಇರದಂತೆ ನೋಡಿಕೊಳ್ಳಬೇಕೆಂದು ಶುದ್ಧೋದನನು ತನ್ನ ಕೈಕೆಳಗಿನ ಅಧಿಕಾರಿಗಳಿಗೆ ಅಪ್ಪಣೆ ಮಾಡಿದನು. ಸಿದ್ಧಾರ್ಥನು ರಾಜಬೀದಿಯಲ್ಲಿ ಮೆರೆವಣಿಗೆ ಬರುವನೆಂಬ ವಾರ್ತೆಯನ್ನು ಕೇಳಿ ಪುರಜನರು ಸಂತೋಷದಿಂದಲೂ ಸಡಗರದಿಂದಲೂ ತಮ್ಮ ಮನೆಗಳನ್ನು ತಳಿರು ತೋರಣ ಮುಂತಾದುವುಗಳಿಂದ ಅಲಂಕರಿಸಿ ಅವನ ಆಗಮನವನ್ನೇ ನಿರೀಕ್ಷಿ

**ವಿಹಾರ ಯಾತ್ರೆ**

ಸುತ್ತ, ಬೀದಿಗಳಲ್ಲಿಯೂ, ಮನೆಗಳ ಮೇಲೂ, ಕಿಟಕಿಗಳ ಬಳಿಯಲ್ಲಿಯೂ, ಮನೆಯ ಬಾಗಿಲಿನ ಪ್ರದೇಶದಲ್ಲಿಯೂ ಕಿಕ್ಕಿರಿದು ತುಂಬಿದ್ದರು. ಸಿದ್ಧಾರ್ಥನು ತಂದೆಗೂ ಮಹಾಪ್ರಜಾಪತೀದೇವಿಗೂ ನಮಸ್ಕರಿಸಿ ಅವರ ಅಪ್ಪಣೆಯನ್ನು ಪಡೆದು ಬಂಗಾರದ ಗೆಜ್ಜೆಗಳೇ ಮುಂತಾದ ಆಭರಣಗಳಿಂದಲಂಕೃತವಾದ ಬಿಳಿಯ ಬಣ್ಣದ ನಾಲ್ಕು ಕುದುರೆಗಳನ್ನು ಕಟ್ಟಿ ಪ್ರಯಾಣಕ್ಕೆ ಸಿದ್ಧವಾಗಿದ್ದ ಸುವರ್ಣ ರಥವನ್ನೇರಿ ವಿಹಾರಯಾತ್ರೆಯನ್ನು ಬೆಳೆಯಿಸಿದನು.

ಸಿದ್ಧಾರ್ಥನು ಮುಪ್ಪಡಿಸಿರುವ ಮನುಷ್ಯನನ್ನೂ, ರೋಗಿಯನ್ನೂ, ಶವವನ್ನೂ, ಸಂನ್ಯಾಸಿಯನ್ನೂ ಕಂಡಾಗ್ಗೆ ಅವನಿಗೆ ಉದ್ವೇಗವುಂಟಾಗಿ ಅವನು ವಿರಕ್ತನಾಗುವನೆಂಬ ಭವಿಷ್ಯವನ್ನು ಕೇಳಿದ್ದ ಶುದ್ಧೋದನನು ಅಂತಹ ಸನ್ನಿವೇಶವೇ ಒದಗದಂತೆ ನೋಡಿಕೊಳ್ಳುವ ಹಾಗೆ ಅಧಿಕಾರಿಗಳಿಗೆ ಅಪ್ಪಣೆ ಮಾಡಿದ್ದನು.

**ಉದ್ವೇಗ ಹೇತುಗಳು**

ಕಾಲಗತಿಯು ವಿಚಿತ್ರವಾದುದು. ಶುದ್ಧೋದನನು ಆ ರೀತಿ ಅಪ್ಪಣೆ ಮಾಡಿದುದೂ, ಅವನು ಅದುವರೆಗೂ ಒಂದು ದಿನವೂ ಸಿದ್ಧಾರ್ಥನ ಕಣ್ಣಿಗೆ ಮುದುಕರೂ, ರೋಗಿಗಳೂ, ಗೋಚರಿಸದಂತೆ ಎಚ್ಚರಿಕೆಯಿಂದ ನೋಡಿಕೊಂಡಿದ್ದುದೂ ವ್ಯರ್ಥವೆನಿಸಿತು. ವೃದ್ಧಾಪ್ಯದಿಂದ ಶಿಥಿಲವಾಗಿದ್ದ ದೇಹವುಳ್ಳ ವೃದ್ಧನೊಬ್ಬನನ್ನು ಸಿದ್ಧಾರ್ಥನು ಕಂಡು ನಿಶ್ಚಲ ದೃಷ್ಟಿಯಿಂದ ಅವನನ್ನು ನೋಡಿದನು. ತಾನೆಂದೂ ವೃದ್ಧನನ್ನು ನೋಡಿರಲಿಲ್ಲವಾದ ಕಾರಣ, ಸಿದ್ಧಾರ್ಥನು ಸಾರಥಿಯನ್ನು ಕುರಿತು, "ಸೂತ! ಹುಬ್ಬುಗಳಿಂದಲೇ ಆಚ್ಛಾದಿತವಾದಂತೆ ಕಾಣುತ್ತಿರುವ ಗುಳಿಗಣ್ಣುಗಳಿಂದಲೂ, ಬೆಳ್ಳಗಿರುವ ಕೂದಲುಗಳಿಂದಲೂ, ಶಿಥಿಲವಾದ ಅಂಗಗಳಿಂದಲೂ ಕೂಡಿ ನೆಟ್ಟಗೆ ನಿಲ್ಲಲಾರದೆ ಕೋಲಿನ ಸಹಾಯದಿಂದ ನಡೆಯುತ್ತಿರುವ ಈತನಾರು? ಈತನಿಗೆ ಮನುಷ್ಯಾಕೃತಿಯಿರಲು ಕಾರಣವೇನು?" ಎಂದು ಕೇಳಿದನು. ಬಂಧನದಲ್ಲಿಟ್ಟ

ಮತ್ತಗಜದಂತೆ ಇದುವರೆಗೂ ಅರಮನೆಯಲ್ಲಿದ್ದು ಲೋಕಾನುಭವ ಶೂನ್ಯನಾಗಿದ್ದ ಸಿದ್ಧಾರ್ಥನ ಅಜ್ಞಾನಕ್ಕೆ ಆ ಸಾರಥಿಯು ನಸುನಕ್ಕು, "ಶೋಕದ ಆವಾಸಸ್ಥಾನವೂ, ಭೋಗದ ಮೃತ್ಯುವೂ ಆದ ವೃದ್ಧಾಪ್ಯದ ವಿಕಾರದಿಂದ ಆ ಮನುಷ್ಯನು ಈಗ ಹೀಗಾಗಿದ್ದಾನೆ. ವೃದ್ಧಾಪ್ಯದ ದೆಸೆಯಿಂದ ಅವನ ರೂಪವು ಅಳಿದು ಹೋಗಿ ಅವನ ತ್ರಾಣವು ಕುಗ್ಗಿಹೋಗಿದೆ" ಎಂದು ಉತ್ತರ ಹೇಳಿದನು.

ಸಿದ್ಧಾರ್ಥನು ಹೃದಯವೇಧಕವಾದ ಆ ಮಾತುಗಳನ್ನು ಕೇಳಿ, "ಸೂತ! ಈ ವೃದ್ಧಾಪ್ಯವಿಕಾರವು ನನಗೆ ಬರುವುದೆ?" ಎಂದನು. ಸೂತನು, "ಈ ಬಗೆಯ ದೇಹವಿಕಾರವು ಯಾರಿಗೂ ತಪ್ಪುವಂತಿಲ್ಲ. ಆಯುಷ್ಮಂತನಾದ ನಿನಗೂ ಇದು ತಪ್ಪದು" ಎಂದು ಪ್ರತ್ಯುತ್ತರ ಹೇಳಿದನು. ಆ ಮಾತುಗಳನ್ನು ಕೇಳಿ ಸಿದ್ಧಾರ್ಥನು ಚಿಂತಾಕ್ರಾಂತನಾಗಿ ನಿಟ್ಟುಸಿರನ್ನು ಬಿಟ್ಟು ಜೀರ್ಣದೇಹವುಳ್ಳ ಆ ವೃದ್ಧನ ಕಡೆಗೇ ದೃಷ್ಟಿಸಿ ನೋಡುತ್ತ ಸೂತನೊಡನೆ, "ಜ್ಞಾಪಕ ಶಕ್ತಿಯನ್ನೂ, ರೂಪವನ್ನೂ, ಪರಾಕ್ರಮವನ್ನೂ ಕುಗ್ಗಿಸಿ ನಾಶಗೊಳಿಸುವ ಮುಪ್ಪಿನ ಹಾವಳಿಗೆ ಪ್ರತ್ಯಕ್ಷ ನಿದರ್ಶನಗಳನ್ನು ನಿರಂತರವೂ ನೋಡುತ್ತಿದ್ದರೂ ಕೂಡ ಜನರು ಲೇಶಮಾತ್ರವೂ ಉದ್ವೇಗಹೊಂದದೆ ನಿರಾತಂಕವಾಗಿರುವುದು ಆಶ್ಚರ್ಯವೇ ಸರಿ" ಎಂದು ಹೇಳಿ ರಥವನ್ನು ಅರಮನೆಯ ಕಡೆಗೆ ಹಿಂದಿರುಗಿಸುವಂತೆ ಆಜ್ಞಾಪಿಸಿದನು. ಅರಮನೆಯ ಬಳಿಗೆ ಸೇರಿದೊಡನೆಯೆ ಸಿದ್ಧಾರ್ಥನು ರಥದಿಂದಿಳಿದು ಒಳಕ್ಕೆ ಹೋದನು.

ಚಿಂತಾವಶನಾಗಿದ್ದ ಆತನ ಮನಸ್ಸಿಗೆ ಆ ಅರಮನೆಯು ಶೂನ್ಯಪ್ರದೇಶದಂತೆ ತೋರಿತು. ಸಿದ್ಧಾರ್ಥನು ಸುಖದ ಹಂಬಲವನ್ನೇ ಮರೆತು, "ಮುಪ್ಪು, ಮುಪ್ಪು, ಯಾರಿಗೂ ತಪ್ಪುವಂತಿಲ್ಲ" ಎಂದು ಚಿಂತಿಸುತ್ತಿದನು. ಸಿದ್ಧಾರ್ಥನ ಮನಸ್ಸಿಗೆ ಉಲ್ಲಾಸವಾಗಲೆಂಬ ಬಯಕೆಯಿಂದ ಅವನು ಮತ್ತೊಮ್ಮೆ ವಿಹಾರಯಾತ್ರೆ ಹೊರಡು

ವಂತೆ ಶುದ್ಧೋದನನು ಹುರಿದುಂಬಿಸಿದನು. ಸಿದ್ಧಾರ್ಥನು ಎಂದಿನಂತೆ ಸುವರ್ಣನಿರ್ಮಿತವಾದ ರಥದಲ್ಲಿ ಕುಳಿತು ಮುಂದೆ ಮುಂದೆ ಹೋಗುತ್ತಿರುವಲ್ಲಿ ರೋಗಿಯೊಬ್ಬನು ಅವನ ಕಣ್ಣಿಗೆ ಗೋಚರಿಸಿದನು. ಶೋಭೆಯ ರೋಗದಿಂದ ಪೀಡಿತನಾದ ಆ ರೋಗಿಯು ಸ್ಥೂಲಕಾಯನಾಗಿದ್ದನು. ಅವನು ಕಷ್ಟದಿಂದ ಉಸಿರುಬಿಡುತ್ತ, ಮುಂದೆ ನೋಡಲಾರದೆ ಕೆಳಗೆ ಕುಳಿತು "ಅಮ್ಮಾ, ಅಮ್ಮಾ," ಎಂದು ಗಟ್ಟಿಯಾಗಿ ನರಳುತ್ತಿದ್ದನು. ಸಿದ್ಧಾರ್ಥನು ಅದನ್ನು ಕಂಡು ವಿಸ್ಮಿತನಾಗಿ ಸೂತನನ್ನು ಕುರಿತು, "ಅವನಾರು? ಅವೇಕೆ ಹೀಗೆ ಕಷ್ಟಪಡುತ್ತಿದ್ದಾನೆ?" ಎಂದು ಕೇಳಿದನು. ಆ ಪ್ರಶ್ನೆಗೆ ಸಾರಥಿಯು, "ಸೌಮ್ಯನೆ! ಧಾತುಪ್ರಕೋಪ ಪ್ರಭಾವದಿಂದ ಈತನಿಗೆ ಹೀಗಾಗಿದೆ. ಇದನ್ನು ರೋಗವೆಂದು ಕರೆಯುತ್ತಾರೆ. ರೋಗದ ದೆಸೆಯಿಂದ ಈತನು ಹಿಂಸೆಪಡುತ್ತಿದ್ದಾನೆ. ರೋಗವು ಬಹಳ ಅನರ್ಥಕರವಾದುದು" ಎಂದು ಉತ್ತರ ಹೇಳಿದನು. ಸಿದ್ಧಾರ್ಥನು ಆ ಮಾತುಗಳನ್ನು ಕೇಳಿ ಅನುಕಂಪ ಹೃದಯನಾಗಿ ಆ ರೋಗಿಯನ್ನೇ ದೃಷ್ಟಿಸಿ ನೋಡುತ್ತ ತನ್ನ ರಥವನ್ನು ನಿಲ್ಲಿಸಹೇಳಿ, "ಇದು ಈತನಲ್ಲಿ ಮಾತ್ರವೇ ಕಂಡುಬರುವ ದೋಷವೊ ಅಥವಾ ಪ್ರಜಾಸಾಮಾನ್ಯಕ್ಕೇ ರೋಗಭಯವೆಂಬುದುಂಟೊ?" ಎಂದನು. ಅವರಿವರೆಂದು ನೋಡದೆ ಎಲ್ಲರನ್ನೂ ರೋಗವು ಪೀಡಿಸುವುದೆಂದೂ, ರೋಗಭಯವು ಸಮಸ್ತರಿಗೂ ಸಾಮಾನ್ಯವಾಗಿದ್ದೂ ಜನರು ಅದನ್ನು ಮರೆತು ಕಾಲ ಹಾಕುವರೆಂದೂ ಸಾರಥಿಯು ಸಿದ್ಧಾರ್ಥನಿಗೆ ಅರಿಕೆಮಾಡಿದನು. ಅದನ್ನು ಕೇಳಿ ವಿಷಣ್ಣಮನಸ್ಕನಾದ ಸಿದ್ಧಾರ್ಥನ ಮನಸ್ಸು ಅಲೆಗಳಿಂದ ಆಂದೋಲಿತವಾಗುತ್ತಿರುವ ವಾರಿರಾಶಿಯಲ್ಲಿ ಬಿದ್ದ ಚಂದ್ರನ ಪ್ರತಿಬಿಂಬದಂತೆ ಕಂಪಿಸುತ್ತಿದ್ದಿತು. ಆಗ ಆತನು ಕರುಣೆಯಿಂದ ತುಂಬಿದ ಮೃದುಸ್ವರದಲ್ಲಿ, "ರೋಗಭಯವೂ ರೋಗದುಃಖವೂ ಜನಗಳನ್ನು ಹಿಂಡುತ್ತಿದ್ದರೂ ಅವುಗಳಿಂದ ಪಾರಾಗುವ ಮಾರ್ಗವನ್ನೇ ಕುರಿತು ಯೋಚಿಸದೆ ಆಲಸರಾಗಿರುವ ಅವರ ಅಜ್ಞಾನವನ್ನು

ಎಷ್ಟೆಂದು ಕೊಂಡಾಡಲಿ! ರಥವನ್ನು ಹಿಂತಿರುಗಿಸು. ಅರಮನೆಗೆ ಹೋಗೋಣ" ಎಂದನು.

ಹರ್ಷಶೂನ್ಯನಾಗಿಯೂ ಚಿಂತಾಮಗ್ನನಾಗಿಯೂ ಸಿದ್ಧಾರ್ಥನು ಹಿಂತಿರುಗಿದುದನ್ನು ಕಂಡು, ಶುದ್ಧೋದನನು ವ್ಯಥೆಪಟ್ಟನು. ಅಸಿತ ಮುನಿಯು ಸೂಚಿಸಿದ್ದ ಭವಿಷ್ಯವಾಣಿಯು ನೆನಪಾಗಿ ಅವನ ಮನಸ್ಸು ಕಳವಳದಿಂದ ಉಲ್ಲೋಲಕಲ್ಲೋಲವಾಯಿತು. ಸಿದ್ಧಾರ್ಥನು ಎರಡು ಸಾರಿ ವಿಹಾರಯಾತ್ರೆ ಹೊರಟಾಗಲೂ ಅವನಿಗೆ ಉದ್ವೇಗವಾಗುವಂತೆ ಮಾಡಿ ಮಾರ್ಗವನ್ನು ಸರಿಯಾಗಿ ನೋಡಿಕೊಳ್ಳದೆ ಶೌಚಾಧಿಕಾರಿಗಳು* ಎಚ್ಚರತಪ್ಪಿದರೆಂದೂ ಶ್ರದ್ಧೆಯಿಂದ ವರ್ತಿಸಲಿಲ್ಲವೆಂದೂ ಶುದ್ಧೋದನನು ಕೋಪಿಸಿಕೊಂಡನಾದರೂ ಆಕ್ಷೇಪಣೆಯನ್ನು ಸೂಚಿಸಿದುದು ಹೊರತು ಮತ್ತಾವ "ಉಗ್ರದಂಡನೆ"ಯನ್ನೂ ಅವರಿಗೆ ವಿಧಿಸಲಿಲ್ಲ. ಋಷಿಸದೃಶನಾಗಿದ್ದ ತಮ್ಮ ರಾಜನ ಆಕ್ರೋಶಕ್ಕೆ ಕಾರಣವುಂಟಾಯಿತೆಂಬುದೇ ಕರ್ತವ್ಯನಿಷ್ಠರಾದ ಅವರಿಗೆ ತಕ್ಕಷ್ಟು ಖೇದಜನಕವಾಗಿದ್ದಿತು. ಸಿದ್ಧಾರ್ಥನು ಮತ್ತೊಮ್ಮೆ ವಿಹಾರಯಾತ್ರೆಗೆ ಹೊರಟು ಅವನ ಮನಸ್ಸಿಗೆ ಆಹ್ಲಾದವಾದರೆ ಎಲ್ಲವೂ ಸರಿಹೋದೀತೆಂದು ಶುದ್ಧೋದನನು ವಿಧವಿಧವಾಗಿ ಪಟ್ಟಣವನ್ನು ಶೃಂಗರಿಸಬೇಕೆಂದೂ ಶೌಚಾಧಿಕಾರಿಗಳು ಅತ್ಯಂತ ಜಾಗರೂಕರಾಗಿದ್ದು ವೃದ್ಧರೂ ರೋಗಿಗಳೂ ಸಿದ್ಧಾರ್ಥನ ಕಣ್ಣಿಗೆ ಗೋಚರಿಸದಂತೆ ಮಾಡಬೇಕೆಂದೂ, ರಥವು ಹಿಂದಿನ ಎರಡು ದಿನಗಳಲ್ಲಿಯೂ ಸಾಗಿದ್ದ ಬೀದಿಯಲ್ಲಿ ಹೋಗದೆ ಆ ದಿನ ಬೇರೆ ಬೀದಿಯಲ್ಲಿ ಹೋಗಬೇಕೆಂದೂ ಕಟ್ಟುನಿಟ್ಟಾಗಿ ಆಜ್ಞೆಮಾಡಿ ಮಗನನ್ನು ಮತ್ತೊಮ್ಮೆ ವಿಹಾರಯಾತ್ರೆಗೆ ಕಳುಹಿಸಿದನು. ಅಲ್ಲದೆ, ಮಾರ್ಗಮಧ್ಯದಲ್ಲಿ ಕುಮಾರ

* ನಗರದ ರಾಜಮಾರ್ಗಗಳೇ ಮುಂತಾದ ಪ್ರದೇಶಗಳು ಸುಗಮವಾಗಿಯೂ ಚೊಕ್ಕಟವಾಗಿಯೂ, ಇರುವಂತೆ ನೋಡಿಕೊಳ್ಳುವುದು ಶೌಚಾಧಿಕಾರಿಗಳ ಕರ್ತವ್ಯವಾಗಿದ್ದಿತು.

ನೇನಾದರೂ ರಥವನ್ನು ಹಿಂತಿರುಗಿಸಬೇಕೆಂದು ಕೋರಿದರೆ ಸಾರಥಿಯು ಆರೀತಿ ಮಾಡಕೂಡದೆಂದೂ ಪ್ರಾಕೃತಿಕ ಸೌಂದರ್ಯದ ಆಗರದಂತಿದ್ದ ಪದ್ಮಖಂಡವೆಂಬ ವನಕ್ಕೆ ಸೂರ್ಯಾಸ್ತಕ್ಕೆ ಮೊದಲು ಬಹಳ ಮುಂಚೆ ಕರೆದೊಯ್ದು ಆತನ ಮನಸ್ಸು ಆಹ್ಲಾದದಿಂದ ಕೂಡಿ ಪ್ರಸನ್ನತೆಯನ್ನು ಪಡೆಯುವಂತೆ ಮಾಡಬೇಕೆಂದೂ ಸಹ, ಶುದ್ಧೋದನನು ಅಪ್ಪಣೆಮಾಡಿದ್ದನು. ಸಿದ್ಧಾರ್ಥನ ಪತ್ನಿಯರೂ, ಅವರ ಅಂತಃಪುರಗಳಲ್ಲಿ ನೃತ್ಯಗೀತಗಳನ್ನು ನಡೆಯಿಸುತ್ತಿದ್ದ ವಿಲಾಸಿನಿಯರಾದ ಸ್ತ್ರೀಯರೂ ಪದ್ಮಖಂಡವನಕ್ಕೆ ಬರುವ ಸಿದ್ಧಾರ್ಥನನ್ನು ಎದುರುಗೊಂಡು ಅವನ ಮನಸ್ಸಿಗೆ ಉಲ್ಲಾಸವುಂಟಾಗುವಂತೆ ಗೀತನೃತ್ಯಗಳನ್ನು ನಡೆಯಿಸಬೇಕೆಂದು ಮಹಾಪ್ರಜಾಪತೀದೇವಿಯು ಅಪ್ಪಣೆಮಾಡಿದಳು. ಪದ್ಮಖಂಡವನವನ್ನು ಬಗೆಬಗೆಯಾಗಿ ಅಲಂಕರಿಸುವಂತೆಯೂ ವನವಿಹಾರದ ವಿನೋದಗೋಷ್ಠಿಯನ್ನೇರ್ಪಡಿಸುವಂತೆಯೂ ರಾಜಾಜ್ಞೆಯಾಗಿದ್ದಿತು.

**ಮೂರನೆಯ ವಿಹಾರಯಾತ್ರೆ**

ಸಿದ್ಧಾರ್ಥನು ಮತ್ತೆ ವಿಹಾರಯಾತ್ರೆಗೆ ತೆರಳಿದನು. ಕುಮಾರನ ಮನಸ್ಸಿಗೆ ಆಹ್ಲಾದವುಂಟಾಗಲೆಂಬ ತೀವ್ರಾಭಿಲಾಷೆಯಿಂದ ಶುದ್ಧೋದನನು ರಾಜಮಾರ್ಗಗಳನ್ನು ಮೊದಲಿಗಿಮ್ಮಡಿಯಾಗಿ ಅಲಂಕಾರಮಾಡಿಸಿದ್ದನು. ಅಲ್ಲದೆ ವಿರಕ್ತಿಹೇತುವಾಗಬಹುದಾದ ಯಾವ ವಸ್ತುವೂ ಕುಮಾರನ ಕಣ್ಣಿಗೆ ಗೋಚರಿಸದಿರುವಂತೆ ಎಚ್ಚರಿಕೆಯಿಂದಿರಬೇಕೆಂದು ಶೌಚಾಧಿಕಾರಿಗಳಿಗೆ ಬೆಸಸಿದ್ದನು. ರಾಜನು ಇಷ್ಟು ಜಾಗರೂಕತೆಯಿಂದ ಆಜ್ಞೆಮಾಡಿದ್ದರೂ ಸಿದ್ಧಾರ್ಥನು ರಾಜಮಾರ್ಗದಲ್ಲಿ ಶವವೊಂದನ್ನು ಕಂಡನು.* ಆಗ ಸಿದ್ಧಾ

* ಸಿದ್ಧಾರ್ಥನು ಹಿಂದೆ ವೃದ್ಧನನ್ನೂ, ರೋಗಿಯನ್ನೂ, ಕಂಡುದಕ್ಕೂ, ಈ ಸಾರಿ ಶವವನ್ನು ಕಂಡುದಕ್ಕೂ ದೇವತೆಗಳ ಪ್ರಯತ್ನವೇ ಕಾರಣವೆಂದು ಬೌದ್ಧ ಗ್ರಂಥಗಳಲ್ಲಿ ಹೇಳಿದೆ. ದೇವತೆಗಳ ಪ್ರಯತ್ನವಾವುದೂ ಇಲ್ಲದೆಯೇ

ರ್ಥನು ಸಾರಥಿಯನ್ನು ಕುರಿತು, "ನಾಲ್ವರು ಹೊತ್ತುಕೊಂಡು ಹೋಗುತ್ತಿರುವ ಈತನಾರು? ಹಿಂದೆ ಹೋಗುತ್ತಿರುವವರೇಕೆ ದುಃಖಿಸುತ್ತಿದ್ದಾರೆ? ಶ್ವಾಸವಾಡುವ ಚಿಹ್ನೆಯೇ ಇಲ್ಲದೆ ಈತನೇಕೆ ನಿಶ್ಚೇಷ್ಟಿತನಾದಂತೆ ಸುಮ್ಮನೆ ಮಲಗಿದ್ದಾನೆ?" ಎಂದು ಕೇಳಿದನು. ಸೂತನು, "ಅವನು ಮರಣಹೊಂದಿ ತೃಣಕಾಷ್ಠಗಳಂತೆ ನಿಶ್ಚೇಷ್ಟಿತನಾಗಿದ್ದಾನೆ. ಬಂಧುಗಳು ಅವನನ್ನು ಸ್ಮಶಾನಕ್ಕೆ ಸಾಗಿಸುತ್ತಿದ್ದಾರೆ. ಅವನು ಮೃತಿಯನ್ನೈದಿರುವನೆಂಬ ಕಾರಣಕ್ಕಾಗಿ ಅವರು ದುಃಖಿಸುತ್ತಿದ್ದಾರೆ" ಎಂದು ಉತ್ತರ ಹೇಳಿದನು. ಆ ಬಳಿಕ ಸಿದ್ಧಾರ್ಥನು ಒಂದೆರಡು ಕ್ಷಣಕಾಲ ಯೋಚನಾಕ್ರಾಂತನಾಗಿ ಸುಮ್ಮನಿದ್ದು ಕೊನೆಗೆ, "ಮರಣವು ಇವನಿಗೆ ಮಾತ್ರವೇ ಸಂಭವಿಸಿದೆಯೋ? ಅಥವಾ ಇದು ಎಲ್ಲರಿಗೂ ಸಂಭವಿಸುವ ಅಂತಿಮ ಪರಿಣಾಮವೋ?" ಎಂದು ಸೂತನನ್ನು ಕೇಳಿದನು. ಬಡವರಾಗಲಿ, ಹಣಗಾರರಾಗಲಿ, ಮಧ್ಯಮ ಸ್ಥಿತಿಯವರಾಗಲಿ, ಮಹಾತ್ಮರಾಗಲಿ ಸಮಸ್ತರೂ ಮೃತಿ ಹೊಂದಲೇ ಬೇಕೆಂದು ಸೂತನು ತಿಳಿಸಿದನು. ಅದನ್ನು ಕೇಳಿ ರಾಜಕುಮಾರನು ವಿಷಣ್ಣಭಾವದಿಂದ ಕೂಡಿ ರಥಸ್ತಂಭಕ್ಕೆ ಭುಜವನ್ನು ಒರಗಿಸಿ ಆಲೋಚನಾಮಗ್ನನಾಗಿದ್ದು, ಕೊನೆಗೆ ನಿಟ್ಟುಸಿರುಬಿಟ್ಟು, "ಸೂತ! ಮನುಷ್ಯರ ಮನಸ್ಸು ಬಹಳ ಕಠಿನ. ಮರಣವೇ ಅಂತಿಮ ಪರಿಣಾಮವೆಂದು ತಿಳಿದೂ ನಿಶ್ಶಂಕೆಯಿಂದಿರುವುದು ಹೇಗೆ ಸಾಧ್ಯವೋ ನಾನರಿಯೆ. ವಿನಾಶದ ಜೀರುಕುಣಿಕೆಯು ಸಿದ್ಧವಾಗಿರುವುದನ್ನರಿತೂ ಯಾವ ವಿವೇಕಿಯು ತಾನೇ ವಿಹಾರಮಗ್ನನಾಗಿರಬಲ್ಲನು? ಮೊದಲು ರಥವನ್ನು ಹಿಂತಿರುಗಿಸು" ಎಂದನು. ಆದರೆ ಸೂತನು ರಥವನ್ನು

---

ಹೀಗಾಗುವುದು ಸಾಧ್ಯ. ಶೌಚಾಧಿಕಾರಿಗಳು ಎಷ್ಟೇ ಎಚ್ಚರಿಕೆಯಿಂದಿದ್ದರೂ ವೃದ್ಧನೂ ರೋಗಿಯೂ ರಾಜಕುಮಾರನಿಗೆ ಗೋಚರವಾಗಿರಬಹುದು; ಅಥವಾ ಅವರಿಂದ ಪ್ರಮಾದವುಂಟಾದೀತೆಂಬ ಅಂಶವೇ ಅವರ ಮನಸ್ಸಿಗೆ ಹೊಳೆಯದೆ ಅನಿವಾರ್ಯಪಕ್ಷವಾಗಿ ಅವರು ಸುಮ್ಮನಾಗಿರಬಹುದು.

ಹಿಂತಿರುಗಿಸಲಿಲ್ಲ. ರಾಜಾಜ್ಞೆಯು ಬಲವತ್ತರವಾದುದರಿಂದ, ಅವನು ಮರುಮಾತಾಡದೆ ರಥವನ್ನು ಪದ್ಮಖಂಡ ವನದ ಮಾರ್ಗವಾಗಿ ಮುಂದುವರಿಸಿದನು.

ಪದ್ಮಖಂಡ ವನವು ಮನೋಹರವಾಗಿ ಅಲಂಕೃತವಾಗಿದ್ದಿತು. ಯುವರಾಣಿಯಾದ ಯಶೋಧರಾದೇವಿಯೇ ಮುಂತಾದ ಸಿದ್ಧಾರ್ಥನ ಮೂವರು ಮಡದಿಯರೂ ಅತ್ಯಂತ ವೈಭವದಿಂದ

**ಸ್ವಾಗತ ಸಂರಂಭ**

ಅವನನ್ನು ಎದುರುಗೊಂಡು ಸಂಪ್ರದಾಯದಂತೆ ಆರತಿಯನ್ನೆತ್ತಿ ಲಾಜಾಕ್ಷತೆಯನ್ನೆರಚಿ ಸತ್ಕರಿಸಿದರು. ಆದರೆ ಸಿದ್ಧಾರ್ಥನ ಮನೋಧರ್ಮವು ಅಂದಿನ ವಿನೋದಕೇಳಿಗೆ ಮೋಳವಿಸುವಂತಿರಲಿಲ್ಲ; ಯುವರಾಜ ದಂಪತಿಗಳ ವನವಿಹಾರೋತ್ಸವದಲ್ಲಿ ಭಾಗಿಗಳಾಗಲು ಉತ್ಸಾಹದಿಂದ ನೆರೆದಿದ್ದ ಪುರಜನರ ಉತ್ಸಾಹವನ್ನು ಸಾರ್ಥಕಗೊಳಿಸುವಂತಿರಲಿಲ್ಲ. ಸ್ತ್ರೀಯರು ತಮ್ಮ ರೂಪಲಾವಣ್ಯಗಳನ್ನು ನಾಶಗೊಳಿಸುವ ಮುಪ್ಪು ತಮಗಾಗಿ ಕಾದಿರುವುದನ್ನೇ ಯೋಚಿಸದೆ ರೋಗ ಮೃತ್ಯುಗಳ ವಿಷಯವನ್ನೇ ಮನಸ್ಸಿಗೆ ಹಚ್ಚಿಕೊಳ್ಳದೆ ಕ್ರೀಡಾಮಗ್ನರಾಗಿ ಆಟವಾಡುತ್ತಲೂ ನಗುವಿನ ಲಹರಿಯಲ್ಲಿ ಮೈಮರೆಯುತ್ತಲೂ ನಿರುದ್ವೇಗದಿಂದಿದ್ದುದನ್ನು ಕಂಡು ವಿಸ್ಮಿತನಾಗಿ, ಸಿದ್ಧಾರ್ಥನು ಅವರಿಗಾಗಿ ಮನಮರುಗುತ್ತ ನಿಂತನು. ನೃತ್ಯಗೀತಾದಿಗಳೂ, ಸುಖಸಲ್ಲಾಪಗಳೂ, ಅವನಿಗೆ ರುಚಿಸದೆ ಹೋದುವು.

ಕುಮಾರನ ಈ ಬಗೆಯ ಔದಾಸೀನ್ಯವನ್ನು ಕಂಡು ಮಹಾರಾಣಿ ಮಹಾಪ್ರಜಾಪತೀದೇವಿಯು ಕಳವಳಗೊಂಡಳು; ವನವಿಹಾರದ ಉತ್ಸವದಲ್ಲಿ ಭಾಗಿಯಾಗುವಂತೆ ಸಿದ್ಧಾರ್ಥನಿಗೆ

**ಉದಾಯಿಯ ಉಪದೇಶ**

ಬುದ್ಧಿ ಹೇಳಬೇಕೆಂದು ಉದಾಯಿಯೆಂಬ ಸಿದ್ಧಾರ್ಥನ ಸಹಪಾಠಿಯಾದ ಆಪ್ತ ಮಿತ್ರನಿಗೆ ಆಜ್ಞಾಪಿಸಿದಳು. ಉದಾಯಿಯು ಸಿದ್ಧಾರ್ಥನ ಸನ್ಮಿತ್ರ.

ಒಮ್ಮೆ ಸಿದ್ಧಾರ್ಥನು ಸರ್ಪದಷ್ಟನಾಗುತ್ತಿದ್ದುದನ್ನು ತಪ್ಪಿಸುವ ಪ್ರಯತ್ನದಲ್ಲಿ ತಾನೇ ಹಾವಿನಿಂದ ಕಚ್ಚಿಸಿಕೊಂಡು ಬಾಧೆಪಟ್ಟ ಸ್ವಾರ್ಥತ್ಯಾಗಿ, ಉದಾಯಿ. ಸಿದ್ಧಾರ್ಥನು ತನ್ನ ಮಡದಿಯರೊಡನೆ ಸರಿಯಾಗಿ ಮಾತನಾಡದೆ ದಾಕ್ಷಿಣ್ಯಶೂನ್ಯನಾದ ಶಠನಂತೆ ವರ್ತಿಸಿದುದು ಸರಿಯುಲ್ಲವೆಂದೂ, ಅದು ಗೃಹಸ್ಥ ಧರ್ಮಕ್ಕೇ ಲೋಪವನ್ನುಂಟುಮಾಡುವ ವರ್ತನೆಯೆಂದೂ, ಅದನ್ನು ಕಂಡು ರಾಜದಂಪತಿಗಳು ಖಿನ್ನಮನಸ್ಕರಾಗಿದ್ದರೆಂದೂ, ಉದಾಯಿಯು ಬಗೆಬಗೆಯಾಗಿ ಬೋಧಿಸಿದನು. ಸಿದ್ಧಾರ್ಥನು ಸ್ವಲ್ಪಕಾಲ ನಿರುತ್ತರನಾಗಿ ನಿಟ್ಟುಸಿರುಬಿಡುತ್ತ ನಿಂತಿದ್ದು, ಕೊನೆಗೆ ಉದಾಯಿಯೊಡನೆ "ಉದಾಯಿ! ಸನ್ಮಿತ್ರನಾದ ನಿನ್ನ ಪ್ರೀತ್ಯಾದರಗಳು ಅಭಿನಂದನ ಯೋಗ್ಯವೇ ಸರಿ. ಆದರೆ ನನಗೆ ಈ ವೈಭವವಿಲಾಸಗಳಾವುವೂ ಬೇಡ" ಎಂದು ಹೇಳಿದನು.

ಆ ಮಾತುಗಳಿಗೆ ಕಾರಣವೇನೆಂಬುದು ತೋರದೆ ಉದಾಯಿಯು ಅಪ್ರತಿಭನಾಗಿ ನಿಂತನು. ಸಿದ್ಧಾರ್ಥನು ಮೃದುಮಧುರವಾದ ನುಡಿಗಳಿಂದ, "ಮುಪ್ಪು, ವ್ಯಾಧಿಯೂ ಮರಣವೂ ಸಂಭವಿಸುವುವೆಂಬ ಭಯದಿಂದ ಕೂಡಿ ಅವುಗಳನ್ನೇ ಕುರಿತು ಚಿಂತಿಸಿ ಚಿಂತಿಸಿ ದುಃಖಾರ್ತನಾಗಿರುವ ನನ್ನ ಮನಸ್ಸಿಗೆ ಶಾಂತಿಯಿಲ್ಲ. ನನ್ನ ಮನಸ್ಸಿನಲ್ಲಿ ಧೈರ್ಯಸ್ಥೈರ್ಯಗಳಿಗೆ ಲೇಶವೂ ಅವಕಾಶವಿಲ್ಲ. ಇನ್ನು ಸುಖಕ್ಕೂ ವಿನೋದಕ್ಕೂ ಅವಕಾಶವೆಲ್ಲಿ? ಒಟ್ಟು ಜಗತ್ತೇ ಅಗ್ನಿಜ್ವಾಲೆಯಿಂದ ಆವೃತವಾಗಿ ಉರಿದು ಹೋಗುತ್ತಿರುವಂತೆ ನನ್ನ ಮನಸ್ಸಿಗೆ ತೋರುತ್ತಿದೆ. ಮರಣವು ತಪ್ಪುವಂತಿಲ್ಲವೆಂಬುದನ್ನು ತಿಳಿದು ತಿಳಿದೂ ಯಾವ ಮನುಷ್ಯನು ತನ್ನ ಹೃದಯದಲ್ಲಿ ಸುಖಾಭಿಲಾಷೆಗೆ ಸ್ಥಾನಕೊಡುವನೋ ಅವನ ಮನಸ್ಸು ಕಬ್ಬಿಣದಿಂದ ನಿರ್ಮಿತವಾದುದಾಗಿರಬೇಕು. ಇಲ್ಲವಾದರೆ ಅಳಬೇಕಾದ ಸಮಯದಲ್ಲಿ ನಗುವುದು ಸಾಧ್ಯವಾಗುವ ಬಗೆ ಹೇಗೆ?" ಎಂದು ತನ್ನ ಮನಸ್ಸಿನ ನಿಶ್ಚಯವನ್ನು ನುಡಿದನು.

ಸಿದ್ಧಾರ್ಥನು ಅಂದಿನ ಉತ್ಸವದಲ್ಲಿ ಭಾಗಿಯಾಗಬೇಕೆಂದೂ, ಅವನು ದುಃಖಾರ್ತನಾಗಲು ಸ್ವಲ್ಪವೂ ಕಾರಣವಿರಲಿಲ್ಲವೆಂದೂ ಶುದ್ಧೋದನನೂ ಬೋಧಿಸಿ ನುಡಿದನು. ಅದರಿಂದಲೂ ಫಲವಾಗಲಿಲ್ಲ. ಆ ವೇಳೆಗೆ ಸೂರ್ಯನು ಅಸ್ತಮಿಸಿದನು. ಪುರಜನರೆಲ್ಲರೂ ಉತ್ಸಾಹ ಗೆಟ್ಟು ಹಿಂತಿರುಗಿದರು. ಅಂತಃಪುರಗಳ ಸ್ತ್ರೀಯರೂ ಖಿನ್ನರಾಗಿ ಅಂತಃಪುರಗಳಿಗೆ ತೆರಳಿದರು. ಸಂಸಾರವು ಅನಿತ್ಯವೆಂಬ ಅಂಶವನ್ನೇ ಕುರಿತು ಆಲೋಚಿಸುತ್ತ ಸಿದ್ಧಾರ್ಥನೂ ಅರಮನೆಗೆ ಹಿಂತಿರುಗಿದನು. ಸಿದ್ಧಾರ್ಥನಲ್ಲಿ ಭೋಗಪ್ರವೃತ್ತಿಯನ್ನು ವೃದ್ಧಿಗೊಳಿಸಬೇಕೆಂಬ ತನ್ನ ಮನೋರಥವು ಭಗ್ನವಾದುದನ್ನು ಕಂಡು, ಶುದ್ಧೋದನನು ವಿಶೇಷ ವಾಗಿ ವಿಷಾದಪಟ್ಟು ಪ್ರಿಯಃಪದಾರ್ಥಗಳ ಸುವರ್ಣ ಪಂಜರವನ್ನು ಮತ್ತಷ್ಟು ಬಲಪಡಿಸಿದನು. ಸರ್ವ ಪ್ರಯತ್ನಗಳಿಂದಲೂ ಆರಗಿಳಿಯು ಆ ಪಂಜರದಿಂದ ಹಾರಿಹೋಗದಂತೆ ಮಾಡಬೇಕೆಂಬುದೇ ಆತನ ಸಂಕಲ್ಪವಾಗಿದ್ದಿತು.

**ಚಿತ್ತಶಾಂತಿಯನ್ನು ಪಡೆಯುವ ಪ್ರಯತ್ನ**

ಅಂದಿನಿಂದಲೂ ಸಿದ್ಧಾರ್ಥನ ಚಿತ್ತಶಾಂತಿಯು ದೂರ ವಾಯಿತು. ಕ್ಷಣಭಂಗುರವಾದ ಮಾನವ ಜೀವನವು ದುಃಖಮಯ ವೆಂದು ಅವನ ಮನಸ್ಸಿಗೆ ತೋರಿತು. ಅವನು ಚಿತ್ತಶಾಂತಿಯನ್ನು ಪಡೆಯುವುದಕ್ಕಾಗಿ ಕಾನನ ಪ್ರಾಂತಕ್ಕಾದರೂ ಹೋಗಿ ಬರಬೇಕೆಂದು ಯೋಚಿಸಿದನು. ಮಂತ್ರಿಗಳ ಮಕ್ಕಳೊಡನೆ ಸಿದ್ಧಾರ್ಥನು ಅರಣ್ಯಕ್ಕೆ ಹೋಗಿಬರಬಹುದೆಂದು ರಾಜನೂ ಅಪ್ಪಣೆಯನ್ನಿತ್ತನು. ಅಶ್ವಾರೋಹಿಗಳಾದ ಮಂತ್ರಿಸುತ ರೊಡನೆ ಸಿದ್ಧಾರ್ಥನು ಕಂಥಕನೆಂಬ ಹೆಸರಿನ ತನ್ನ ಮುದ್ದು ಕುದುರೆಯನ್ನೇರಿ ಕಾನನ ಪ್ರಾಂತಕ್ಕೆ ಹೊರಟನು. ಸಿದ್ಧಾರ್ಥನ ಕುದುರೆಯೊಡನೆ ಅದರಷ್ಟು ವೇಗವಾಗಿ ಓಡುವುದು ಉಳಿದ ಕುದುರೆ ಗಳಿಗೆ ಅಸಾಧ್ಯವಾದ ಕಾರಣ, ಅವನು ಅತ್ಯಲ್ಪ ಕಾಲದಲ್ಲಿಯೇ

ಏಕಾಕಿಯಾದನು. ಅವನು ಬಹುದೂರ ಸಂಚರಿಸಿದನು. ಆದರೂ ಅವನ ಮನಸ್ಸಿಗೆ ಶಾಂತಿಯುಂಟಾಗದೆ ಮರಣ ದುಃಖವೇ ಮುಂತಾದವುಗಳ ಕಡೆಗೆ ಮನಸ್ಸು ಹರಿದೋಡಿತು. ಒಡನೆಯೇ ಅವನು ಕುದುರೆಯಿಂದಿಳಿದು, ಒಂದು ವೃಕ್ಷದ ನೆರಳಿಗೆ ಕುದುರೆಯನ್ನೊಯ್ದು, ಗಭೀರ ಚಿಂತೆಯಲ್ಲಿ ಮಗ್ನನಾದನು.

**ಭಿಕ್ಷುದರ್ಶನ**

ಅಷ್ಟರಲ್ಲಿ ಭಿಕ್ಷುವೊಬ್ಬನು ಆ ಮಾರ್ಗವಾಗಿ ಹೋಗುತ್ತಿದ್ದುದು ಸಿದ್ಧಾರ್ಥನಿಗೆ ಗೋಚರವಾಯಿತು. ಶಾಂತಿಯೇ ಮೂರ್ತಿರೂಪವನ್ನು ತಳೆದಂತಿದ್ದ ಆತನನ್ನು ನೋಡಿ ಸಿದ್ಧಾರ್ಥನಿಗೆ ಆಶ್ಚರ್ಯವುಂಟಾಯಿತು. ಸಿದ್ಧಾರ್ಥನು ಭಿಕ್ಷುವನ್ನು ಕುರಿತು, "ತಾವಾರೆಂಬುದನ್ನು ತಿಳಿಸಿ ಉಪಕರಿಸುವಿರಾ?" ಎಂದು ಕೇಳಿದನು. ಭಿಕ್ಷುವು ಅದಕ್ಕೆ ಪ್ರತ್ಯುತ್ತರವಾಗಿ, "ನಾನು ಜನ್ಮಮೃತ್ಯುಭೀತನಾಗಿ ಕಾನನಕ್ಕೆ ಓಡಿಬಂದ ಭಿಕ್ಷು. ಮೋಕ್ಷಲಾಭವನ್ನು ಬಯಸಿ ಸಂಸಾರವನ್ನು ಪರಿತ್ಯಜಿಸಿ ಬಂದವನು. ವಿಷಯ ವಿಮುಖನಾಗಿ, ರಾಗ ದ್ವೇಷಾದಿಗಳ ದಾಂಧಲೆಯಿಂದ ತಪ್ಪಿಸಿಕೊಂಡು ಬಂದಿದ್ದೇನೆ. ಕೆಲವುವೇಳೆ ಮರದ ಕೆಳಗೆ ವಾಸ. ಕೆಲವುವೇಳೆ ನಿರ್ಜನವಾದ ಪಾಳುಮನೆಯಲ್ಲಿ ವಾಸ. ಕೆಲವುವೇಳೆ ಕಾಡಿನಲ್ಲಿಯೋ ಬೆಟ್ಟದಮೇಲೋ ಬೀಡು" ಎಂದು ಹೇಳಿದನು. ತಪಶ್ಚರ್ಯೆಗಾಗಿ ಸಂಸಾರತ್ಯಾಗವು ಎಷ್ಟು ಸುಖಮಯವೆಂದು ಯೋಚಿಸಿ ಸಿದ್ಧಾರ್ಥನು ಧ್ಯಾನಮಗ್ನನಾದನು. ಬಳಿಕ ಅವನು ಮತ್ತೆ ಕಣ್ದೆರೆದು ನೋಡುವಾಗ್ಗೆ ಭಿಕ್ಷುವು ಅಲ್ಲಿರಲಿಲ್ಲ. ಸಿದ್ಧಾರ್ಥನು ಸ್ವಪ್ನಪ್ರಪಂಚದಲ್ಲಿದ್ದವನಂತೆ ತೇಜಿಯನ್ನೇರಿ ರಾಜಧಾನಿಗೆ ಹಿಂತಿರುಗಿದನು. ಮಾರ್ಗಮಧ್ಯದಲ್ಲಿ ಬಗೆಬಗೆಯ ಆಲೋಚನೆಗಳನ್ನು ಮಾಡಿ ಅರಮನೆಯನ್ನು ಬಿಟ್ಟು, ವಿರಕ್ತಿ ಸಾಮ್ರಾಜ್ಯಸುಖವನ್ನನುಭವಿಸುವುದಕ್ಕಾಗಿ ಕಾಡಿಗೆ ತೆರಳುವುದೇ ಅವಶ್ಯಕರ್ತವ್ಯವೆಂದು ನಿರ್ಧರಿಸಿ ಅರಮನೆಯ ಬಾಗಿಲಿಗೆ ಬಂದನು. ಆಗ ಕಿಸಾ

ಗೌತಮಿಯೆಂಬೊಬ್ಬ ತರುಣಿಯು ಅಂಜಲಿ ಬದ್ಧಳಾಗಿ, "ಆಯತಾಕ್ಷ! ನಿನ್ನಂತಹವನನ್ನು ಪತಿಯಾಗಿ ಪಡೆಯುವ ನಾರಿಯೇ ಸೌಖ್ಯಭಾಜನೆ. ಅವಳೇ ನಿರ್ವೃತೆ"* ಎಂದು ಹಾಡಿದಳು. ರಾಜಕುಮಾರನನ್ನು ನೋಡಿ ರೂಪಮುಗ್ಧೆಯಾಗಿ ಆಕೆಯು ಹಾಗೆ ಹೇಳಿದಳು. ಆದರೆ ಸಿದ್ಧಾರ್ಥನು ಆಕೆಯ ಆಶಯವನ್ನು ಗ್ರಹಿಸಲಿಲ್ಲ. ಸಂಸಾರವನ್ನು ಪರಿತ್ಯಜಿಸಬೇಕೆಂಬ ತನ್ನ ದೃಢಸಂಕಲ್ಪವು ಶ್ರೇಯೋಲಾಭದ ರಾಜ ಮಾರ್ಗವೆಂದು ಪರಿತೃಪ್ತಿಯನ್ನು ಪಡೆದಿದ್ದ ಉತ್ಸಾಹ ಭರದಲ್ಲಿ, ಸಿದ್ಧಾರ್ಥನಿಗೆ ಆಕೆಯ ಆಶಯವನ್ನು ಗ್ರಹಿಸುವ ಶಕ್ತಿಯೇ ಉಳಿದಿರಲಿಲ್ಲ. "ನಿರ್ವೃತೆ" ಎಂಬ ಪದವು ಕಿವಿಗೆ ಬಿದ್ದೊಡನೆಯೇ ಸಿದ್ಧಾರ್ಥನು ಕಿಸಾಗೌತಮಿಯಂತೆ ಅದಕ್ಕೆ ಸಂಸಾರದಲ್ಲಿಯ ಸೌಖ್ಯ ಭಾಜನೆಯೆಂಬ ಅರ್ಥವನ್ನೇ ಮಾಡದೆ ಪಾರಮಾರ್ಥಿಕ ಸೌಖ್ಯ ಭಾಜನೆಯೆಂದು ಅರ್ಥಮಾಡಿ ಆನಂದಪಟ್ಟನು. ತನ್ನ ಮನಸ್ಸಿನ ಭಾವಗಳಿಗನುರೂಪವಾಗಿದ್ದ ಕಿಸಾಗೌತಮಿಯ ಹೊಗಳಿಕೆಯಿಂದ ರಾಜಕುಮಾರನು ಸುಪ್ರೀತನಾಗಿ ಆಕೆಗೆ ಅನರ್ಘ್ಯವಾದೊಂದು ಮುತ್ತಿನಹಾರದ ಮೆಚ್ಚನ್ನು ಕೊಟ್ಟನು. ಆತನ ಹೃದಯದಲ್ಲಿ ಕ್ಷಣ ಕಾಲ ಮಿನುಗಿದ ಸಂತೋಷದ ಮಿಂಚು ಉತ್ತರ ಕ್ಷಣದಲ್ಲಿಯೇ ಮಾಯವಾಗಿ ಉದ್ವೇಗದ ಗಾಢಾಂಧಕಾರವೇ ಮತ್ತೆ ಮುಸುಕಿತು. ಜೀವನವು ದುಃಖಮಯವೆಂಬ ಕಾರಣದಿಂದ ಉದ್ವಿಗ್ನಚಿತ್ತನಾಗಿ ರಾಜಕುಮಾರನು ಪ್ರಾಸಾದ ಪ್ರವೇಶಮಾಡಿದನು.

ಸಿದ್ಧಾರ್ಥನು ವೃದ್ಧನನ್ನೂ, ರೋಗಿಯನ್ನೂ, ಶವವನ್ನೂ, ಕಂಡುದೇ ಆತನಿಗುಂಟಾದ ಉದ್ವೇಗಕ್ಕೆ ಕಾರಣವೆಂದು ಅನೇಕ

---

* "ಸುಖಿತಾ ಬತ ನಿರ್ವೃತಾ ಚ ಸಾ ಸ್ತ್ರೀ
ಪತಿರೀದೃಕ್ಷ್ವ ಮಿವಾಯತಾಕ್ಷ! ಯಸ್ಯಾಃ ।
ಇತಿ ತಂ ಸಮುದೀಕ್ಷ್ಯ ರಾಜಕನ್ಯಾ
ಪ್ರವಿಶಂತಂ ಪಥಿ ಸಾಂಜಲಿರ್ಜಗಾದ ॥"

ಗ್ರಂಥಗಳಲ್ಲಿ ಹೇಳಿದೆ. ಆದಾಗ್ಯೂ ಅಷ್ಟುಮಾತ್ರವೇ ಆತನ ಉದ್ವೇಗಕ್ಕೆ ಕಾರಣವಾಗಿರಲಾರದು.

**ಉದ್ವೇಗದ ವಾಸ್ತವ್ಯ ಕಾರಣ**

ಮೊದಲಿನಿಂದಲೂ ಆತನ ಮನಸ್ಸಿನಲ್ಲಿ ಹೊಗೆಯಾಡುತ್ತಿದ್ದ ಉದ್ವೇಗಾಗ್ನಿಯು ಪ್ರಜ್ವಲಿಸುವಂತೆ ಮಾಡಲು ಮಾತ್ರವೇ ಆ ಸನ್ನಿವೇಶಗಳು ಕಾರಣವಾಗಿರಬೇಕು. ಸಿದ್ಧಾರ್ಥನು ಬುದ್ಧನಾದ ಮೇಲೆ ಸ್ವತಂತ್ರವಾದ ವಿಚಾರ ಸರಣಿಯಿಂದ ನೂತನಮತವೊಂದನ್ನು ಸ್ಥಾಪಿಸಿದನಾದರೂ, ಬುದ್ಧನಾಗುವುದಕ್ಕೆ ಮೊದಲು ಆತನು ಉಪನಿಷತ್ತುಗಳ ವ್ಯಾಸಂಗವನ್ನು ಮಾಡಿರಲೇಬೇಕು. ಅದರಲ್ಲಿಯೂ ಮುಖ್ಯವಾಗಿ, ಬೃಹದಾರಣ್ಯಕೋಪನಿಷತ್ತಿನಲ್ಲಿ ಪುತ್ರೈಷಣ, ವಿತ್ತೈಷಣ, ಲೋಕೈಷಣಗಳನ್ನು ಹಳಿದು ಯಾಜ್ಞವಲ್ಕ್ಯಮಹರ್ಷಿಯು, 'ಈ ಈಷಣತ್ರಯಗಳ ಬಂಧನಕ್ಕೂ ಕಾರಣವಾಗುವ ಪುತ್ರಜನನವನ್ನೇ ವಿದ್ವಾಂಸರು ಬಯಸದೆ ಭಿಕ್ಷಾಚರ್ಯವನ್ನೆಸಗುತ್ತಾರೆ' ಎಂದು ತಾತ್ಪರ್ಯವಾಗುವಂತೆ ಹೇಳಿರುವ ವಾಕ್ಯಗಳನ್ನು ಅವನು ಮನನಮಾಡಿರಲೇಬೇಕು.* ಆದುದರಿಂದಲೇ, ಪುತ್ರೋತ್ಪನ್ನವಾದ ವಾರ್ತೆಯು ಬಂದಾಗ ಸಂಸಾರ ತ್ಯಾಗಕ್ಕೆ ಮತ್ತೊಂದು ವಿಘ್ನವು ಒದಗಿತೆಂದು ಅವನು ಹೇಳಿಕೊಂಡಿರಬೇಕು.

---

* "ಏತದ್ಧ ಸ್ಮ ವೈ ತತ್ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯನ್ತೇ ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಯಂ ಲೋಕ ಇತಿ ತೇ ಹ ಸ್ಮ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ ಯಾ ವಿತ್ತೈಷಣಾ ಸಾ ಲೋಕೈಷಣೋಭೇ ಹ್ಯೇತೇ ಏಷಣೇ ಏವ ಭವತಃ |" ಬೃಹದಾರಣ್ಯಕೋಪನಿಷತ್ ೪. ೪. ೨೨.

When Buddha, spake to his father about 'Dhamma', that he who practises 'Dhamma' reals in bliss both in this world and the next.

When king heard and understood this, entered the first of the three stages of conversion, that of "**entering-the-stream**". In this stage the person destroys the three bonds of belief in a permanent self, of trust ~~of~~ in ceremonies and good works, and of doubt. After a person has entered this stage, he is not reborn in a state of suffering and is destinied for enlightenment.

The second stage is that of the '**once-returner**' when the person has reduced passion, hatred and confusion of mind. If a person dies in this stage, he is reborn only once again before attaining Nirvana.

The third stage is that of the '**Non-returner**,' when the person has succeeded in destroying the bond of sensuality and malice. ~~If a~~ A person who dies in this

# ಐದನೆಯ ಅಧ್ಯಾಯ

—+—

## ಮಹಾಭಿನಿಷ್ಕ್ರಮಣ

ಸಿದ್ಧಾರ್ಥನು ಆ ಬಳಿಕ ತನ್ನ ತಂದೆಯ ಬಳಿಗೆ ಹೋಗಿ ದಂಡಪ್ರಣಾಮಮಾಡಿ ಭಕ್ತಿಯಿಂದ ಅಂಜಲಿಬದ್ಧನಾಗಿ ನಿಂತು ತತ್ತ್ವ . ಚಿಂತನೆಗಾಗಿ ಕಾಡಿಗೆ ಪ್ರಯಾಣಮಾಡಲು ತಂದೆಯಲ್ಲಿ ಅನುಜ್ಞೆಯಾಗಬೇಕೆಂದೂ, ಸಂಸಾರ ತ್ಯಾಗ ಪ್ರಾರ್ಥನೆ ದಿಂದಲೇ ತನ್ನ ಉದ್ದೇಶವು ಈಡೇರುವುದಾಗಿದ್ದಿತೆಂದೂ ಬಿನ್ನೈಸಿದನು. ಸಿದ್ಧಾರ್ಥನ ಮಾತುಗಳನ್ನು ಕೇಳಿ ಶುದ್ಧೋದನನು ಆನೆಯಿಂದ ಅಭಿಹತವಾದ ವೃಕ್ಷದಂತೆ ಕಂಪಿಸಿ, ಆದರದಿಂದ ಸಿದ್ಧಾರ್ಥನ ಅಂಜಲಿಯನ್ನು ತನ್ನ ಅಂಗೈಗಳಿಂದ ಹಿಡಿದುಕೊಂಡು, “ಕಂದ! ಈ ಬಗೆಯ ಬುದ್ಧಿಯನ್ನು ಸಾಕುಮಾಡು. ಧರ್ಮಸಂಶ್ರಯದ ಕಾಲವು ನಿನಗೆ ಈ ವಯಸ್ಸಿನಲ್ಲಲ್ಲ. ಈ ಅಲ್ಪ ವಯಸ್ಸಿಗೇ ಆರಣ್ಯವಾಸವನ್ನು ಕೈಕೊಂಡು ಧರ್ಮಚರ್ಯೆಯನ್ನೆಸಗುವುದು ದೋಷಾವಹವೆನ್ನುತ್ತಾರೆ. ತರುಣ ವಯಸ್ಕನ ತಪಸ್ಸು ಸಾಂಗವಾಗಿ ನೆರವೇರುವುದು ಕಷ್ಟ. ಆದಕಾರಣ, ಈ ಉದ್ಯಮವನ್ನು ಬಿಡು. ವಯೋನುಗುಣವಾಗಿ ಗೃಹಸ್ಥಾಶ್ರಮ ಧರ್ಮಗಳನ್ನನುಭವಿಸಿದ ಬಳಿಕ ತಪೋವನ ಪ್ರವೇಶವು ರಮಣೀಯವಾಗಿರುತ್ತದೆ” ಎಂದು ಹೇಳಿದನು.

ಆಗ ಸಿದ್ಧಾರ್ಥನು, “ತಂದೆಯೆ! ನಾಲ್ಕು ಕೋರಿಕೆಗಳನ್ನು ನೀನು ನೆರವೇರಿಸಿಕೊಡುವುದಾದರೆ ನಾನು ತಪೋವನಕ್ಕೆ ತೆರಳುವ ಪ್ರಯತ್ನವನ್ನು ಬಿಡುವೆನು” ಎಂದನು. ಶುದ್ಧೋದನನು ಮೈಯೆಲ್ಲ ಕಿವಿಯಾಗಿದ್ದಂತೆ ಆ ಮಾತುಗಳನ್ನು ಆಲಿಸಿ ಕೇಳಿದನು. ತನ್ನ ಉದ್ದೇಶವು ಈಡೇರಬಹುದೆಂಬ ಭಾವನೆಯಿಂದ ಆವನ ಆಶಾಲತೆಯು

ಬಹುದೂರ ಹಬ್ಬಿಹೋಯಿತು. ಅತ್ಯಂತ ಉತ್ಸಾಹ ಸಂತೋಷಗಳಿಂದ ರಾಜನು "ಅವುಗಳಾವುವು ? ನಿನ್ನ ಕೋರಿಕೆಗಳನ್ನು ಅಗತ್ಯವಾಗಿ ತಿಳಿಸು" ಎಂದನು. ಸಿದ್ಧಾರ್ಥನು ಮೆಲು ನುಡಿಯಲ್ಲಿ, "ನಾನು ಆರೋಗ್ಯದೃಢಕಾಯನಾಗಿರಬೇಕು. ಯೌವನವೇ ಶಾಶ್ವತವಾಗಿರ ಬೇಕು. ವೃದ್ಧಾಪ್ಯವೇ ನನಗೆ ಬರಕೂಡದು. ನಾನು ಮರಣ ಹೊಂದದೆ ಚಿರಜೀವಿಯಾಗಿರಬೇಕು. ಈ ನಾಲ್ಕು ಮನೋರಥಗಳೂ ಈಡೇರುವುದಾದರೆ, ನನಗೆ ತಪೋವನ ಪ್ರವೇಶವೇ ಬೇಡ" ಎಂದು ಉತ್ತರ ಹೇಳಿದನು.

ಮಗನ ಮಾತುಗಳನ್ನು ಕೇಳಿ ತಂದೆಯು ಆಶಾಲತೆಯು ಛಿನ್ನ ಭಿನ್ನವಾಗಿ ನೆಲಕ್ಕುರುಳಿತು. ಶುದ್ಧೋದನ ರಾಜನು ಕಂಬನಿ ದುಂಬಿ ಗದ್ಗದ ಧ್ವನಿಯಿಂದ, "ಕಂದ, ನನ್ನ ಮಾತನ್ನು ಲಾಲಿಸು. ಮೂರ್ಧಾಭಿಷಿಕ್ತನಾಗಿ ರಾಜ್ಯವನ್ನು ವಹಿಸಿಕೊ. ವನಗಮನಕ್ಕೆ ನನಗೆ ಅವಕಾಶವನ್ನು ಕಲ್ಪಿಸಿಕೊಡು. ಪ್ರಜಾಪರಿಪಾಲನ ಮಾಡುತ್ತ, ಅರಮನೆಯಲ್ಲಿ ಸುಖವಾಗಿರು" ಎಂದನು. ಸಿದ್ಧಾರ್ಥನು ಅದಕ್ಕೆ ಪ್ರತ್ಯುತ್ತರವಾಗಿ, "ತಂದೆಯೆ! ರಾಜಭೋಗವನ್ನು ಬಿಟ್ಟುಹೋಗ ಕೂಡದೆಂದು ನನ್ನನ್ನು ತಡೆಯುವುದು ಬೆಂಕಿಯು ಹೊತ್ತಿಕೊಂಡು ಉರಿಯುತ್ತಿರುವ ಮನೆಯನ್ನು ಬಿಟ್ಟುಹೋಗದೆ ಒಳಗೇ ಇರುವಂತೆ ತಡೆದ ಹಾಗೆ" ಎಂದನು. ಶುದ್ಧೋದನನು ಪುತ್ರಸ್ನೇಹವನ್ನು ಸೂಚಿ ಸುವ ಪ್ರೀತಿಯ ಮಾತುಗಳಿಂದ ಸಮಾಧಾನ ಹೇಳಿದನು; ಶಾಸ್ತ್ರ ವಚನಗಳ ಪ್ರಮಾಣದ ಮೇಲೆ ನಿರೋಧಿಸಿ ನೋಡಿದನು; ಕೊನೆಗೆ ದೀನವಾಣಿಯಿಂದ ಬೇಡಿ ನೋಡಿದನು. ಕೃತನಿಶ್ಚಯನಾದ ಸಿದ್ಧಾ ರ್ಥನ ಮನಸ್ಸನ್ನು ಕದಲಿಸುವುದು ಅವನಿಂದ ಸಾಧ್ಯವಾಗಲಿಲ್ಲ.

ಸಿದ್ಧಾರ್ಥನು ಸಂಗೀತ ಲೋಲನಾಗಿದ್ದ ಕಾರಣ, ಶುದ್ಧೋ ದನನು ತನ್ನ ಕೊನೆಯ ಪ್ರಯತ್ನವಾಗಿ ಸಂಗೀತ ಗೋಷ್ಠಿಯನ್ನೇ ರ್ಪಡಿಸಿ ಸಿದ್ಧಾರ್ಥನ ಸಂಕಲ್ಪವನ್ನು ಮುರಿಯುವ ಯೋಚನೆಯನ್ನು

ಮಾಡಿದನು.

**ಸಂಗೀತ ಗೋಷ್ಠಿ**

ಸಿದ್ಧಾರ್ಥನು ಸಂಸಾರತ್ಯಾಗಮಾಡುವುದರಲ್ಲಿದ್ದನೆಂಬ ಸುದ್ದಿಯನ್ನೇ ಕುಸುಮಕೋಮಲೆಯರಾದ ಯುವರಾಣಿಯರಿಗೆ ತಿಳಿಸದೆ, ಅಂತಃಪುರದಲ್ಲಿ ಅಂದು ಸಂಧ್ಯಾಕಾಲ ಅತ್ಯುತ್ತಮವಾದ ಸಂಗೀತ ಗೋಷ್ಠಿಯನ್ನು ನಡೆಯಿಸಿ, ಕಾರಣಾಂತರದಿಂದ ವಿಷಾದಗೊಂಡಿದ್ದ ಸಿದ್ಧಾರ್ಥನನ್ನು ಅವರೆಲ್ಲರೂ ಸಂತೋಷಪಡಿಸಬೇಕೆಂದು ಅಪ್ಪಣೆ ಮಾಡಿದನು. ಯುವರಾಣಿಯರಿಗೆ ಬೇಕಾಗಿದ್ದುದನ್ನೇ ಅವರ ಮಾವನೂ ಸೂಚಿಸಿದಮೇಲೆ ಅವರ ಉತ್ಸಾಹವನ್ನೂ ಸಡಗರವನ್ನೂ ಕೇಳಬೇಕೆ? ಅವರೆಲ್ಲರೂ ವಿಜೃಂಭಣೆಯಿಂದ ಸಂಗೀತ ಗೋಷ್ಠಿಗೆ ಸಜ್ಜುಗೊಳಿಸಿದರು; ಚಿತ್ತಾಕರ್ಷಕವಾದ ವಸ್ತ್ರಾಭರಣಗಳಿಂದ ಅಲಂಕಾರ ಮಾಡಿಕೊಂಡರು; ಚಿತ್ರ ವಿಚಿತ್ರವಾಗಿ ಅಂತಃಪುರವನ್ನಲಂಕರಿಸಿದರು. ಅಂತಃಪುರವು ಅಪೂರ್ವ ವಸ್ತುಗಳಿಂದಲೂ ಉತ್ತಮವಾದ ಆಸನಗಳಿಂದಲೂ ಕನಕನಿರ್ಮಿತವಾದ ದೀಪ ವೃಕ್ಷಗಳಿಂದಲೂ ಶೋಭಿಸುತ್ತ, ಕೃಷ್ಣಾಗರು ಮುಂತಾದುವುಗಳ ಧೂಪದ ಸುವಾಸನೆಯಿಂದ ತುಂಬಿದ್ದಿತು.

ಅಂದು ಅರ್ಧರಾತ್ರಿಗೆ ಅರಮನೆಯನ್ನು ಬಿಟ್ಟು ಹೊರಡಬೇಕೆಂದಿದ್ದ ಸಿದ್ಧಾರ್ಥನು ಅವರ ಸಂತೋಷಕ್ಕೆ ತನ್ನಿಂದ ಅಡ್ಡಿಯಾಗಲೇಕೆಂದು ಬಗೆದು ಸಂಧ್ಯಾಕಾಲಕ್ಕೆ ಅಂತಃಪುರಕ್ಕೆ ವಿಜಯಮಾಡಿ ತನಗಾಗಿ ಮೀಸಲಾಗಿದ್ದ ವಜ್ರಖಚಿತವಾದ ಸುವರ್ಣಾಸನದಲ್ಲಿ ಮಂಡಿಸಿದನು. ಶೃಂಗಾರ ಜಲಧಿಯೇ ಉಕ್ಕಿಬಂದಂತೆ ನಾರೀನಿವಹವು ಶೋಭಿಸುತ್ತಿದ್ದಿತು. ಕಲಾಸಂಪನ್ನೆಯರಾದ ಬಹುಮಂದಿ ವಿಲಾಸಿನಿಯರು ವೀಣಾವೇಣುಮೃದಂಗಾದಿ ವಾದ್ಯಗಳನ್ನು ಮನೋಹರವಾಗಿ ಬಾರಿಸಿ ಗಾನ ಸುಧಾರಸದ ಅಮೃತ ವರ್ಷವನ್ನು ಕರೆದರು. ಯುವರಾಣಿಯರು ಉತ್ತಮೋತ್ತಮವಾದ ಗೀತಗಳನ್ನು ತಾವೂ ಹಾಡಿ ಇನಿಯನ ಮನಸ್ಸಿಗೆ ಸಂತೋಷವಾಗುವಂತೆ ಪ್ರಯತ್ನಿಸಿದರು.

ಯಥಾಕಾಲದಲ್ಲಿ ಸಂಗೀತ ಗೋಷ್ಠಿಯು ಮುಗಿಯಿತು. ಸಿದ್ಧಾರ್ಥನ ದೃಢನಿಶ್ಚಯವು ಲೇಶವೂ ಮಾರ್ಪಡಲಿಲ್ಲ.

**ಅರಮನೆಯಿಂದ ಅರಣ್ಯಕ್ಕೆ ಪ್ರಯಾಣ**

ಆ ದಿನ ರಾತ್ರಿ ಅರಮನೆಯಲ್ಲಿ ಸಮಸ್ತರೂ ನಿದ್ರಿಸಿದರೂ ಸಿದ್ಧಾರ್ಥನೊಬ್ಬನು ಮಾತ್ರ ಎಚ್ಚರವಾಗಿಯೇ ಮಲಗಿದ್ದನು. ಸಮ ರಾತ್ರಿಯು ಕಳೆದ ಬಳಿಕ ಅರಮನೆಯನ್ನು ಬಿಟ್ಟು ಹೋಗಬೇಕೆಂಬುದು ಆತನ ಸಂಕಲ್ಪವಾಗಿದ್ದಿತು. ಯಶೋಧರಾದೇವಿಯೇ ಮುಂತಾದವರಿಗೆ ಆ ವಿಚಾರವನ್ನು ತಿಳಿಸದೆ ಆತನು ಅದನ್ನು ಮರೆಮಾಚಿದುದಕ್ಕೆ ವಂಚನೆಯು ಆತನ ಉದ್ದೇಶ ವಲ್ಲ. ತನ್ನ ತಪೋವನಗಮನ ವಾರ್ತೆಯಿಂದ ನವಯುವತಿ ಯರಾದ ತನ್ನ ಪ್ರಿಯಪತ್ನಿಯರ ದುಃಖಾವೇಗವು ಅಪರಿಮಿತವಾಗ ದಿರಲೆಂಬ ಯೋಚನೆಯಿಂದ ಸಿದ್ಧಾರ್ಥನು ಅದನ್ನು ಅವರಿಗೆ ತಿಳಿಸಲಿಲ್ಲ. ಆತನಿಗೆ ಅವರ ಮೇಲಿದ್ದ ಪ್ರೀತಿಯೇನೂ ಕಡಿಮೆ ಯಾಗಿರಲಿಲ್ಲ. ಆದಕಾರಣವೇ ತಾನು ಅರಮನೆಯನ್ನು ಬಿಟ್ಟು ಹೋಗುವುದಕ್ಕೆ ಮುಂಚೆ ಪತ್ನೀಪುತ್ರರನ್ನೊಮ್ಮೆ ಕಣ್ಣುತುಂಬ ನೋಡ ಲಿಚ್ಛಿಸಿ ಅವನು ಅಂತಃಪುರಕ್ಕೆ ತೆರಳಿದನು. ರಾಹುಲನನ್ನು ತೋಳು ತೆಕ್ಕೆಯಲ್ಲಿ ಅಪ್ಪಿಕೊಂಡಿದ್ದ ಯಶೋಧರೆಯನ್ನು ಕಂಡಾಗಲಂತೂ, ಸಿದ್ಧಾರ್ಥನು ಒಂದೆರಡು ನಿಮಿಷಗಳ ಕಾಲ ಮುಗ್ಧನಾಗಿ ನಿಂತಿ ದ್ದನು. ರಾಹುಲನ ಮುದ್ದು ಮುಖವನ್ನೊಮ್ಮೆ ಮುತ್ತಿಡಬೇಕೆಂದು ಆಶೆಯಾಯಿತು. ಆದರೆ ತಾನು ಆ ರೀತಿ ಮಾಡಿದರೆ ರಾಹುಲನಿಗೂ ಯಶೋಧರೆಗೂ ಎಚ್ಚರವಾಗಿ ತನ್ನ ಪ್ರಯಾಣವೇ ನಿಂತು ಹೋಗ ಬೇಕಾದೀತೆಂದು ಶಂಕಿಸಿ ಸುಮ್ಮನಾದನು. ತನ್ನ ಪ್ರಿಯಪತ್ನಿಯ ಸೌಂದರ್ಯವನ್ನೂ ರಾಹುಲನ ರೂಪವನ್ನೂ ನೋಡಿನೋಡಿ ಪ್ರೇಮ ಪರವಶನಾಗಿ ಸ್ತಬ್ಧತೆಯಿಂದ ಸುಮ್ಮನೆ ನಿಂತನು. ಅವರನ್ನಗಲಿ ಹೋಗಲು ಮನಸ್ಸು ಬಾರದು. ಅಗಲಿ ಹೋಗದಿದ್ದರೆ ನಿರ್ವಾಹವಿಲ್ಲ.

ಹೋಗುವುದೇ ಬಿಡುವುದೇ ಎಂದು ತರ್ಕಿಸಿ, ಕೊನೆಯ ಸಾರಿ ಅವರ ಕಡೆಗೆ ಪ್ರೇಮಪೂರಿತ ದೃಷ್ಟಿಯನ್ನು ಬೀರಿ ಅಂತಃಪುರವನ್ನು ಬಿಟ್ಟು ಆಪ್ತಭೃತ್ಯ ಛಂದಕನ* ಬಳಿಗೆ ಹೋಗಿ ಕಂಥಕವನ್ನು ತರುವಂತೆ ಅಪ್ಪಣೆಮಾಡಿ ಆವನು ಅರಮನೆಯಿಂದ ಹೊರಬಿದ್ದನು.

ಅಶ್ವವನ್ನೇರುವ ಮೊದಲು ಪ್ರೀತಿಯಿಂದ ಅದರ ಕೊರಳನ್ನು ಸವರಿ, "ಕಂಥಕ! ನನ್ನ ಹಿತಕ್ಕಾಗಿಯೂ, ಜಗತ್ತಿನ ಹಿತಕ್ಕಾಗಿಯೂ ನನ್ನನ್ನು ಕರೆದೊಯ್ದು ಉಪಕರಿಸು," ಎಂದು ಮಿತ್ರನಂತೆ ಆ ಅಶ್ವ ರತ್ನವನ್ನು ಸಂಬೋಧಿಸಿ ವಾತ್ಸಲ್ಯಯುಕ್ತನಾದ ತಂದೆಯೂ, ಅನು ರಕ್ತೆಯರಾದ ಪತ್ನಿಯರೂ, ಪ್ರಿಯತಮನಾದ ಸುತನೂ, ಪ್ರೇಮ ವಂತರಾದ ಪ್ರಜೆಗಳೂ ಇದ್ದ ಕಪಿಲವಸ್ತು ನಗರವನ್ನೂ, ರಾಜ್ಯಲಕ್ಷ್ಮಿ ಯನ್ನೂ ಬಿಟ್ಟು ಅರಣ್ಯದ ಕಡೆಗೆ ಹೊರಟನು. ಕಪಿಲವಸ್ತು ನಗರದ ಹೊರಭಾಗವನ್ನು ಸೇರಿದಾಗ ತನಗೆ ಅಷ್ಟು ದಿನಗಳೂ ಆಶ್ರಯವಾಗಿದ್ದ ಆ ನಗರಕ್ಕೆ ಕೈಮುಗಿದು ಜನನ ಮರಣ ರೂಪದ ಸಂಸಾರದುಃಖದಿಂದ ನಿವೃತ್ತನಾಗುವ ಮಾರ್ಗವನ್ನು ಕಂಡಲ್ಲದೆ ಹಿಂತಿರುಗೆನೆಂದು ಪ್ರತಿಜ್ಞೆ ಮಾಡಿದನು. ತನ್ನ ಸ್ವಾಮಿಯ ವರ್ತನೆಯನ್ನು ಕಂಡು ಆತನಿಗೆ ಅದೇ ತನ್ನ ಕೊನೆಯ ಸೇವೆಯಿರಬಹುದೆಂದು ಛಂದಕನಿಗೆ ಸಂಶಯ ವಾಯಿತು. ಆದರೂ ಅವನು ಏನೊಂದನ್ನೂ ಹೇಳದೆ ಕುತೂಹಲ ದಿಂದಲೂ ವ್ಯಥೆಯಿಂದಲೂ ತನ್ನ ಕುದುರೆಯನ್ನೇರಿ ತನ್ನ ಸ್ವಾಮಿ ಯನ್ನು ಹಿಂಬಾಲಿಸಿದನು.

ಬೆಳಗಾಗುವ ವೇಳೆಗೆ ಅವರು ಬಹುದೂರ ಪ್ರಯಾಣಮಾಡಿ ಭಾರ್ಗವನೆಂಬ ಮುನಿಯ ಆಶ್ರಮದ ಬಳಿಗೆ ಹೋದರು. ಹೊಸಬರು

---

* ಚನ್ನನೆಂದೂ ಒಂದೆರಡು ಗ್ರಂಥಗಳಲ್ಲಿವೆ. ಆದರೆ ಅವುಗಳಲ್ಲಿರುವ ಇತರ ಹೆಸರುಗಳ ರೂಪಗಳು ಇದರಷ್ಟು ಮಟ್ಟಿಗೆ ಕಿವಿಗೆ ಹಿತವಾಗಿಲ್ಲ. ಆದಕಾರಣ, ಅವುಗಳನ್ನೆಲ್ಲ ಬಿಟ್ಟಿದೆ.

ಹತ್ತಿರಕ್ಕೆ ಬಂದರೂ ನಿರಾತಂಕವಾಗಿ ಮಲಗಿದ್ದ ಜಿಂಕೆಗಳನ್ನೂ, ಅಲ್ಪಸ್ವಲ್ಪವೂ ಬೆದರದೆ ಸುಮ್ಮನಿದ್ದ ಪಕ್ಷಿ ಸಮೂಹವನ್ನೂ ಕಂಡು ಅದು ಆಶ್ರಮ ಪ್ರದೇಶವಾಗಿರಬೇಕೆಂದು ಸಿದ್ಧಾರ್ಥನು ನಿಶ್ಚಯಿಸಿದನು.

**ಛಂದಕನೊಡನೆ ಸಂಭಾಷಣೆ**

ಒಡನೆಯೇ ಆತನು ಕುದುರೆಯಿಂದಿಳಿದು ಆದರದಿಂದ ಅದನ್ನು ಮೈದಡವಿ, "ಕಂಥಕ! ಇನ್ನುಮೇಲೆ ನಿನಗೆ ಶ್ರಮ ಕೊಡುವುದಿಲ್ಲ. ನಿನ್ನನ್ನು ತೊಂದರೆಪಡಿಸಿದುದು ಇದು ಕೊನೆಯ ಸಲ" ಎಂದನು. ಛಂದಕನು ತನ್ನ ಶಂಕೆಯು ಫಲಿಸಿತೆಂದು ಶೋಕಸಂತಪ್ತನಾಗಿ ಕುತೂಹಲದಿಂದ ಸಿದ್ಧಾರ್ಥನ ಮುಖವನ್ನು ನೋಡಿದನು. ಸಿದ್ಧಾರ್ಥನು ಪ್ರೀತಿರಸದಿಂದಲೇ ಛಂದಕನಿಗೆ ಸ್ನಾನಮಾಡಿಸುವನೋ ಎಂದು ತೋರುವಂತಿದ್ದ ಸ್ನಿಗ್ಧಮಧುರ ದೃಷ್ಟಿಯಿಂದ ಅವನ ಮುಖವನ್ನು ನೋಡುತ್ತ, "ಛಂದಕ! ಸ್ವಾಮಿಭಕ್ತಿಯು ನಿನ್ನ ದೃಷ್ಟಿಯಲ್ಲಿ ಚಿತ್ರಿತವಾಗಿದೆ. ನೀನು ಇದುವರೆಗೂ ಮಾಡಿದ ಸೇವೆಯಿಂದ ಸಂತುಷ್ಟನಾಗಿದ್ದೇನೆ. ಆದರೆ ಒಂದು ವಿಶೇಷ. ಸ್ವಾಮಿಭಕ್ತಿಯಿಲ್ಲದ ಸಾಮರ್ಥ್ಯವಂತರಾದ ಸೇವಕರನ್ನೂ, ಸಾಮರ್ಥ್ಯವಿಲ್ಲದ ಸ್ವಾಮಿಭಕ್ತರಾದ ಸೇವಕರನ್ನೂ ನಾನು ಅಸಂಖ್ಯಾತವಾಗಿ ಕಂಡುದುಂಟು. ಆದರೆ ಸಾಮರ್ಥ್ಯವೂ, ಸ್ವಾಮಿಭಕ್ತಿಯೂ ಎರಡೂ ಇರತಕ್ಕ ನಿನ್ನಂತಹವನನ್ನು ಕಾಣುವುದು ದುರ್ಲಭವೇ ಸರಿ" ಎಂದು ಹೇಳಿದನು; ಆ ಬಳಿಕ ಛಂದಕನಿಗೆ ಅನರ್ಘ್ಯವಾದ ಆಭರಣಗಳ ಮೆಚ್ಚನ್ನು ಕೊಟ್ಟು, "ಛಂದಕ, ಹೋಗಿ ಬಾ. ಸುಖವಾಗಿ ಬಾಳು" ಎಂದನು.

ಛಂದಕನು ಕಣ್ಣೀರನ್ನು ಸುರಿಸುತ್ತ "ಪ್ರಭುವೆ! ನಿನ್ನ ಮಾತಿಗೆ ನಾನೆಂದೂ ಪ್ರತಿಹೇಳಿದವನಲ್ಲ. ಆದರೆ ಇಂದು ಮಾತನಾಡಲೇಬೇಕಾಗಿದೆ. ಕಾರುಣ್ಯನಿಧಿಯಾದ ನೀನು ನನ್ನ ಅಲ್ಪ ಸೇವೆಯನ್ನೂ ಮೆಚ್ಚಿರುವುದರಲ್ಲಿ ಆಶ್ಚರ್ಯವೇನುಂಟು? ಆದರೆ,

ಪ್ರಭುವೇ! ನೀನು ಬಿಜಯ ಮಾಡುವುದೆಲ್ಲಿಗೆ?" ಎಂದನು. ಸಿದ್ಧಾರ್ಥನು "ಛಂದಕ! ನಾನು ಜನನ ಮರಣಗಳಿಂದ ಪಾರಾಗುವ ಪರಮಾರ್ಥವನ್ನು ಸಾಧಿಸಲು ತಪೋವನಕ್ಕೆ ತೆರಳುವೆನು" ಎಂದನು. ಛಂದಕನು ಕಣ್ಣೀರನ್ನು ಸುರಿಸುತ್ತ, "ಪ್ರಭುವೆ! ನಿನ್ನ ಈ ಬಗೆಯ ಸಂಕಲ್ಪವನ್ನು ಕಂಡು ಕಬ್ಬಿಣದ ಹೃದಯವೂ ಕರಗಿಹೋಗುವದಾಗಿದೆ. ಅಂತಃಪುರದಲ್ಲಿ ಹಂಸತೂಲಿಕಾತಲ್ಪದಲ್ಲಿ ಪವಳಿಸುತ್ತಿದ್ದ ನನ್ನ ಪ್ರಭುವಿಗೆ ಇನ್ನುಮುಂದೆ ದರ್ಭಶಯನವೇ? ನಾನಂತೂ ಕಪಿಲವಸ್ತುವಿಗೆ ಹೋಗಲಾರೆ. ನಿನ್ನನ್ನು ಸೇವಿಸುತ್ತ ನಿನ್ನ ಬಳಿಯಲ್ಲಿಯೇ ನಿಲ್ಲುವೆನು? ಎಂದು ಹೇಳಿ ಮಗುವಿನಂತೆ ರೋದಿಸಿದನು.

ಸಿದ್ಧಾರ್ಥನು ಅವನ ಬೆನ್ನನ್ನು ತಟ್ಟಿ, "ಫಲವು ಲಭಿಸುವ ಕಾಲವಲ್ಲಿ ಆದರದಿಂದ ಓಲೈಸುವವರು ಬಹುಮಂದಿ. ಆಶ್ರಮವಾಸಿಯಾಗುವ ಸ್ವಾಮಿಯನ್ನು ಪ್ರೀತಿಸುವ ನಿನ್ನಂತಹ ಪ್ರಿಯ ಸೇವಕರು ಅತಿವಿರಳ. ಪ್ರಯೋಜನಾಕಾಂಕ್ಷೆಗೆ ಅವಕಾಶವಿಲ್ಲದ ಸ್ಥಿತಿಯು ಬಂದಾಗ ಪ್ರಿಯ ಬಂಧುಗಳೂ ಅಲಕ್ಷ್ಯ ಮಾಡುವುದು ಲೋಕದಲ್ಲಿ ವಾಡಿಕೆ. ಸಾಮಾನ್ಯವಾಗಿ ತಂದೆಯು ಕುಲಾಭ್ಯುದಯದ ಆಶೆಯಿಂದ ಮಗನನ್ನು ಸಾಕುತ್ತಾನೆ. ತಮಗೆ ಪೋಷಣೆ ದೊರೆಯುವುದೆಂಬ ಆಶೆಯಿಂದ ಪುತ್ರರು ಪಿತೃಭಕ್ತಿಯನ್ನು ಪ್ರದರ್ಶಿಸುತ್ತಾರೆ. ಆಶೆಯಿಂದ ಕೂಡಿಯೇ ಜನರು ಪ್ರೀತಿಗೌರವಗಳನ್ನು ತೋರಿಸುತ್ತಾರೆ.‡ ಹೀಗಿರುವಲ್ಲಿ ನನ್ನಿಂದ ಯಾವುದೊಂದು ಪ್ರಯೋ

---

‡ ಸಿದ್ಧಾರ್ಥನ ವಾದಸರಣಿಯನ್ನು ಗಮನಿಸಿದವರಾರೇ ಆಗಲಿ ಬೃಹದಾರಣ್ಯಕೋಪನಿಷತ್ತಿನ "ಸ ಹೋವಾಚ ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ। ನ ವಾ ಅರೇ ಜಾಯಾಯೈಃ ಕಾಮಾಯ ಜಾಯಾ ಪ್ರಿಯಾ ಭವತ್ಯಾತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ । ನ ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಪುತ್ರಾಃ

ಜನಾಕಾಂಕ್ಷೆಗೂ ಅವಕಾಶವೇ ಇಲ್ಲದಿರುವ ಈಗಿನ ಸ್ಥಿತಿಯಲ್ಲಿ ನೀನು ನನ್ನೊಡನೆ ನಿಲ್ಲುವ ವಾರ್ತೆಯನ್ನು ಕೇಳಿ ಸಂತುಷ್ಟನಾದೆನು. ಆದರೆ ನೀನು ನನ್ನ ಸಂಗಡ ನಿಲ್ಲದೆ ಕಂಥಕನೊಡನೆ ಕಪಿಲವಸ್ತುವಿಗೆ ಹಿಂತಿರುಗು" ಎಂದನು. ಛಂದಕನು ಗದ್ಗದ ಸ್ವರದಿಂದ "ಪ್ರಭುವೆ! ಕಂಥಕನನ್ನು ನಿನ್ನ ಬಳಿಗೆ ತರುವಂತೆ ನೀನು ಆಜ್ಞಾಪಿಸಿದಾಗ ಹತಭಾಗ್ಯನಾದ ನಾನು ನನ್ನ ದುರದೃಷ್ಟವಶದಿಂದಲೇ ಮೌನವಾಗಿ ನಿನ್ನ ಬಳಿಗೆ ಅದನ್ನು ತಂದೆನೆಂದು ತೋರುತ್ತದೆ. ನಾನೇ ನಿನ್ನನ್ನು ಕಾಡಿಗೆ ತಂದು ಸೇರಿಸಿ ಕಂಥಕನೊಡನೆ ಹೇಗೆ ತಾನೆ ಊರಿಗೆ ಹಿಂತಿರುಗಲಿ? ಒಡಲಿನ ದುಃಖವನ್ನು ಸೈರಿಸಲಾರದೆ ಅಳತೆಗೆಟ್ಟು ನುಡಿಯುತ್ತಿರುವ ನನ್ನ ದೈನ್ಯಾಲಾಪಕ್ಕಾಗಿ ನನ್ನನ್ನು ಮನ್ನಿಸು. ನಿನ್ನ ಪಾದಗಳೇ ನನಗೆ ಗತಿ. ಹಿಂದೆ ಸುಮಂತ್ರನು ರಾಘವನನ್ನು ಅರಣ್ಯದಲ್ಲಿ ಬಿಟ್ಟು ಅಯೋಧ್ಯೆಗೆ ತೆರಳಿದಂತೆ ನಾನೂ ನಿನ್ನನ್ನು ಕಾಡಿನಲ್ಲಿ ಬಿಟ್ಟು ಕಪಿಲವಸ್ತುವಿಗೆ ಹೋಗುವಂತೆ ಮಾಡಬೇಡ. ನಾನು ರಾಜದಂಪತಿಯರಿಗೂ, ಯುವರಾಣಿಯರಿಗೂ, ಪುರಜನರಿಗೂ ಏನೆಂದು ಉತ್ತರ ಹೇಳಲಿ? ನಾನು ನಿನ್ನ ಬಳಿಯಲ್ಲಿರಲು ಅನುಜ್ಞೆಯನ್ನು ಕೊಡು" ಎಂದು ಬಗೆಬಗೆಯಾಗಿ ಬೇಡಿಕೊಂಡನು.

ಪರಿಪರಿಯಾಗಿ ಪ್ರಲಾಪಿಸಲಾರಂಭಿಸಿದ ಆಪ್ತ ಸೇವಕನಾದ ಛಂದಕನಿಗೆ ಸಮಾಧಾನವುಂಟಾಗಲೆಂಬ ಉದ್ದೇಶದಿಂದ ಸಿದ್ಧಾರ್ಥನು

---

ಪ್ರಿಯಾಭವತಿ!..............................." (ಪತಿಯ ಸೌಖ್ಯಕ್ಕಾಗಿ ಪತಿಯು ಪ್ರಿಯನಾಗುವುದಿಲ್ಲ; ಸ್ವಂತಸೌಖ್ಯದ ಆಶೆಗಾಗಿ ಪತಿಯು ಪ್ರಿಯನಾಗುತ್ತಾನೆ. ಪತ್ನಿಯ ಸೌಖ್ಯಕ್ಕಾಗಿ ಪತ್ನಿಯು ಪ್ರಿಯಳಾಗುವುದಿಲ್ಲ; ಸ್ವಂತ ಸೌಖ್ಯದ ಆಶೆಗಾಗಿ ಪತ್ನಿಯು ಪ್ರಿಯಳಾಗುತ್ತಾಳೆ. ಪುತ್ರರ ಸೌಖ್ಯಕ್ಕಾಗಿ ಪುತ್ರರು ಪ್ರಿಯರಾಗುವುದಿಲ್ಲ; ಸ್ವಂತ ಸೌಖ್ಯದ ಆಶೆಗಾಗಿ ಪುತ್ರರು ಪ್ರಿಯರಾಗುತ್ತಾರೆ........................) ಎಂಬ-ಯಾಜ್ಞವಲ್ಕ್ಯ ಮಹರ್ಷಿಯ-ವಾಕ್ಯಗಳನ್ನು ನೆನಪಿಗೆ ತರುವುದಕೊಳ್ಳದಿರುವ ಬಗೆ ಹೇಗೆ?

ಅವನೊಡನೆ, "ಛಂದಕ! ನನ್ನ ವಿಯೋಗವನ್ನು ಕುರಿತು ಈ ರೀತಿ ಸಂತಾಪಪಡುವುದನ್ನು ಬಿಡು. ಪರಮಾರ್ಥ

**ಸಮಾಧಾನೋಕ್ತಿ**

ಸಾಧನೆಯ ಪ್ರಯತ್ನಕ್ಕಾಗಿ ಈಗೊಂದು ವೇಳೆ ನಾನು ಬಂಧುಗಳನ್ನು ಅಗಲಲಾರದೆ ಸುಮ್ಮ ನಿದ್ದರೂ, ಮುಂದೆ ಮೃತ್ಯುವು ಅಗಲಿಕೆಯನ್ನುಂಟುಮಾಡಿಯೇ ತೀರುತ್ತದೆ. ಯಾವ ಮಾಯಾದೇವಿಯು ಅತ್ಯಂತ ಆಶೆಯಿಂದ ನನ್ನನ್ನು ನೋಡಿ ಹಿಗ್ಗಿದಳೋ ಆ ನನ್ನ ಜನನಿಯು ಈಗೆಲ್ಲಿ? ಅವಳಿಗೆ ನನ್ನಿಂದ ಆದ ಉಪಕಾರವೇನು? ಪಕ್ಷಿಗಳು ಒಂದು ವೃಕ್ಷದ ಮೇಲೆ ರಾತ್ರಿಯನ್ನು ಕಳೆದು ಬೆಳಗಾಗುತ್ತಲು ದೂರ ಸರಿಯು ವಂತೆಯೇ ನಮ್ಮ ಬಾಳೂ ಇರುವುದು. ಕೊಕ್ಕರೆಗಳು ಒಂದರೊಡ ನೊಂದು ಒಡನಾಡುತ್ತಿದ್ದು ಆ ಬಳಿಕ ಅಗಲುವಂತೆ ಸ್ವಪ್ನಸದೃಶ ವಾದ ಈ ಜೀವನದಲ್ಲಿ ಮಾನವರ ಗತಿಯೂ ಇದೆ. ಛಂದಕ! ಈ ಅಂಶಗಳನ್ನು ಗ್ರಹಿಸು. ಕಪಿಲವಸ್ತು ನಗರಕ್ಕೆ ಹಿಂತಿರುಗಿ, ಆ ತರುವಾಯವೂ ಸ್ನೇಹವು ಬಾಧಿಸಿದರೆ, ಮತ್ತೆ ನನ್ನ ಬಳಿಗೆ ಬಾ" ಎಂದು ಹೇಳಿದನು. ಮತ್ತೆ ಬರಲು ಸ್ವಾಮಿಯು ಕೃಪೆಗೈದು ಅನುಜ್ಞೆ ಯನ್ನಿತ್ತುದರಿಂದ ಛಂದಕನು ತಾನೇ ಧನ್ಯನೆಂದೆಣಿಸಿದನು.

ಆ ಬಳಿಕ ಸಿದ್ಧಾರ್ಥನು, "ಛಂದಕ! ನಾನು ದಂಡಪ್ರಣಾಮ ಗಳೊಡನೆ ಈ ರೀತಿ ಬಿನ್ನೈಸಿದೆನೆಂದು ತಂದೆಯವರಿಗೆ ತಿಳಿಸು:

**ಸಪ್ರಣಾಮ ಸಂದೇಶ**

'ನಾನು ಜರಾಮರಣ ನಾಶಾರ್ಥವಾಗಿ ತಪೋವನ ವನ್ನು ಪ್ರವೇಶಿಸಿರುವವನೇ ಹೊರತು ಸ್ವರ್ಗಾ ಪೇಕ್ಷೆಯಿಂದಲೇ ಆಗಲಿ, ಕೋಪದಿಂದಲೇ ಆಗಲಿ ಅಥವಾ ಪಿತೃಭಕ್ತಿಯಿಲ್ಲದೆಯೇ ಆಗಲಿ ಹಾಗೆ ಮಾಡಿದವನಲ್ಲ. ಶೋಕ ತ್ಯಾಗಕ್ಕಾಗಿಯೇ ಹೊರಟು ಬಂದಿರುವ ನನ್ನನ್ನು ಕುರಿತು ತಾವಾದರೂ ಶೋಕಿಸಕೂಡದು. ನನಗಾಗಿ ದುಃಖಿಸಬೇಕಾಗಿಲ್ಲವೆಂದು ಬಿನ್ನೈಸುತ್ತೇನೆ. ತಮ್ಮಿಂದ ರಾಜ್ಯ

ವನ್ನು ಸ್ವೀಕರಿಸಿ ಅರ್ಥದಾಯಾದನೆನಿಸುವುದಕ್ಕಿಂತ ಶುದ್ಧಾತ್ಮರಾದ ತಮ್ಮ ಧರ್ಮ ವೃತ್ತಿಯನ್ನೇ ಅನುಕರಣಮಾಡಿ ಧರ್ಮದಾಯಾದ ನೆನಿಸಲು ವನಪ್ರವೇಶ ಮಾಡಿದ್ದೇನೆ. ಆದರೆ ತಪೋವೃತ್ತಿಗೆ ಇದು ಸಕಾಲವಲ್ಲವೆಂದು ತೋರಿದರೂ ತೋರಬಹುದು. ಚಂಚಲವಾದ ಮಾನವ ಜೀವನದಲ್ಲಿ ಧರ್ಮಾಚರಣೆಗೆ ಅಕಾಲವೆಂಬುದೇ ಇಲ್ಲ. ಆದಕಾರಣ, ಶ್ರೇಯಸ್ಸಾಧನೆಗೆ ನನಗೆ ಇದೇ ಸಕಾಲವೆಂದು ಭಾವಿಸಿ ರಾಜಧಾನಿಯನ್ನು ಬಿಟ್ಟುಬಂದೆನು. ಮರಣ ಭೀತಿಯು ಸಂತತವೂ ನಮ್ಮ ಮನಸ್ಸನ್ನಾವರಿಸಿ ಮೃತ್ಯುವು ಸಿದ್ಧವಾಗಿರುವಲ್ಲಿ ಜೀವನದಲ್ಲಿ ನಂಬಿಕೆಯನ್ನಿಡುವ ಬಗೆ ಹೇಗೆಂಬುದನ್ನರಿಯದೆ ಹೊರಟು ಬಂದೆನು'—ಛಂದಕ! ತಂದೆಯವರಿಗೆ ಈ ಮಾತುಗಳನ್ನು ವಿಜ್ಞಾಪಿಸು" ಎಂದು ಹೇಳಿದನು.

ಆ ತರುವಾಯ ಸಿದ್ಧಾರ್ಥನು ಛಂದಕನ ಖಡ್ಗವನ್ನು ತೆಗೆದುಕೊಂಡು, ಒರೆಯಿಂದದನ್ನು ಹಿರಿದು ತನ್ನ ತಲೆಯ ಕೂದಲನ್ನು ಕತ್ತರಿಸಿಕೊಂಡನು. ಆ ವೇಳೆಗೆ ಕಾಷಾಯ ವಸ್ತ್ರಗಳನ್ನು ಧರಿಸಿದ ಬೇಡನೊಬ್ಬನು ಧನುರ್ಬಾಣಗಳೊಡನೆ ಅಲ್ಲಿಗೆ ಬಂದನು. ಸಿದ್ಧಾರ್ಥನು ಅವನನ್ನು ಕುರಿತು, "ಇದೇನು ಈ ವಿಚಿತ್ರ ವ್ಯಾಪಾರ! ಋಷಿಯೋಗ್ಯವೆನಿಸಿ ಮಂಗಳಕರವಾಗಿರುವ ಕಾಷಾಯ ವಸ್ತ್ರಗಳನ್ನು ಧರಿಸಿರುವುದೇನು! ಸಾಧುವೃತ್ತಿ ಸೂಚಕವಲ್ಲದ ಧನುರ್ಬಾಣಗಳನ್ನು ಒಡಿದು ಹೊರಟಿರುವುದೇನು! ಇವೆರಡೂ ಪರಸ್ಪರವಾಗಿ ಅಸಂಗತವಲ್ಲವೆ?" ಎಂದನು. ಆ ಆಶ್ರಮ ಪ್ರದೇಶದಲ್ಲಿ ಮೃಗಪಕ್ಷಿಗಳು ಕಾಷಾಯ ವಸ್ತ್ರಧಾರಿಗಳನ್ನು ಕಂಡರೆ ನಿರಾತಂಕವಾಗಿ ಸಮೀಪಕ್ಕೆ ಬರುವಷ್ಟು ಸಲಿಗೆಯು ಬೆಳೆದಿದ್ದ ಕಾರಣ, ಅನಾಯಾಸವಾಗಿ ಜಿಂಕೆ ಮುಂತಾದವನ್ನು ಕೊಲ್ಲಬಹುದು ದೆಂದು ತಾನು ತಪಸ್ವಿವೇಷದಿಂದ ಅಲ್ಲಿಗೆ ಬಂದಿದ್ದುದಾಗಿ ಬೇಡನು ತಿಳಿಸಿದನು. ಬೇಡನು ಉದ್ದೇಶಿಸಿದ್ದ ಘೋರಕೃತ್ಯಕ್ಕಾಗಿ ಮನ

**ಕೇಶ ಕಂಡನ ಕಾಷಾಯ ವಸ್ತ್ರಧಾರಣ**

ನೊಂದು ಅದಕ್ಕೆ ಅವಕಾಶವನ್ನು ತಪ್ಪಿಸುವುದರ ಜೊತೆಗೆ ಅವನಿಂದ ಕಾಷಾಯವಸ್ತ್ರವನ್ನೂ ಪಡೆಯಬೇಕೆಂಬ ಆಶಯವನ್ನಿಟ್ಟುಕೊಂಡು ಸಿದ್ಧಾರ್ಥನು ಬೇಡನನ್ನು "ನನ್ನ ವಸ್ತ್ರಗಳಿಗೆ ಪ್ರತಿಯಾಗಿ ನಿನ್ನವುಗಳನ್ನು ಕೊಡುವೆಯಾ?" ಎಂದು ಕೇಳಿದನು. ಸಿದ್ಧಾರ್ಥನು ಧರಿಸಿದ್ದ ಕಾಂಚನ ಹಂಸಚಿತ್ರಿತವಾದ ಅಮೂಲ್ಯವಾದ ಶ್ವೇತವಸ್ತ್ರಗಳಿಗೆ ಆಸೆಪಟ್ಟು ಬೇಡನು ಅದಕ್ಕೊಪ್ಪಿದನು. ಹಿಂಸೆಯ ವೃತ್ತಿಯನ್ನು ಬಿಡುವುದು ಸಾಧ್ಯವಲ್ಲದಿದ್ದರೆ ಮೋಸದಿಂದ ವರ್ತಿಸುವುದನ್ನಾದರೂ ಬಿಡಬೇಕೆಂದು ಕಟುತರವಾಗಿ ಬೇಡನಿಗೆ ಬುದ್ಧಿಹೇಳಿ ಸಿದ್ಧಾರ್ಥನ ತನ್ನ ಶ್ವೇತವಸ್ತ್ರಗಳನ್ನು ಅವನಿಗಿತ್ತು ಅವನಿಂದ ಪಡೆದ ಕಾಷಾಯ ವಸ್ತ್ರಗಳನ್ನು ತಾನು ಧರಿಸಿದನು.‡ ಬೇಡನು ತಾನು ಮಾಡಬೇಕೆಂದಿದ್ದ ಹೀನ ಕೃತ್ಯಕ್ಕಾಗಿ ನಾಚಿ ಅಲ್ಲಿ ನಿಲ್ಲಲಾರದೆ ಹೊರಟು ಹೋದನು. ಆ ಬಳಿಕ ಸಿದ್ಧಾರ್ಥನು ಕಂಥಕನ ಮೈದಡವಿ ಛಂದಕನನ್ನು ಬೀಳ್ಕೊಂಡು ಆಶ್ರಮದ ಕಡೆಗೆ ತೆರಳಿದನು.

ಅರಮನೆಯಲ್ಲಿ ದಿವ್ಯಾಲಂಕಾರ ಭೂಷಿತನಾಗಿ ರಾಜಭೋಗವನ್ನನುಭವಿಸುತ್ತಿದ್ದ ತನ್ನ ಪ್ರಭುವು ಬೇಡನೊಬ್ಬನು ಕೊಟ್ಟ ಕಾಷಾಯವಸ್ತ್ರವನ್ನು ಧರಿಸಿ ಭಿಕ್ಷುಕನಂತೆ ಆಶ್ರಮದ ಕಡೆಗೆ ಹೊರಟು ಹೋದುದನ್ನು ಕಂಡು ಛಂದಕನು ದುಃಖಾವೇಗವನ್ನು ಸಹಿಸಲಾರದೆ ಕಂಥಕನ ಕೊರಳನ್ನು ಬಿಗಿದಪ್ಪಿ ಗಳಗಳನೆ ರೋದಿಸಿದನು. ಬಳಿಕ ಸ್ವಲ್ಪಕಾಲದ ಮೇಲೆ ಕಂಥಕನೊಡನೆ ಕಪಿಲವಸ್ತು ನಗರಕ್ಕೆ ಪ್ರಯಾಣ ಮಾಡಿದನು. ಸ್ವಾಮಿಭಕ್ತನಾದ ಛಂದಕನು ಶೋಕಸಂತಪ್ತನಾದ ಉನ್ಮತ್ತನಂತಿದ್ದನು. ದಣಿದ ಕುದುರೆಗಳು; ದುಃಖದಿಂದ ತುಂಬಿದ

---

‡ ಸ್ವರ್ಗಲೋಕದಿಂದ ದಿವೌಕಸನೊಬ್ಬನು ಸಿದ್ಧಾರ್ಥನಿಗೆ ಕಾಷಾಯ ವಸ್ತ್ರಗಳನ್ನು ಕೊಡುವುದಕ್ಕಾಗಿ ಬೇಡನ ವೇಷವನ್ನು ಧರಿಸಿ ಬಂದಿದ್ದನೆಂದು ಬುದ್ಧಚರಿತವೇ ಮುಂತಾದ ಬೌದ್ಧಗ್ರಂಥಗಳಲ್ಲಿ ಹೇಳಿದೆ. ಆದರೆ ವಾಸ್ತವವಾಗಿ ಬೇಡನೊಬ್ಬನಿಂದಲೇ ಆತನು ಕಾಷಾಯ ವಸ್ತ್ರಗಳನ್ನು ಪಡೆದನೆಂದು ಭಾವಿಸಿದರೂ ಬುದ್ಧನಲ್ಲಿ ನಮಗಿರುವ ಗೌರವವೇನೂ ಕಡಮೆಯಾಗುವುದಿಲ್ಲ.

ಮನಸ್ಸು. ಆದಕಾರಣ, ಬರುವಾಗ ಒಂದೇ ರಾತ್ರಿಯಲ್ಲಿ ಬಂದಿದ್ದಷ್ಟು ದೂರದ ಪ್ರಯಾಣಕ್ಕೇ ಛಂದಕನಿಗೆ ಮೂರು ದಿನಗಳು ಹಿಡಿದುವು.

ಛಂದಕನು ಕಪಿಲವಸ್ತು ನಗರಕ್ಕೆ ಹಿಂತಿರುಗುವ ವೇಳೆಗೆ ರಾಜ ಕುಟುಂಬದವರೂ ಪ್ರಜಾವರ್ಗದವರೂ ಸಿದ್ಧಾರ್ಥನನ್ನು ಕಾಣದೆ ಕಳವಳದಿಂದ ಕೂಡಿ ಪರಿತಾಪ ಪಡುತ್ತಿದ್ದರು.

**ರಾಜಧಾನಿಯಲ್ಲಿಯ ಹೃದಯ ವಿದಾರಕ ದೃಶ್ಯ**

ಶುದ್ಧೋದನನು ಭಟರನ್ನಟ್ಟಿ ನಾನಾ ಸ್ಥಳಗಳಲ್ಲಿಯೂ ಹುಡುಕಿಸಿದನು; ಅವನ ಪ್ರಯತ್ನವು ವಿಫಲವಾಯಿತು. ಸಿದ್ಧಾರ್ಥನು ತಪೋವನಕ್ಕೆ ತೆರಳಿರಬಹುದೆಂಬ ಶಂಕೆಯೇ ಬಲವಾಯಿತು. ಶುದ್ಧೋದನ ರಾಜನು ಖಿನ್ನಮನಸ್ಕನಾಗಿ, ಕುಮಾರನು ಸುರಕ್ಷಿತವಾಗಿ ಹಿಂತಿರುಗಲೆಂದು ಪ್ರಾರ್ಥಿಸುತ್ತ ಉಪವಾಸ ವ್ರತವನ್ನು ಕೈಕೊಂಡನು; ಜಪವನ್ನೂ, ಹೋಮಗಳನ್ನೂ ಮಾಡಿಸುತ್ತ ದೀಕ್ಷಾಬದ್ಧನಾಗಿ ಶಾಕ್ಯವರ್ಧನ ದೇವಾಲಯವನ್ನು ಸೇರಿದನು.

ಛಂದಕನು ಕಣ್ಣೀರು ಸುರಿಸುತ್ತ ಕುದುರೆಗಳೊಡನೆ ಅರಮನೆಯನ್ನು ಸೇರಿದನು. ಶೋಕಸಂತಪ್ತರಾಗಿದ್ದ ಅಂತಃಪುರದ ಸ್ತ್ರೀಯರೆಲ್ಲರೂ ಛಂದಕನು ಬಂದನೆಂದು ಕೇಳಿ ಸಿದ್ಧಾರ್ಥನೂ ಬಂದಿರಬಹುದೆಂದೇ ಭಾವಿಸಿ ಸಂಭ್ರಮದಿಂದ ಓಡಿಬಂದರು. ಕರುವನ್ನು ಕಳೆದುಕೊಂಡ ಹಸುವಿನಂತೆ ಸಂಕಟಪಡುತ್ತಿದ್ದ ಮಹಾರಾಣಿ ಮಹಾಪ್ರಜಾಪತೀದೇವಿಯು ಮಗನನ್ನು ಕಾಣದೆ ಕಂಬನಿದುಂಬಿದಳು. ಯಶೋಧರಾ ದೇವಿಯೇ ಮುಂತಾದವರಂತೂ ಮಿತಿಮೀರಿದ ವಿಷಾದದಿಂದ ಕೂಡಿ, ಅಳುವುದಕ್ಕೂ ತೋರದೆ ಚಿತ್ರದ ಬೊಂಬೆಗಳಂತೆ ಸ್ತಂಭೀಭೂತರಾಗಿ ಕೆಲವು ಕ್ಷಣಗಳಕಾಲ ಸುಮ್ಮನೆ ನಿಂತಿದ್ದರು. ಛಂದಕನು ಕಣ್ಣೀರನ್ನು ಸುರಿಸುತ್ತ ತಲೆತಗ್ಗಿಸಿ ನಿಂತಿದ್ದನು.

ಮಹಾರಾಣಿ ಮಹಾಪ್ರಜಾಪತೀ ದೇವಿಯು ಕಣ್ಣೀರನ್ನು ಸುರಿಸುತ್ತ ನಡೆದ ಸಂಗತಿಗಳನ್ನೆಲ್ಲ ಛಂದಕನಿಂದ ಕೇಳಿದಳು; ತಾನು

ಮಹಾರಾಣಿಯೆಂಬುದನ್ನೂ ಮರೆತು, "ಅಯ್ಯೋ! ಅಚ್ಚ ಕಪ್ಪಾಗಿ ಅತ್ಯಂತ ಮೃದುವಾಗಿ ಮನೋಹರವಾಗಿದ್ದ ಕುರುಳುಗಳು ಕುಮಾರನವು. ಕನಕಕಾಂತಿಯುಳ್ಳ ಅವನ ಮುದ್ದು ಮುಖಕ್ಕೆ ಅವುಗಳೆಷ್ಟು ಮನೋಹರವಾಗಿದ್ದುವು! ಸುಕುಮಾರನಾದ ನನ್ನ ಮಗುವಿಗೆ ಈ ವಯಸ್ಸಿನಲ್ಲಿ ತಪೋವನದ ಕಷ್ಟಜೀವನವೆ! ನನ್ನಂತಹ ಅಭಾಗಿನಿಯು ಮತ್ತಾವಳೂ ಇಲ್ಲ. ಹೂಗಳಂತೆ ಮೃದುವಾಗಿರುವ ತನ್ನ ಹೆಜ್ಜೆಗಳನ್ನು ನನ್ನ ಮಗುವು ಕಠಿನವಾದ ಕಾಡುನೆಲದ ಮೇಲೆ ಊರುವ ಬಗೆ ಹೇಗೆ? ಅಸಂಖ್ಯಾತ ಮಂದಿಗಳಿಗೆ ಅನ್ನದಾನ ಮಾಡುತ್ತಿದ್ದ ನನ್ನ ಮುದ್ದು ಮಗನು ಭಿಕ್ಷದ ಕೂಳಿಗೆ ಕೈಯೊಡ್ಡಬೇಕಾಯಿತೆ? ಚಿನ್ನದ ಮಂಚದ ಮೇಲೆ ಸುಪ್ಪತ್ತಿಗೆಯಲ್ಲಿ ಮಲಗಿದ್ದೂ ದೂರದ ವೀಣಾನಾದದಿಂದ ಕೂಡ ನಿದ್ರಾಭಂಗ ಹೊಂದುತ್ತಿದ್ದ ಸುಕುಮಾರ ಸಿದ್ಧಾರ್ಥನು ಬರಿಯ ನೆಲದ ಮೇಲೆ ಏಕವಸ್ತ್ರಧಾರಿಯಾಗಿ ಕಾಡು ಮೃಗಗಳ ಕೂಗಿನ ಮಧ್ಯದಲ್ಲಿ ನಿದ್ರೆಮಾಡುವ ಬಗೆ ಹೇಗೆ?" ಎಂದು ಮುಂತಾಗಿ ಪ್ರಲಾಪ ಮಾಡುತ್ತ ಸೊಸೆಯರನ್ನಪ್ಪಿಕೊಂಡು ರೋದಿಸಿದಳು.

ಯಶೋಧರಾ ದೇವಿಯು ತನ್ನ ಸಂಕಟವನ್ನು ತಾಳಲಾರದೆ ಅತ್ತೆಯೊಡನೆ, "ಪ್ರಾಣನಾಥನು ಸಹಧರ್ಮಿಣಿಯಾದ ನಮ್ಮನ್ನು ಪರಿತ್ಯಜಿಸಿ ಹೊರಟುಹೋಗಬಹುದೆ? ಸಹಧರ್ಮಿಣಿಯೂ, ಅನಾಥೆಯೂ ಆದ ನನ್ನನ್ನು ಬಿಟ್ಟುಹೋಗಿ ಒಬ್ಬನೇ ಸಾಧಿಸುವ ಧರ್ಮವಾವುದು? ನನ್ನ ಸೇವೆಯನ್ನು ಪಡೆಯದ ತಪಸ್ಸು ಸಾರ್ಥಕವಾಗುವುದೆ? ಹಿರಿಯರೆಲ್ಲರೂ ಹಿಂದೆ ಪತ್ನಿಯರೊಡನೆ ತಪೋವನಕ್ಕೆ ತೆರಳಿದುದು ಪ್ರಭುವಿಗೆ ತಿಳಿಯದೆ? ಆತನೇ ನನ್ನ ಸ್ವರ್ಗ. ಬೇರೆ ಸ್ವರ್ಗವೇ ಬೇಡ. ಪ್ರಿಯವಲ್ಲಭನ ನಗುಮುಖವನ್ನು ನೋಡುವುದಕ್ಕಿಲ್ಲದ ನಾನೊಬ್ಬಳು ಹತಭಾಗಿನಿ. ತಂದೆಯ ತೊಡೆಯನ್ನೇರುವುದಕ್ಕಿಲ್ಲದ ನನ್ನ ರಾಹುಲನೊಬ್ಬ ಹತಭಾಗ್ಯ. ಹಗೆಗಳೂ ಪ್ರೀತಿಯಿಂದ ಲಾಲಿಸುವಂತಹ ರೋಹಿಲನ ಮುದ್ದು ಮಾತುಗಳನ್ನು

ಕೇಳುವ ಯೋಗವು ನನ್ನ ಪ್ರಾಣೇಶ್ವರನಿಗಿಲ್ಲವಾಯಿತೆ! ನನ್ನ ಹೃದಯವು ಕಲ್ಲಿನಂತೆ ಕಠಿಣವಾದುದು. ಅದು ಒಡೆದು ಹೋಗಬಾರದೆ!" ಎಂದು ಬಗೆಬಗೆಯಾಗಿ ತನ್ನ ದುಃಖವನ್ನು ಹೇಳಿಕೊಂಡು ರೋದಿಸಿದಳು. ಸ್ವಭಾವಧೀರೆಯಾಗಿದ್ದೂ ಆಕೆಯು ದುಃಖದಿಂದ ಧೃತಿಗೆಟ್ಟು ಲಜ್ಜೆಯನ್ನೂ ಪರಿತ್ಯಜಿಸಿ ಆ ರೀತಿ ಪ್ರಲಾಪಿಸಿದಳು. ಶೋಕಾವೇಗವನ್ನು ಸಹಿಸಲಾರದೆ ನೆಲದ ಮೇಲೆ ಹೊರಳುತ್ತ ರೋದಿಸುವ ಯಶೋಧರೆಯನ್ನೂ, ಉಳಿದ ಈರ್ವರು ಸೊಸೆಯರನ್ನೂ ಸಂತೈಸುವುದು ಮಹಾಪ್ರಜಾಪತೀ ದೇವಿಗೆ ಅಸಾಧ್ಯವಾಯಿತು.

ಅಷ್ಟರಲ್ಲಿ ಜಪವನ್ನೂ, ಮಂಗಳ ಹೋಮವನ್ನೂ ಮುಗಿಸಿಕೊಂಡು ಶುದ್ಧೋದನ ಮಹಾರಾಜನು ಅಲ್ಲಿಗೆ ಬಂದನು. ಸ್ತ್ರೀಯರ ಆರ್ತರವದಿಂದ ಅವನಿಗೆ ವಜ್ರಘಾತವಾಯಿತು. ಅವನ ಹೃದಯ ಕುಹರದಲ್ಲಿ ಮಿಡಿಯುತ್ತಿದ್ದ ಅಮಂಗಳದ ಶಂಕೆಯು ಫಲಿಸಿದ್ದುದು ಗೊತ್ತಾಯಿತು. ಕುಮಾರನು ರಾಜಧಾನಿಯಲ್ಲಿ ನಿಲ್ಲುವಂತೆ ಮಾಡಲು ತಾನು ನೆರವೇರಿಸಿದ ಸಮಸ್ತ ಪ್ರಯತ್ನಗಳೂ ವ್ಯರ್ಥವಾದುದನ್ನು ಸ್ಮರಿಸಿ ಭಗ್ನಮನೋರಥನಾಗಿ, ಕಣ್ಣುಗಳಿಂದ ಧಾರಾಕಾರವಾಗಿ ನೀರನ್ನು ಸುರಿಸುತ್ತ, "ದಶರಥ ಮಹಾರಾಜ! ರಾಮಚಂದ್ರನ ವನವಾಸ ದುಃಖವನ್ನು ಸಹಿಸಲಾರದೆ ಅಸುವನ್ನು ತೊರೆದ ನೀನೇ ಧನ್ಯನು! ಆ ಅನರ್ಘ್ಯಭಾಗ್ಯವು ನನಗೆಂದು?" ಎಂದು ಆರ್ತವಾಣಿಯಿಂದ ಚೀರಿಟ್ಟನು. ಮುಖ್ಯ ಸಚಿವನೂ, ಪುರೋಹಿತನೂ ರಾಜನಿಗೆ ಸಮಾಧಾನ ಹೇಳಿ ಸಂತೈಸಿ ದೈವಸಂಕಲ್ಪಕ್ಕೆ ಎದುರಿಲ್ಲವೆಂದರು. ರಾಜನು ಸಮ್ಮತಿಸುವುದಾದರೆ ತಾವೀರ್ವರೂ ಭಾರ್ಗವಾಶ್ರಮಕ್ಕೆ ಹೋಗಿ ಕುಮಾರನು ರಾಜಧಾನಿಗೆ ಬರುವಂತೆ ಸರ್ವ ಪ್ರಯತ್ನಗಳನ್ನೂ ಮಾಡಿ ನೋಡುವುದಾಗಿ ಅವರು ಸಲಹೆ ಹೇಳಿದರು. ಶೋಕಾರ್ತನಾದ ಶುದ್ಧೋದನ ರಾಜನು ಅವರು ಅಗತ್ಯವಾಗಿ ಆ ರೀತಿ ಮಾಡಿ ಉಪಕರಿಸಬೇಕೆಂದು ದೈನ್ಯಭಾವದಿಂದ ತಿಳಿಸಿದನು.

# ಆರನೆಯ ಅಧ್ಯಾಯ

—÷—

## ಶಾಕ್ಯಮುನಿಯ ತತ್ತ್ವಸಾಕ್ಷಾತ್ಕಾರ

**ಭಾರ್ಗವಾಶ್ರಮದ ಅನುಭವ**

ಛಂದಕನನ್ನು ಬೀಳ್ಕೊಂಡ ತರುವಾಯ ಸಿದ್ಧಾರ್ಥನು ಕಾಷಾಯ ವಸ್ತ್ರಧಾರಿಯಾದ ಮುನಿವೇಷದಲ್ಲಿ ಭಾರ್ಗವಾಶ್ರಮದ ಕಡೆಗೆ ಹೋದನು. ಶಾಕ್ಯಮುನಿಯ ಸೌಂದರ್ಯವನ್ನು ನೋಡಿ ಮುಗ್ಧನಾದ ಬಂಡಿಯವನೊಬ್ಬನು ನೊಗವನ್ನು ಎತ್ತಿನಿಂತಿದ್ದೂ ಅದನ್ನು ಎತ್ತುಗಳ ಕೊರಳಿನ ಮೇಲಿಡುವುದನ್ನೇ ಬಹಳ ಹೊತ್ತು ಮರೆತು ಆಶ್ರಮದ ಕಡೆಗೆ ಹೋಗುತ್ತಿದ್ದ ಆತನನ್ನೇ ನೋಡುತ್ತಿದ್ದನಂತೆ. ಸಮಿತ್ತುಗಳಿಗಾಗಿ ಹೊರಟಿದ್ದ ವಟುಗಳು ಆತನನ್ನು ನೋಡಿ ಅವನೋ ಸಿದ್ಧಪುರುಷನೆಂದು ಭಾವಿಸಿ ನಮಸ್ಕರಿಸಿದರಂತೆ. ಆತನು ಆಶ್ರಮ ಪ್ರವೇಶಮಾಡಿದಾಗ ನವಿಲುಗಳು ಆತನ ಸಮೀಪಕ್ಕೆ ಬಂದು ಕೇಕೆಹಾಕುತ್ತ ನರ್ತನ ಮಾಡಿದುವಂತೆ.

ಶಾಕ್ಯಮುನಿಯು ಆಶ್ರಮದಲ್ಲಿ ಯಥಾಯೋಗ್ಯವಾದ ಸತ್ಕಾರವನ್ನು ಪಡೆದ ತರುವಾಯ ತಪಸ್ವಿಯೊಬ್ಬನನ್ನು ಕುರಿತು ತಪೋವಿಧಾನಗಳನ್ನು ತನಗೆ ಬೋಧಿಸಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು. ಆಗಿನ ಕಾಲದಲ್ಲಿ ತಪಸ್ವಿಗಳೆನಿಸಿಕೊಂಡಿದ್ದವರಲ್ಲಿ ಅನೇಕರು ಸನಾತನ ಧರ್ಮಜ್ಯೋತಿಯ ನಿಜಸ್ವರೂಪವನ್ನೇ ಅರಿಯದೆ ಹಠಯೋಗವೇ ಮುಂತಾದ ಬಹಿರಾಡಂಬರದ ಸಾಧನೆಗಳೇ ನಿಜವಾದ ತಪಸ್ಸೆಂಬ ಭ್ರಮೆಯಿಂದ ಕೂಡಿದ್ದರು. ಶಾಕ್ಯಮುನಿಯ ಪ್ರಾರ್ಥನೆಯನ್ನು ಲಾಲಿಸಿ ಆ ತಪಸ್ವಿಯು ತಾನು ತಪಸ್ಸೆಂದು ಭಾವಿಸಿದ್ದ ತಮ್ಮ ಆಶ್ರಮದ ಆಚರಣೆಗಳನ್ನೇ ಶಾಕ್ಯಮುನಿಗೂ ಬೋಧಿಸಿದನು. ಆತನು ಶಾಕ್ಯಮುನಿಗೆ ತಿಳಿಸಿದುದೇನೆಂದರೆ: "ಮನುಷ್ಯರ ವ್ಯವಸಾಯವಿಲ್ಲದೆ ಕಾಡಿನಲ್ಲಿ ಬೆಳೆದ ಫಲಗಳು, ಕಂದಮೂಲಗಳು, ಎಲೆಗಳು,

ನೀರು, ಇವುಗಳನ್ನು ಮಾತ್ರವೇ ತಪಸ್ವಿಯು ಸೇವಿಸಬೇಕು. ಮುನಿವೃತ್ತಿಗಳೂ, ತಪೋವಿಧಾನಗಳೂ ಒಬ್ಬೊಬ್ಬರಲ್ಲಿ ಒಂದೊಂದು ವಿಧವಾಗಿರುತ್ತವೆ. ಅವಕ್ಕೆ ದೊರೆಯುವ ಸ್ವರ್ಗವಾಸವೇ ಮುಂತಾದ ಫಲಗಳೂ ಬಗೆಬಗೆಯಾಗಿರುತ್ತವೆ. ಹಕ್ಕಿಗಳಂತೆ ಕಾಳುಗಳನ್ನಾರಿಸಿಕೊಂಡು ಉಂಛವೃತ್ತಿಯಿಂದ ಜೀವಿಸುವವರು ಕೆಲವರು. ಕೇವಲ ನಿರಾಹಾರ ವೃತ್ತಿಯನ್ನೇ ಕೈಕೊಳ್ಳುವವರು ಕೆಲವರು. ಸಂತತವೂ ಜಟೆಯನ್ನು ಒದ್ದೆಯಾಗಿಟ್ಟುಕೊಂಡು ಮಂತ್ರಪುನಶ್ಚರಣೆ ಮಾಡುವವರು ಕೆಲವರು. ನಿರಂತರವೂ ಮೀನುಗಳಂತೆ ನೀರಿನಲ್ಲಿಯೇ ಇದ್ದುಕೊಂಡು ಆವೆಗಳು ಪರಚುವುದನ್ನೂ ಲಕ್ಷ್ಯಮಾಡದಿರುವವರು ಕೆಲವರು. ಹೀಗೆ ಬಹುಕಾಲ ತಪಸ್ಸನ್ನಾಚರಿಸಿದವರಲ್ಲಿ ಶ್ರೇಷ್ಠರಾದವರು ಸ್ವರ್ಗಕ್ಕೆ ಹೋಗುವರು; ಉಳಿದವರು ಭೂಲೋಕದಲ್ಲಿಯೇ ಹುಟ್ಟುವರು. ಅಂತೂ, ಈಗ ಈರೀತಿ ಕಾಯಕ್ಲೇಶಪಡುವುದೇ ಮುಂದಿನ ಜನ್ಮದ ಸುಖಕ್ಕೆ ಮಾರ್ಗ. ಕಾಯಕ್ಲೇಶವೇ ಧರ್ಮಕ್ಕೆ ಮೂಲ.” ತಪಸ್ವಿಯು ಈರೀತಿ ಉಪದೇಶಿಸಿದಮೇಲೆ ತಾನು ಹೇಳಿದ ರೀತಿಯಲ್ಲಿ ಕಾಯಕ್ಲೇಶಗಳನ್ನು ಕೈಕೊಂಡಿದ್ದವರನ್ನು ನಿದರ್ಶನ ರೂಪದಲ್ಲಿ ಶಾಕ್ಯಮುನಿಗೆ ತೋರಿಸಿದನು.

**ಶಾಕ್ಯಮುನಿಯ ವಿಚಾರ ತರಂಗ**

ಭಾರ್ಗವಾಶ್ರಮದ ವಿಲಕ್ಷಣವಾದ ತಪೋನುಷ್ಠಾನವು ಶಾಕ್ಯಮುನಿಯ ಮನಸ್ಸಿಗೆ ಸರಿಬೀಳಲಿಲ್ಲ. ಕಾಯಕ್ಲೇಶಗಳಿಂದ ಕೂಡಿದುಃಖಾತ್ಮಕವಾಗಿದ್ದ ಆ ಬಗೆಯ ತಪಸ್ಸಿಗೆ ಸ್ವರ್ಗವಾಸವೇ ಶ್ರೇಷ್ಠ ಫಲವೆಂದಮೇಲೆ, ಆ ಅಲ್ಪಕ್ಕಾಗಿ ಅತಿಶಯ ಶ್ರಮವೇ–ಎಂದು ಆತನು ಅಚ್ಚರಿಗೊಂಡನು. ಇಹಲೋಕದ ಸುಖಕ್ಕಿಂತ ಹೆಚ್ಚಿನ ಸುಖವನ್ನು ಪರಲೋಕದಲ್ಲಿ ಕಾಣುವ ಆಶೆಗಾಗಿ ಇಹಲೋಕದಲ್ಲಿಯೇ ಲಭಿಸುವ ಸಂಪತ್ತನ್ನೂ, ಸಂಸಾರ ಸುಖವನ್ನೂ, ಪರಿತ್ಯಜಿಸಿ ಕಾಯಕ್ಲೇಶದಿಂದ ಪಾಡುಪಡುವುದು ಸರ್ವಥಾ ಅಯುಕ್ತವೆಂದೇ ಆತನ ಮನಸ್ಸಿಗೆ ತೋರಿತು. ಕಾಯಕ್ಲೇಶಕ್ಕೆ ತಪಸ್ಸೆಂಬ

ಹೆಸರನ್ನಿಟ್ಟು ಸ್ವರ್ಗಸುಖವು ಅದಕ್ಕೆ ದೊರೆಯುವ ಶ್ರೇಷ್ಠಫಲವೆಂದೂ, ಭೂಲೋಕದಲ್ಲಿ ಜನನವು ಅದಕ್ಕೆ ದೊರೆಯುವ ಸಾಮಾನ್ಯ ಫಲ ವೆಂದೂ ಸಿದ್ಧಾಂತ ಮಾಡುವುದಾದರೆ, ಕಾಯಕ್ಲೇಶರೂಪದ ದುಃಖದ ಬೆಲೆಗೆ ಜನನ ರೂಪದ ದುಃಖವನ್ನು ಪಡೆದಂತಾಗುವುದೆಂದು ಆತನು ಭಾವಿಸಿದನು. ಅಲ್ಲದೆ, ಶರೀರ ಹಿಂಸೆಯೇ ಧರ್ಮವಾಗುವುದಾದರೆ, ಶರೀರ ಸುಖವು ಇಹದಲ್ಲಾಗಲಿ ಪರದಲ್ಲಾಗಲಿ ಎಲ್ಲಿಯೇ ಆದರೂ ಅದು ಅಧರ್ಮವಾಗಬೇಕಾಯಿತೆಂದೂ, ಆದಕಾರಣ, ಶರೀರ ಹಿಂಸೆಯ ಮೂಲಕ ಇಹದಲ್ಲಿ ಮಾಡಿದ ಧರ್ಮಾಚರಣೆಗೆ ಸ್ವರ್ಗಸುಖರೂಪದ ಅಧರ್ಮವನ್ನಾರ್ಜಿಸುವ ಪ್ರಯತ್ನವು ಅಸಂಗತವೆಂದೂ ಶಾಕ್ಯ ಮುನಿಯ ಬುದ್ಧಿಗೆ ತೋರಿತು. ಚಿತ್ತವೃತ್ತಿ ನಿರೋಧದ ಸಾಧನೆ ಯನ್ನು ಕೈಕೊಳ್ಳುವುದೇ ಶ್ರೇಷ್ಠವೆಂದು ಆತನು ಭಾವಿಸಿದನು. ಆ ಬಗೆಯ ಯೋಗಸಾಧನೆಯಲ್ಲಿ ಮಗಧರಾಜ್ಯದಲ್ಲಿದ್ದ ಆರಾಡ ಕಾಲಾಮನೆಂಬ ಯೋಗಿಯು ಪ್ರವೀಣನೆಂದು ಕೆಲವರು ಆಗಂತುಕರು ತಿಳಿಸಿದರು. ಆಗಂತುಕನೊಬ್ಬನು ಚಿತ್ತಶಾಂತಿಗಾಗಿ ಶಾಕ್ಯಮುನಿಯು ತೀರ್ಥೋದಕ ಸ್ನಾನಮಾಡುವುದು ಮೇಲೆಂದನು. ಅದಕ್ಕೆ ಶಾಕ್ಯ ಮುನಿಯು "ತೀರ್ಥದ ಪವಿತ್ರ ಸ್ವಭಾವವಿರುವುದು ನೀರಿನಲ್ಲಲ್ಲ. ಗುಣವಂತರಾದ ಮಹನೀಯರು ಸ್ನಾನಮಾಡಿದ ನೀರಿಗೆ ತೀರ್ಥವೆಂದು ಹೆಸರು ಬಂದಿದೆ. ಪುಣ್ಯಾತ್ಮರು ಸ್ನಾನಮಾಡಿದುದರಿಂದ ಆ ನೀರಿಗೆ ತೀರ್ಥವೆಂಬ ಅಭಿಧಾನ. ಇಲ್ಲವಾದರೆ ನೀರು ನೀರೇ. ಶೀಲವಂತರಾದ ಸಜ್ಜನರ ಸಮೀಪದಲ್ಲಿರುವುದೇ ತೀರ್ಥೋದಕ ಸ್ನಾನವೆಂಬುದು ನನ್ನ ಭಾವನೆ" ಎಂದು ವಿನಯದಿಂದ ಉತ್ತರ ಹೇಳಿದನು.

**ಭಾರ್ಗವಾಶ್ರಮದಿಂದ ಮಗಧ ರಾಜ್ಯಕ್ಕೆ ಪ್ರಯಾಣ**

ಭಾರ್ಗವಾಶ್ರಮದ ಸಾಧುಗಳು ಸ್ವರ್ಗಪ್ರಾಪ್ತಿಯ ಆಶೆಯನ್ನಿಟ್ಟುಕೊಂಡು ನಾನಾವಿಧಗಳಾದ ಕಾಯಕ್ಲೇಶಗಳಿಗೆ ತಪಸ್ಸೆಂಬ ಹೆಸರನ್ನಿಟ್ಟುಕೊಂಡಿದ್ದರಾದರೂ, ಅವರ ಭೂತದಯೆಯೂ, ಅತಿಥಿ ಸತ್ಕಾರವೂ ಅಮೋಘವಾಗಿದ್ದುವು. ಆಶ್ರಮ

ಪ್ರದೇಶದಲ್ಲಿ ಕಾಷಾಯ ವಸ್ತ್ರಧಾರಿಗಳನ್ನು ಕಂಡೊಡನೆಯೇ ಮೃಗ ಪಕ್ಷಿಗಳು ಕೂಡ ನಿಶ್ಶಂಕೆಯಿಂದ ಸಮೀಪವರ್ತಿಗಳಾಗುತ್ತಿದ್ದುವೆಂದ ಮೇಲೆ ಅವರು ತೋರಿಸುತ್ತಿದ್ದ ಪ್ರಾಣಿದಯೆಯು ಎಷ್ಟುಮಟ್ಟಿನ ದೆಂಬುದನ್ನು ಊಹಿಸಿಕೊಳ್ಳಬೇಕಾಗಿದೆ. ಶಾಕ್ಯಮುನಿಯು ಆಶ್ರಮ ದಲ್ಲಿದ್ದಷ್ಟು ದಿನಗಳೂ, ಆತನು ಮಾನ್ಯನಾದ ಅತಿಥಿಯೆಂದು ಭಾವಿಸಿ ಅವರೆಲ್ಲರೂ ಪ್ರೀತಿ ಮಮತೆಗಳಿಂದ ಆತನನ್ನು ಸತ್ಕರಿಸಿದರು. ತಾನು ಆಶ್ರಮವನ್ನು ಬಿಟ್ಟು ಹೋಗುವುದಾಗಿ ಆತನು ಸೂಚಿಸಿದಾಗ ಅವರೆಲ್ಲರೂ ಏಕವಾಕ್ಯತೆಯಿಂದ ಉಪಚಾರ ಹೇಳಿ, ಅವನನ್ನು ತನ್ಮೊಡನೆ ನಿಲ್ಲಿಸಿಕೊಳ್ಳುವ ಪ್ರಯತ್ನ ಮಾಡಿದರು. ಆಗ ಶಾಕ್ಯ ಮುನಿಯು ಸಹಜಸಿದ್ಧವಾದ ವಿನಯದಿಂದ ಅವರೊಡನೆ, "ನಿಮ್ಮ ಸ್ನೇಹ ಕರುಣೆಗಳ ರೂಪದಲ್ಲಿ ನನಗೆ ಗಂಗಾಸ್ನಾನ ಮಾಡಿಸಿರುವಿರಿ. ನನ್ನಲ್ಲಿ ವಿಶೇಷ ಪ್ರೀತ್ಯಾದರಗಳನ್ನು ತೋರಿಸಿ ನನ್ನನ್ನು ಸತ್ಕರಿ ಸಿರುವಿರಿ. ನಾನು ನಿಮ್ಮೆಲ್ಲರನ್ನೂ ಅಗಲಿ ಹೋಗಬೇಕಾಗಿ ಬಂದಿರು ವುದರಿಂದ ನಾನು ಬಂಧುಜನರನ್ನು ಅಗಲಿದಂತೆ ಕಷ್ಟದಿಂದ ಬೀಳ್ಕೊಳ್ಳುತ್ತಿದ್ದೇನೆ" ಎಂದು ಹೇಳಿ ಮಗಧರಾಜ್ಯದ ರಾಜಧಾನಿಯ ಕಡೆಗೆ ಹೊರಟನು.

ಸಚಿವ ಪುರೋಹಿತರ ವಿಫಲ ಪ್ರಯತ್ನ

ಶುದ್ಧೋದನ ರಾಜನ ಪುರೋಹಿತನೂ, ಮುಖ್ಯ ಸಚಿವನೂ ಭಾರ್ಗವಾಶ್ರಮಕ್ಕೆ ತಲುಪುವ ವೇಳೆಗೆ ಶಾಕ್ಯಮುನಿಯು ಅದನ್ನು ಬಿಟ್ಟಿದ್ದನು. ಅವರು ಅಲ್ಲಿಂದ ಹೊರಟು ಅತಿ ಶೀಘ್ರವಾಗಿ ಪ್ರಯಾಣಮಾಡಿ ಶಾಕ್ಯಮುನಿಯ ಬಳಿಗೆ ಸೇರಿದರು. ಶುದ್ಧೋದನ ರಾಜನು ಶೋಕಾರ್ತನಾಗಿ ಸಂಕಟಪಡುತ್ತಿರುವನೆಂದೂ, ಧರ್ಮಪ್ರಿಯನಾದ ತನ್ನ ಪುತ್ರನು ತನ್ನ ಶೋಕ ಪರಿಹಾರವೆಂಬ ಧರ್ಮಕಾರ್ಯವನ್ನು ನೆರವೇರಿಸುವುದಕ್ಕಾಗಿ ಕಪಿಲ ವಸ್ತು ನಗರಕ್ಕೆ ಹಿಂತಿರುಗಬೇಕೆಂದು ಕೋರಿದನೆಂದೂ, ಅವರು ಶಾಕ್ಯಮುನಿಗೆ ಬಿನ್ನೈಸಿದರು. ಪುರೋಹಿತನು ಆದರದಿಂದ ಆತನಿಗೆ

ಶುದ್ಧೋದನನ ಸಂದೇಶವನ್ನು ಅರಿಕೆಮಾಡಿದನು. "ಕುಮಾರ, ನ್ಯಾಯವೆನಿಸುವಷ್ಟು ಕಾಲ ರಾಜ್ಯಭೋಗವನ್ನನುಭವಿಸಿ ಆ ಬಳಿಕ ವನಕ್ಕೆ ತೆರಳು. ದುಃಖಾರ್ತನಾದ ನನಗಾಗಿ ಹಿಂದಕ್ಕೆ ಬಾ. ಸರ್ವ ಭೂತಗಳಲ್ಲಿಯೂ ದಯೆಯನ್ನು ತೋರುವುದೇ ಧರ್ಮವಲ್ಲವೆ? ಧರ್ಮಾಚರಣೆಗೆ ವನಕ್ಕೆ ಹೋಗಬೇಕಾದ ಆವಶ್ಯಕತೆಯೇ ಇಲ್ಲ" ಎಂಬುದೇ ಶುದ್ಧೋದನ ರಾಜನ ಸಂದೇಶ. ಆ ಸಂದೇಶವನ್ನು ಕೇಳಿಯೂ ಶಾಕ್ಯಮುನಿಯು ಶಿಲಾಪ್ರತಿಮೆಯಂತೆ ನಿಂತಿದ್ದುದನ್ನು ನೋಡಿ ಕಪಿಲವಸ್ತು ನಗರದಿಂದ ಬಂದಿದ್ದವರು ಭಗ್ನಮನೋರಥರಾದರು. ರಾಜಕುಮಾರನನ್ನು ಹಿಂದಕ್ಕೆ ಕರೆದೊಯ್ಯುವ ಪ್ರಯತ್ನದಲ್ಲಿ ಅವರಿಗಿದ್ದ ಉತ್ಸಾಹವು ಉಡುಗಿಹೋಯಿತು.

**ಶಾಕ್ಯಮುನಿಯ ಬಿನ್ನಹ**

ಪ್ರಯಾಣಕಾಲದಲ್ಲಿ ಒಟ್ಟಿಗೆ ಸೇರಿದ ಜನರು ಒಬ್ಬರನ್ನೊಬ್ಬರು ಅಗಲಿ ಬೇರೆಬೇರೆ ಹೊರಟುಹೋಗುವಂತೆಯೇ ಜೀವನದಲ್ಲಿ ಮರಣದಿಂದ ಜನಗಳ ಅಗಲಿಕೆಯುಂಟಾಗುವುದು ಸ್ವಾಭಾವಿಕವೇ ಸರಿ. ಶಾಕ್ಯಮುನಿಯು ಈ ಅಂಶವನ್ನು ಸೂಚಿಸಿ, ವಾಸ್ತವಸ್ಥಿತಿಯು ಹೀಗಿರುವುದರಿಂದ ಬಂಧುಪ್ರಿಯನಾದವನು ಕೂಡ ಬಂಧುಗಳನ್ನಗಲಿದುದಕ್ಕಾಗಿ ಶೋಕಿಸಕೂಡದೆಂದು ಬಿನ್ನೈಸಿದನು; ಮನುಷ್ಯನು ಹುಟ್ಟಿದಾಗಿನಿಂದಲೂ ಮೃತ್ಯುವು ಸಿದ್ಧವಾಗಿರುವಲ್ಲಿ ಧರ್ಮಾರ್ಜನೆಗೆ ಅಕಾಲವೆಂಬುದೇ ಇಲ್ಲವೆಂದು ಸೂಚಿಸಿದನು. ಶಾಕ್ಯಮುನಿಯು ರಾಜಧಾನಿಗೆ ಚಿತ್ತೈಸಿ ರಾಜ್ಯವನ್ನು ವಹಿಸಿಕೊಳ್ಳಬೇಕೆಂಬುದು ಶುದ್ಧೋದನನ ಅಭಿಲಾಷೆಯೆಂದೂ, ಪ್ರಾರ್ಥನೆಯೆಂದೂ ಪುರೋಹಿತನೂ ಸಚಿವನೂ ಮತ್ತೆಮತ್ತೆ ಆತನಿಗೆ ಬಿನ್ನೈಸಿದರು. ಆಗ ಶಾಕ್ಯಮುನಿಯು ಮೃದುಮಧುರ ವಚನಗಳಿಂದ, "ನಾನು ರಾಜ್ಯವನ್ನು ಒಪ್ಪಿಸಿಕೊಳ್ಳಬೇಕೆಂದು ಪೂಜ್ಯನಾದ ನಮ್ಮ ತಂದೆಯು ಕೋರಿರುವುದು ಉದಾರಚರಿತನಾದ ಆತನ ಸ್ವಭಾವಕ್ಕೂ ಪುತ್ರಸ್ನೇಹಕ್ಕೂ ಅನುರೂಪವಾಗಿಯೇ ಇದೆ. ಆದರೆ ನಾನು ಸಂಸಾರ

ದಿಂದ ಬಿಡುಗಡೆ ಹೊಂದಬೇಕೆಂಬ ಅಭಿಲಾಷೆಯುಳ್ಳವನಾಗಿದ್ದೇನೆ. ರೋಗಿಯು ಅಪಥ್ಯಸೇವನೆ ಮಾಡುವುದು ಎಷ್ಟು ಅನುಚಿತವೋ ನಾನು ರಾಜ್ಯವನ್ನು ವಹಿಸಿಕೊಳ್ಳುವುದೂ ಅಷ್ಟೇ ಅನುಚಿತ. ರಾಜ ಪದವಿಯು ಮೋಹಾಯತನವೆಂದು ನನ್ನ ಮನಸ್ಸಿಗೆ ತೋರುತ್ತಿದೆ. ಪರಿಜನರು ತಾವೂ ನನ್ನಂತೆ ಮನುಷ್ಯರೆಂಬುದನ್ನು ಮರೆತು ಧನ ಲೋಭದಿಂದ ನನಗೆ ಸೇವೆ ಮಾಡುತ್ತಿದ್ದರು. ಆ ಬಗೆಯ ಪರೋಪ ಚಾರವನ್ನು ಪಡೆಯುತ್ತಿದ್ದುದರಿಂದ ನಾನು ಧರ್ಮಪೀಡೆಯನ್ನೆಸಗಿ ದಂತೆ ಭಾವನೆಯುಂಟಾಯಿತು. ಚಿನ್ನದ ತಗಡಿನಿಂದ ಆವೃತವಾಗಿ ಥಳಥಳಿಸುತ್ತಿರುವ ನಮ್ಮ ಅರಮನೆಯು ಅಗ್ನಿಜ್ವಾಲೆಯಿಂದ ಆವೃತ ವೆನಿಸಿ ಧಗಧಗನೆ ಉರಿಯುತ್ತಿದ್ದಂತೆ ನನ್ನ ಮನಸ್ಸಿಗೆ ತೋರಿತು. ಆದುದರಿಂದ ಬಂಧುಪ್ರೇಮವನ್ನು ಹೃದಯದಿಂದ ಕಳಚಿಟ್ಟು ಆನಂದ ಮಯವಾದ ಅರಣ್ಯವಾಸಕ್ಕೆ ಬಂದಿದ್ದೇನೆ" ಎಂದು ಹೇಳಿದನು.

ವಿದ್ವಾಂಸನಾದ ರಾಜಪುರೋಹಿತನು ಆ ಮಾತುಗಳನ್ನು ಕೇಳಿ ವಿಸ್ಮಯಹೊಂದಿದನು. ಆದರೂ ಪ್ರಾಸಂಗಿಕವಾಗಿ, "ಪುನರ್ಜನ್ಮ ವುಂಟೆಂದು ಕೆಲವು ಮಂದಿ ಪ್ರಾಜ್ಞರೂ, ಪುನರ್ಜನ್ಮವಿಲ್ಲವೆಂದು ಕೆಲವು ಮಂದಿ ಪಂಡಿತರೂ ಹೇಳುತ್ತಿದ್ದಾರೆ. ಆದಕಾರಣ, ಈ ವಿಚಾ ರವು ಸಂಶಯದಿಂದ ತುಂಬಿದೆ. ಹೀಗಿರುವಲ್ಲಿ ಅನಾಯಾಸವಾಗಿ ಕೈಗೆ ಸಿಕ್ಕುವಂತಿರುವ ರಾಜಭೋಗವನ್ನನುಭವಿಸುವುದೇ ವಿವೇಕ ವಲ್ಲವೆ?" ಎಂದನು. ಜಿಜ್ಞಾಸು ಶ್ರೇಷ್ಠನಾದ ಶಾಕ್ಯಮುನಿಯು ಆ ಮಾತುಗಳಿಗೆ ಪ್ರತ್ಯುತ್ತರವಾಗಿ, "ಪುನರ್ಜನ್ಮವುಂಟೇ ಅಥವಾ ಇಲ್ಲವೇ ಎಂಬ ಈ ಬಗೆಯ ಸಂದೇಹವು ಪರರ ಮಾತುಗಳಿಂದ ಬಗೆ ಹರಿದು ನನಗೆ ನಿಶ್ಚಿತವಾಗುವಂತಿಲ್ಲ. ತಪಸ್ಸಿನಿಂದ ತತ್ತ್ವಸಾಕ್ಷಾ ತ್ಕಾರವನ್ನು ಪಡೆದು ಈ ವಿಚಾರದಲ್ಲಿ ನಿಶ್ಚಿತಾಂಶವನ್ನು ಸ್ವಾನುಭವ ದಿಂದಲೇ ತಿಳಿದುಕೊಳ್ಳುವೆನು" ಎಂದು ಹೇಳಿದನು. ಪುರೋಹಿತ ನೊಡನೆ ಬಂದಿದ್ದ ಮುಖ್ಯ ಸಚಿವನು ಆ ಬಳಿಕ, "ರಾಜಭೋಗ

ದಲ್ಲಿದ್ದೇ ಮೋಕ್ಷವನ್ನು ಸಾಧಿಸಬಹುದೆಂದು ಬಹುಮಂದಿ ಪ್ರಾಜ್ಞರು ಹಿಂದೆ ಹೇಳಿದ್ದಾರೆ. ಅಥವಾ ಮುನಿವೃತ್ತಿಯನ್ನು ಕೈಕೊಂಡ ಬಳಿಕ ಮತ್ತೆ ರಾಜಧಾನಿಗೆ ಬಂದು ರಾಜ್ಯಸ್ವೀಕಾರ ಮಾಡುವುದರ ಔಚಿತ್ಯ ವಿಷಯದಲ್ಲಿ ಸಂಶಯವೇನಾದರೂ ತಮ್ಮನ್ನು ಬಾಧಿಸುತ್ತಿದ್ದರೆ ಆ ಬಗೆಯ ಸಂಶಯವನ್ನಿಟ್ಟುಕೊಳ್ಳಬೇಕಾದುದೇ ಇಲ್ಲ. ಹಿಂದೆ ಅಂಬರೀಷರಾಜನು ತಪೋವನಕ್ಕೆ ತೆರಳಿದ್ದೂ ರಾಜ್ಯಕ್ಕೆ ಹಿಂತಿರುಗಿದನು. ರಂತಿದೇವನು ತಪಸ್ಸಿನಿಂದ ಬ್ರಹ್ಮರ್ಷಿಪದವಿಯನ್ನು ಪಡೆದಮೇಲೆ ರಾಜಧಾನಿಗೆ ಹಿಂತಿರುಗಿ ಮತ್ತೆ ಪ್ರಭುತ್ವ ಮಾಡಿದನು" ಎಂದು ಅರಿಕೆ ಮಾಡಿದನು. ಅದಕ್ಕೆ ಪ್ರತ್ಯುತ್ತರವಾಗಿ ಶಾಕ್ಯಮುನಿಯು ಧರ್ಮನಿಶ್ಚಯದಲ್ಲಿ ತನಗೆ ತನ್ನ ಸ್ವಂತ ಪ್ರವೃತ್ತಿಯೇ ಪ್ರಮಾಣವೇ ಹೊರತು, ಮತ್ತಾರ ನಿದರ್ಶನವೂ ಪ್ರಮಾಣವಲ್ಲವೆಂದು ಸೂಚಿಸಿ, ಆ ಬಳಿಕ "ಅವ್ಯಕ್ತವಿಚಾರಗಳ ಪರಂಪರೆಯಿಂದ ತುಂಬಿ ನೂರಾರು ಸಂಶಯಗಳಿಂದ ನಿಬಿಡವಾಗಿರುವ ಪರರ ಹೇಳಿಕೆಯ ಸಿದ್ಧಾಂತವಾವುದನ್ನು ತಥ್ಯವೆಂದು ಸ್ವೀಕರಿಸಲು ನನಗೆ ಶಕ್ಯವಿಲ್ಲ. ಕಗ್ಗತ್ತಲೆಯಲ್ಲಿ ಕುರುಡನನ್ನು ದಾರಿತೋರಿಸುವ ಕೆಲಸಕ್ಕೆ ನೇಮಿಸಿಕೊಂಡು ಹೊರಡುವ ಕುರುಡನಂತೆ ಪರಪ್ರತ್ಯಯ ಬುದ್ಧಿಯಿಂದ ಪ್ರಬುದ್ಧನಾವನು ತಾನೆ ಪ್ರವರ್ತಿಸಿಯಾನು?" † ಎಂದು ಹೇಳಿದನು. ಪುರೋಹಿತನೂ

---

† ಶಾಕ್ಯಮುನಿಯ ಈ ಹೇಳಿಕೆಯನ್ನು ಕೇಳಿದೊಡನೆಯೆ ಮುಂಡಕೋಪನಿಷತ್ತಿನ ಕೆಲವು ವಾಕ್ಯಗಳು ತಟಕ್ಕನೆ ನೆನಪಿಗೆ ಬರುತ್ತವೆ. ಅವು ಯಾವುವೆಂದರೆ :—

"ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಣ್ಡಿತಂ ಮಾನ್ಯಮಾನಾಃ ಜಙ್ಘನ್ಯಮಾನಾಃ ಪರಿಯನ್ತಿ ಮೂಢಾ ಅನ್ಧೇನೈವ ನೀಯಮಾನಾ ಯಥಾನ್ಧಾಃ ॥"

(ಅವಿದ್ಯೆಯ ಮಧ್ಯದಲ್ಲಿದ್ದೂ ತಾವೇ ಧೀರರೆಂದೂ, ಜಾಣರೆಂದೂ ಹಿಗ್ಗುತ್ತ ಕುರುಡನು ಕರೆದೊಯ್ಯುವ ಕುರುಡರಂತೆ ಸಂಕಟಪಡುವರು.)

ಮುಖ್ಯಸಚಿವನೂ ಮತ್ತೆಮತ್ತೆ ಸಮಾಧಾನ ಹೇಳಲುಪಕ್ರಮಿಸಿದರು. ಇನ್ನು ಕಾಲಹರಣಮಾಡಿ ಫಲವಿಲ್ಲವೆಂದು ಬಗೆದು, ಶಾಕ್ಯಮುನಿಯು ಅವರೊಡನೆ "ನಾನು ಅಗ್ನಿಪ್ರವೇಶವನ್ನಾದರೂ ಮಾಡುವೆನೇ ಹೊರತು ಪರಮಾರ್ಥ ಸಾಧನೆಯಲ್ಲಿ ಸಿದ್ಧಿಹೊಂದದೆ ಊರಿಗೆ ಹಿಂತಿರುಗಲಾರೆ. ನಿಮ್ಮೆಲ್ಲರಿಗೂ ಶುಭವಾಗಲಿ; ಹೋಗಿಬನ್ನಿ" ಎಂದು ನಿರ್ಧಾರವಾಗಿ ನುಡಿದು ಮುಂದಕ್ಕೆ ಹೊರಟನು. ಮುಖ್ಯಸಚಿವನೂ, ಪುರೋಹಿತನೂ ಆತನ ವಿರಕ್ತಿಯನ್ನೂ, ಆತನ ಸ್ಥಿರನಿಶ್ಚಯವನ್ನೂ ಕಂಡು ವಿಸ್ಮಿತರಾಗಿ, ತಮ್ಮ ಪ್ರಯತ್ನವು ವಿಫಲವಾಗಿರುವಲ್ಲಿ ರಾಜನಿಗೆ ಮುಖವನ್ನು ತೋರಿಸುವ ಬಗೆ ಹೇಗೆಂದು ಚಿಂತಿಸುತ್ತ ರಾಜಧಾನಿಯ ಕಡೆಗೆ ತಿರುಗಿದರು. ಶಾಕ್ಯಮುನಿಯು ಮಗಧರಾಜ್ಯಾಭಿಮುಖವಾಗಿ ತೆರಳಿದನು. ದಾರಿಯಲ್ಲಿ ಎಲ್ಲ ಆಶ್ರಮಗಳಲ್ಲಿಯೂ ಆತನಿಗೆ ಸತ್ಕಾರವು ನಡೆಯಿತು.

**ರಾಜಗೃಹಕ್ಕೆ ಶಾಕ್ಯಮುನಿಯ ಆಗಮನ**

ಶಾಕ್ಯಮುನಿಯು ಗಂಗಾನದಿಯನ್ನು ದಾಟಿ ಸಾಧ್ಯವಾದಷ್ಟು ಶೀಘ್ರವಾಗಿ ಪ್ರಯಾಣಮಾಡುತ್ತ, ಮಗಧರಾಜ್ಯದ ರಾಜಧಾನಿಯಾದ ರಾಜಗೃಹಕ್ಕೆ ಹೋದನು. ಅಲ್ಲಿ ಶಾಕ್ಯಮುನಿಯು ಭಿಕ್ಷಾಟನ ಮಾಡಿದನು. ಭಿಕ್ಷನೆತ್ತಿದ ಕದನ್ನವನ್ನು ತಿಂದಾಗ ಸುಕುಮಾರನಾದ ಆತನ ಹೊಟ್ಟೆಯು ತೊಳಸಿದಂತಾಗಿ ಬಹು ಕಷ್ಟವಾಯಿತು. ಕರುಳೇ ಈಚೆಗೆ ಬರುವಂತೆ ತೋರಿತು. ಆದರೂ ಆತನು ಕಾಲಕ್ರಮದಲ್ಲಿ ಭಿಕ್ಷಾಟನದ ಕದನ್ನವೇ ರುಚಿಸುವಂತೆ ಒಗ್ಗಿಸಿಕೊಂಡನು.

ಈ ಮಧ್ಯದಲ್ಲಿ ಮಗಧರಾಜನಾದ ಬಿಂಬಿಸಾರನು ಶಾಕ್ಯಮುನಿಯು ತೇಜಸ್ವಿಯೆಂದು ಕೇಳಿ, ಪಾಂಡವಶೈಲವಲ್ಲೊಂದು ಗುಹೆಯಲ್ಲಿ ಬೀಡು ಬಿಟ್ಟಿದ್ದ ಆತನ ಬಳಿಗೆ ಹೋದನು. ಶಾಕ್ಯಮುನಿಯು ತನ್ನ ಆಪ್ತಮಿತ್ರ ಶುದ್ಧೋದನನ ಮಗನೆಂಬುವನ್ನು ತಿಳಿದ ಬಳಿಕ

ಬಿಂಬಿಸಾರನು ನಿಟ್ಟುಸಿರುಬಿಟ್ಟು, "ಗಂಧ ಮಾಲ್ಯಾದಿ ಭೂಷಣಗಳಿಗೆ ಯೋಗ್ಯವಾದ ಈ ಸುಕುಮಾರ ದೇಹಕ್ಕೆ ಕಾಷಾಯವಸ್ತ್ರವೆ? ರಾಜಭೋಗವನ್ನು ಬಿಟ್ಟು ಗುಹೆಯಲ್ಲಿ ವಾಸವೆ? ಪ್ರಜಾಪಾಲನ ಯೋಗ್ಯವಾದ ಈ ಹಸ್ತಕ್ಕೆ ಭಿಕ್ಷಾನ್ನವೃತ್ತಿಯೆ?" ಎಂದನು. ಶಾಕ್ಯಮುನಿಯು, "ಮಹಾರಾಜ! ಭಿಕ್ಷುಕನ ವೃತ್ತಿಯನ್ನು ಹಳಿಯಬೇಡ. ಭಿಕ್ಷೋಪಜೀವಿಯನ್ನು ಕಂಡು ಅನುಕಂಪ ಪಡಬೇಕಾದುದಿಲ್ಲ. ಜರಾಮೃತ್ಯು ಭಯವನ್ನು ಕಳೆದುಕೊಂಡ ಭಿಕ್ಷುವು ಇಹದಲ್ಲಿ ಶಾಂತನೂ, ಸುಖಿಯೂ ಹೌದು. ಪರದಲ್ಲಿ ಅವನಿಗೆ ದುಃಖವೂ ಇಲ್ಲ. ಅತ್ಯಂತ ಐಶ್ವರ್ಯವಿದ್ದೂ ಸಹ, ಯಾವನು ದುರಾಶೆಯಿಂದ ತೊಳಲುವನೋ ಅವನೇ ಅನುಕಂಪ ಯೋಗ್ಯನು. ಅವನಿಗೆ ಇಹದಲ್ಲಿ ಶಾಂತಿಯಿಲ್ಲ. ಪರದಲ್ಲಿ ದುಃಖವು ಸಿದ್ಧವಾಗಿದೆ" ಎಂದು ಉತ್ತರ ಹೇಳಿದನು.

**ಬಿಂಬಿಸಾರ ನೊಡನೆ ಸಂಭಾಷಣೆ**

ಬಿಂಬಿಸಾರನು ಆ ಬಳಿಕ, "ಒಂದು ವೇಳೆ ತಂದೆಯ ರಾಜ್ಯವನ್ನು ಸ್ವೀಕರಿಸಿ ಆತನು ರಾಜನಾಗಿರುವುದನ್ನು ತಪ್ಪಿಸಲು ನಿನಗಿಷ್ಟವಿಲ್ಲದಿದ್ದರೆ, ದೊಡ್ಡದಾದ ನನ್ನ ರಾಜ್ಯದಲ್ಲಿ ಅರ್ಧವನ್ನು ವಹಿಸಿಕೊಂಡು ರಾಜ್ಯಭಾರಮಾಡು; ನನ್ನಿಂದ ರಾಜ್ಯವನ್ನು ಪಡೆಯುವುದಕ್ಕೆ ನಿನ್ನ ಕುಲದ ಘನತೆಯು ಅಡ್ಡಿಯನ್ನುಂಟುಮಾಡುವುದಾಗಿದ್ದರೆ, ದಿಗ್ವಿಜಯಕ್ಕಾಗಿ ಹೊರಟು ನನ್ನ ಸಹಾಯದಿಂದ ಹೊಸದೊಂದು ರಾಜ್ಯವನ್ನೇ ಸ್ಥಾಪಿಸಿ ಪ್ರಭುತ್ವಮಾಡು. ಪ್ರಜಾಪಾಲನ ಮಾಡುವುದಕ್ಕಾಗಿ ಉತ್ತಮ ರೀತಿಯಲ್ಲಿ ಯೋಗ್ಯತೆಯನ್ನು ಪಡೆದಿರುವ ಈ ದೇಹವು ತಪಸ್ಸಿನಿಂದ ಕೃಶವಾಗುವುದು ಯುಕ್ತವಲ್ಲ. ವಿಜಯಯಾತ್ರೆ ಹೊರಟು ನಾನಾ ದೇಶಗಳನ್ನೂ ಜಯಿಸೋಣ ನಡೆ" ಎಂದನು.

ಶಾಕ್ಯಮುನಿಯು ಅವನನ್ನು ಕುರಿತು, "ಸಿಂಹಧ್ವಜನೂ ಸತ್ಕುಲಪ್ರಸೂತನೂ, ಸದ್ಗುಣಮಂಡಿತನೂ ಆದ ನಿನಗೆ ಅನುರೂಪ

ವಾದ ಮಾತುಗಳಿವು. ನಾನು ನಿನ್ನ ಸ್ನೇಹಬುದ್ಧಿಗಾಗಿ ಕೃತಜ್ಞನಾಗಿದ್ದೇನೆ. ಮಹಾರಾಜ! ನನ್ನ ಮಾತುಗಳನ್ನೂ ಲಾಲಿಸು. ಮಾನವಜೀವನದ ಸಮಸ್ತದಶೆಗಳೂ ಸುಖದುಃಖಗಳೆರಡರಿಂದಲೂ ತುಂಬಿವೆ. ಆದಕಾರಣ, ನನ್ನ ಮನಸ್ಸಿಗೆ ರಾಜತ್ವವೂ, ದಾಸ್ಯವೂ ಎರಡೂ ಸಮಾನ. ರಾಜನೆನಿಸಿದವನು ಪೂರ್ಣಸುಖಿಯಾಗಿ ಸರ್ವದಾ ನಗುತ್ತಿರುವುದೂ ಸಾಧ್ಯವಿಲ್ಲ. ದಾಸ್ಯಕ್ಕೆ ಗುರಿಯಾದ ಮಾತ್ರಕ್ಕೇ ಅಂತಹವನಾವನೂ ನಿರಂತರವೂ ದುಃಖಿಸುತ್ತಿರಬೇಕಾದುದೂ ಇಲ್ಲ. ಇದಲ್ಲದೆ ಪರಹಿಂಸೆಯಿಂದ ಸಮಗ್ರ ಭೂಮಂಡಲವನ್ನೇ ಜಯಿಸಿ ಚಕ್ರೇಶ್ವರನಾದವನು ಕೂಡ, ಒಂದು ಪಟ್ಟಣದಲ್ಲಿ ಮಾತ್ರವೇ ವಾಸಮಾಡುವುದು ಸಾಧ್ಯ. ಅದರಲ್ಲಿ ಕೂಡ ಒಂದು ಅರಮನೆಯಲ್ಲಿ ಅವನು ವಾಸವಾಗಿದ್ದಾನು. ರಾಜ್ಯವೇ ಕೈಕೆಳಗಿದ್ದರೂ ನಿಜವಾಗಿ ನೋಡಿದರೆ ರಾಜನಿಗೆ ಅವಶ್ಯವಾದವುಗಳಾವುವು? ಉಡುವುದಕ್ಕೆ ವಸ್ತ್ರಗಳು; ಹಸಿವು ಹೋಗುವುದಕ್ಕಾಗಿ ಅನ್ನ; ಮಲಗುವುದಕ್ಕಾಗಿ ಒಂದು ಮಂಚ; ಇವು ಹೊರತು ಉಳಿದವುಗಳೆಲ್ಲ ರಾಜನ ಮದಕ್ಕಾಗಿ ಮಾತ್ರವೇ ತಾನೆ? ಆದರೆ ಮನಸ್ಸಿನ ತೃಪ್ತಿಗಾಗಿ ರಾಜಪದವಿಯೆಂದು ಹೇಳುವುದಾದರೆ, ರಾಜಪದವಿಯಿಲ್ಲದೆಯೇ ನಾನು ತೃಪ್ತನಾಗಿದ್ದೇನೆ. ನಾನು ಶಾಂತಿಯನ್ನು ಹುಡುಕಿಕೊಂಡು ಬಂದಿದ್ದೇನೆ. ನಿರಾಮಯವಾದ ತ್ರಿಲೋಕಾಧಿಪತ್ಯವೂ ನನಗೆ ಬೇಡ. ಇನ್ನು ದುಃಖಮಯವಾದ ಮನುಷ್ಯಲೋಕದ ಪ್ರಭುತ್ವದಲ್ಲಿ ನನಗೆಲ್ಲಿಯ ಆಶೆ? ಮೋಕ್ಷವಾದಿಯಾದ ಆರಾಡ ಕಾಲಾಮನ ದರ್ಶನಕ್ಕಾಗಿ ನಾನು ನಿನ್ನ ರಾಜ್ಯಕ್ಕೆ ಬಂದಿದ್ದೇನೆ. ಆ ಪೂಜ್ಯನ ಆಶ್ರಮಕ್ಕೆ ನಾನು ಈ ದಿನ ಪ್ರಯಾಣ ಮಾಡುತ್ತೇನೆ" ಎಂದು ಹೇಳಿದನು. ಬಿಂಬಿಸಾರನು ಶಾಕ್ಯಮುನಿಯ ವೈರಾಗ್ಯವನ್ನು ಕಂಡು ಪ್ರೀತಿ ಭಕ್ತಿಗಳಿಂದ ಆತನಿಗೆರಗಿ, "ತತ್ತ್ವಸಾಕ್ಷಾತ್ಕಾರವಾದ ಮೇಲೆ ಕೃಪೆಮಾಡಿ ಮತ್ತೆ ನನ್ನ ರಾಜ್ಯಕ್ಕೆ ಬಂದು ನನ್ನ ಅರಮನೆಗೆ ಬಿಜಯಮಾಡಬೇಕು" ಎಂದು ಪ್ರಾರ್ಥಿಸಿ ಅರಮನೆಗೆ ತೆರಳಿದನು.

**ಗುರುಶಿಷ್ಯರು**

ಆರಾಡ ಕಾಲಾಮನ ವೈರಾಗ್ಯವನ್ನೂ, ಸರಳ ಜೀವನವನ್ನೂ, ಧರ್ಮನಿಷ್ಠೆಯನ್ನೂ ಕಂಡ ಶಾಕ್ಯಮುನಿಯು ಅಚ್ಚರಿಯಿಂದ ತಲೆದೂಗಿದಂತೆಯೇ, ತರುಣ ವಯಸ್ಸಿನಲ್ಲಿ ತ್ಯಾಗಬುದ್ಧಿಯ ಚರಮ ಸೀಮೆಯನ್ನು ಮುಟ್ಟಿ ರಾಜಭೋಗವನ್ನೂ ನಿರ್ಮಾಲ್ಯದಂತೆ ಬಿಟ್ಟು ಬಂದಿದ್ದ ಜಿಜ್ಞಾಸುಶ್ರೇಷ್ಠನಾದ ಶಾಕ್ಯಮುನಿಯನ್ನು ಕಂಡು ತಪಸ್ವಿ ಆರಾಡಕಾಲಾಮನೂ ಆಶ್ಚರ್ಯಪಟ್ಟನು. ಶಿಷ್ಯಪ್ರಿಯನಾದ ಸದ್ಗುರುವು ದೊರೆತನೆಂದು ಶಾಕ್ಯಮುನಿಯು ಸಂತೋಷಪಟ್ಟರೆ, ವಿದ್ಯಾದಾನಕ್ಕೆ ಸತ್ಪಾತ್ರನಾದ ಸಚ್ಛಿಷ್ಯನು ಲಭಿಸಿದನೆಂದು ಆರಾಡ ಕಾಲಾಮನೂ ಹಿಗ್ಗಿದನು. ಆತನು ತಾನು ಅನುಸರಿಸಿದ್ದ ಸಿದ್ಧಾಂತವನ್ನೂ, ತಾನು ಅನುಷ್ಠಿಸುತ್ತಿದ್ದ ಯೋಗಸಾಧನೆಗಳನ್ನೂ ಶಾಕ್ಯಮುನಿಗೆ ಸಂತೋಷದಿಂದ ಬೋಧಿಸಿದನು.

**ಆರಾಡ ಕಾಲಾಮನು ಬೋಧಿಸಿದ ಸಿದ್ಧಾಂತ**

ಆರಾಡ ಕಾಲಾಮನು ಬೋಧಿಸಿದ ಸಿದ್ಧಾಂತದ ಕೆಲವು ಮುಖ್ಯಾಂಶಗಳನ್ನೂ ಇಲ್ಲಿ ಸೂಚಿಸಬಹುದಾಗಿದೆ: ಸಂಸಾರ ಪರಿವರ್ತನದಲ್ಲಿ ಪಂಚಭೂತಗಳು, ಅಹಂಕಾರ, ಬುದ್ಧಿ, ವಿಷಯಗಳು, ಇಂದ್ರಿಯಗಳು, ಜನನ ಮರಣಗಳು, ಮುಂತಾದುವು ಪ್ರಾಮುಖ್ಯವಾದುವುಗಳು, ಯಾವುದು ಹುಟ್ಟುತ್ತದೆಯೋ, ಜೀರ್ಣಹೊಂದುತ್ತದೆಯೋ, ಮರಣಹೊಂದುತ್ತದೆಯೋ ಮತ್ತು ಬದ್ಧವೆನಿಸುತ್ತದೆಯೋ ಅದು ವ್ಯಕ್ತವೆನಿಸುವುದು. ಹಾಗಿಲ್ಲದುದು ಅವ್ಯಕ್ತವೆನಿಸುವುದು. ಅಜ್ಞಾನವೂ, ಕರ್ಮವೂ, ತೃಷ್ಣೆಯೂ, ಸಂಸಾರ ಹೇತುಗಳು. ಯಾವನು ಇವುಗಳ ಸುಳಿಯಲ್ಲಿ ಸಿಕ್ಕಿ ತೊಳಲುತ್ತಿರುವನೋ ಅವನು ತತ್ತ್ವಜ್ಞನೆನಿಸಲಾರನು. ನಮಸ್ಕಾರ ವಷಟ್ಕಾರ ಮುಂತಾದುವೂ, ಯಜ್ಞಾದಿಕರ್ಮಗಳೂ, ಮೋಕ್ಷಸಾಧಕಗಳಲ್ಲ. ಮನಸ್ಸು, ವಾಕ್ಕು, ಕರ್ಮ, ಬುದ್ಧಿ ಇವುಗಳಿಂದ ವಿಷಯಗಳಲ್ಲಿ ಆಸಕ್ತಿಯುಂಟಾಗಿರುವುದಕ್ಕೆ ಅಭಿಷ್ವಂಗವೆಂದು

ಹೆಸರು. "ಇದು ನನ್ನದು. ನಾನು ಇದಕ್ಕೆ ಸಂಬಂಧಪಟ್ಟವನು" ಎಂದು ಮುಂತಾಗಿ ದುರಭಿಮಾನವನ್ನಿಟ್ಟುಕೊಳ್ಳುವುದೇ ಪುನರ್ಜನ್ಮಗಳ ಮಹಾದ್ವಾರ. ತೃಷ್ಣೆಯೇ ಎಲ್ಲ ಬಗೆಯ ಅನರ್ಥಗಳಿಗೂ ಮೂಲ. ತೃಷ್ಣೆಯೇ ಮೋಹಕ್ಕೆ ಕಾರಣ. ಅದರ ಪರಿಣಾಮವಾಗಿ ಅಜ್ಞಾನಾಂಧಕಾರವು ಮನುಷ್ಯರನ್ನಾವರಿಸಿ ದುಃಖಭೂಯಿಷ್ಠವಾದ ಸಂಸಾರಕ್ಕೆ ಕೆಡಹಿ ಬಗೆಬಗೆಯ ಜನ್ಮಗಳಿಗೆ ಕಾರಣವಾಗುವುದು. ಜನನಮರಣಗಳೆಂಬ ತೆರೆಗಳಿಂದ ಕೂಡಿದ ಸಂಸಾರ ಸಂಬಂಧವಾದ ತಮಸ್ಸಿನ ಪ್ರವಾಹವು, ಈ ಬಗೆಯ ಹೇತುಗಳ ದೆಸೆಯಿಂದ ಉದ್ಭವಿಸಿ ಹರಿಯುತ್ತದೆ. ಆದಕಾರಣ, ತೃಷ್ಣೆಯೇ ಮುಂತಾದ ಹೇತುಗಳೇ ಇಲ್ಲದೆ ಹೋಗುವಂತೆ ಮಾಡಿಕೊಳ್ಳಬೇಕು. ಹೇತುಗಳು ಅಳಿದೊಡನೆಯೇ ಅವುಗಳ ಫಲರೂಪವಾದ ಜನನ ಮರಣಗಳೂ ತಪ್ಪಿಹೋಗುವುವು. ಪ್ರತಿಬುದ್ಧನಾರು, ಅಪ್ರತಿಬುದ್ಧನಾರು ಎಂಬುದನ್ನೂ, ವ್ಯಕ್ತಾವ್ಯಕ್ತಗಳ ವಿಚಾರವನ್ನೂ ಚೆನ್ನಾಗಿ ಮನದಟ್ಟು ಮಾಡಿಕೊಳ್ಳುವುದೇ ವಿವೇಕಿಯ ಕರ್ತವ್ಯವು. ಈ ನಾಲ್ಕರ ನಿಜಸ್ವಭಾವವನ್ನರಿಯುವುದೇ ಸಂಸಾರ ನಿವೃತ್ತಿಗೂ ಮೋಕ್ಷಕ್ಕೂ ಸಾಧಕವು."

ಆರಾಡ ಕಾಲಾಮನ ಬೋಧನೆಯಿಂದ ಅನೇಕ ವಿಚಾರಗಳಲ್ಲಿ ಶಾಕ್ಯಮುನಿಯ ಮನಸ್ಸಿನ ಮೇಲೆ ಸತ್ಪರಿಣಾಮವುಂಟಾಯಿತಾದರೂ, ಆತನ ಮನಸ್ಸಿಗೆ ಅದರಿಂದ ಪೂರ್ತಿಯಾಗಿ ಸಮಾಧಾನವಾಗಲಿಲ್ಲ. ಆತನಿಗೆ ತೋರಿದ ಅನೇಕ ಸಂಶಯಗಳಿಗೆ ಗುರುವಿನಿಂದ ಸದುತ್ತರಗಳು ದೊರೆಯಲಿಲ್ಲ. ಆರಾಡ ಕಾಲಾಮನು ತನಗೆ ತಿಳಿದಿದ್ದುದನ್ನು ನಿರ್ವಂಚನೆಯಿಂದ ಬೋಧಿಸಿದುದಕ್ಕಾಗಿ ಶಾಕ್ಯಮುನಿಯು ತನ್ನ ಕೃತಜ್ಞತೆಯನ್ನು ಸೂಚಿಸಿ ತನ್ನ ಸಂಶಯ ನಿವೃತ್ತಿಗಾಗಿ ರುದ್ರಕನೆಂಬ ಬ್ರಾಹ್ಮಣನಲ್ಲಿಗೆ ಹೊರಟುಹೋದನು. ಆದಾಗ್ಗೂ, ಈ ಸಂಬಂಧದಲ್ಲಿ ನಾವು ಮುಖ್ಯಾಂಶವೊಂದನ್ನು ಗಮನಿಸಬೇಕಾದುದು ಅತ್ಯಾವಶ್ಯಕ. ಶಾಕ್ಯಮುನಿಯು

**ಆರಾಡ ಕಾಲಾಮನ ಆಶ್ರಮದಿಂದ ಪ್ರಯಾಣ**

ಬುದ್ಧನಾದ ಮೇಲೆ ಬೋಧಿಸಿದ ತತ್ತ್ವಗಳಲ್ಲಿ ತೃಷ್ಣೆಯು ಸಂಸಾರ ಹೇತುವೆಂಬುದೇ ಮುಂತಾದ ಕೆಲವು ಮುಖ್ಯತತ್ತ್ವಗಳು ಆರಾಡ ಕಾಲಾಮನು ಒತ್ತಿ ಹೇಳಿ ತಿಳಿಸಿದವುಗಳೇ ಆಗಿದ್ದುವು.

**ರುದ್ರಕನಲ್ಲಿ ಶಿಷ್ಯವೃತ್ತಿ**

ಆರಾಡ ಕಾಲಾಮನಂತೆಯೇ ರುದ್ರಕನೂ ಆಗಿನ ಕಾಲದಲ್ಲಿ ಸುಪ್ರಸಿದ್ಧನಾದ ಸಾಧಕನಾಗಿದ್ದನು. ಏಳುನೂರು ಮಂದಿ ಶಿಷ್ಯರು* ಆತನ ಆಶ್ರಮದಲ್ಲಿ ವ್ಯಾಸಂಗ ಮಾಡುತ್ತಿದ್ದರು. ಶಿಷ್ಯನಾಗಿ ತನ್ನ ಬಳಿಗೆ ಬಂದ ಶಾಕ್ಯಮುನಿಯಲ್ಲಿ ರುದ್ರಕನೂ, ಆರಾಡ ಕಾಲಾಮನಂತೆಯೇ ವಾತ್ಸಲ್ಯವನ್ನು ತೋರಿಸಿ ತನಗೆ ತಿಳಿದಿದ್ದುದನ್ನು ಬೋಧಿಸಿದನು. ಅವರೀರ್ವರೂ ತನ್ನಲ್ಲಿ ಬಹಳ ಪ್ರೀತಿಯನ್ನು ತೋರಿಸಿ ತಾನು ಅವರಿಗೆ ಸಮಾನಸ್ಕಂಧನಾಗಿದ್ದಂತೆ ಕಂಡುದನ್ನು ಕೃತಜ್ಞತೆಯಿಂದ ಶಾಕ್ಯಮುನಿಯೇ ಸೂಚಿಸಿದಂತೆ ಮಜ್ಝಿಮನಿಕಾಯದಲ್ಲಿ ಹೇಳಿದೆ. ಗುರುವಿಗೆ ಶಿಷ್ಯನಲ್ಲಿ ಪುತ್ರನಿರ್ವಿಶೇಷವಾದ ಪ್ರೀತಿಯಿರಬೇಕಾದುದೇ ಧರ್ಮವೆಂಬುದು ಆದಿಯಿಂದಲೂ ಭರತಖಂಡದಲ್ಲಿ ಅಂಗೀಕೃತವಾಗಿದ್ದ ತತ್ತ್ವ. ರಾಮಯೋಗಿಯ ಶಿಷ್ಯನಾದ ರುದ್ರಕನಿಗೆ ರಾಮಪುತ್ರ ರುದ್ರಕನೆಂದೇ ಹೆಸರಿದ್ದಿತು. ರಾಮಪುತ್ರ ರುದ್ರಕನು ತನ್ನ ಗುರುವು ತನ್ನಲ್ಲಿ ತೋರಿಸಿದ್ದ ಪುತ್ರಸ್ನೇಹವನ್ನೇ ತನ್ನ ಶಿಷ್ಯನಾದ ಶಾಕ್ಯಮುನಿಯಲ್ಲಿ ತಾನೂ ತೋರಿಸಿದನು. ರುದ್ರಕನ ಉಪದೇಶವನ್ನು ಗ್ರಹಿಸಿ ಶಾಕ್ಯಮುನಿಯು ಅದನ್ನೆಲ್ಲ ಅನುಷ್ಠಾನದಲ್ಲಿ ಆಚರಿಸಿ ತೋರಿಸಿದನು. ರುದ್ರಕನು ಅದರಿಂದ ಸುಪ್ರೀತನಾಗಿ, ಶಿಷ್ಯನೊಡನೆ "ಇಂದಿನಿಂದ ನಾವೀರ್ವರೂ ಸಮಾನರು!" ಎಂದು ಗರ್ವದೂರವಾದ ಸರಳತೆಯಿಂದ ತಿಳಿಸಿ ಆನಂದದಿಂದ ನಲಿದಾಡಿದನು. ರುದ್ರಕನಾಗಲಿ, ಆರಾಡ ಕಾಲಾಮನಾಗಲಿ, ಯಾಜ್ಞವಲ್ಕ್ಯ,

---

* "ಮಹತಾ ಶಿಷ್ಯ ಗಣೇನ ಸಾರ್ಧಂ ಸಪ್ತಭಿಃ ಶಿಷ್ಯ ಶತೈಃ"— ಲಲಿತ ವಿಸ್ತರ.

ಜನಕ ಮುಂತಾದವರಂತೆ ಜ್ಞಾನ ಯೋಗದಲ್ಲಿ ನಿಷ್ಣಾತರಾದ ಸಿದ್ಧ ಪುರುಷರಾಗಿರಲಿಲ್ಲ. ಆದಕಾರಣ, ಅವರೀರ್ವರ ಉಪದೇಶಗಳಿಂದಲೂ ಶಾಕ್ಯಮುನಿಗೆ ಸಂದೇಹ ನಿವೃತ್ತಿಯುಂಟಾಗಲಿಲ್ಲ.* ಶಾಕ್ಯಮುನಿಯು ಆತನೊಡನೆ, "ಈ ಮಾರ್ಗವು ಸುಖಕ್ಕಲ್ಲ; ವಿರಕ್ತಿ ಸಾಧಕವಲ್ಲ; ದುಃಖನಿರೋಧಕವಲ್ಲ; ಶಾಂತಿಸಾಧಕವಲ್ಲ; ಅಭಿಜ್ಞತೆಗಲ್ಲ; ಜ್ಞಾನಸಾಧಕವಲ್ಲ; ಶ್ರಮಣಯೋಗ್ಯವಲ್ಲ; ಬ್ರಾಹ್ಮಣಯೋಗ್ಯವಲ್ಲ; ನಿರ್ವಾಣಸಾಧಕವಲ್ಲ" ಎಂದನಂತೆ.† ಆದಾಗ್ಯೂ ಸಾಧನೆಯ ಸ್ಥೂಲವಿಧಾನಗಳೂ, ಯೋಗಮಾರ್ಗಗಳೂ, ಸಂಯಮ ವೃತ್ತಿಯೂ ಆರಾಡ ಕಾಲಾಮನ ಮತ್ತು ರಾಮಪುತ್ರ ರುದ್ರಕನ ಸಹಾಯದಿಂದ ಆತನಿಗೆ ಸ್ವಾಧೀನವಾದುವು.‡ ಅವರಲ್ಲಿ ಆತನು ಪಡೆದ ಶಿಕ್ಷಣದ ಪ್ರಭಾವದಿಂದ ಆತನು ತಾನೇ ಸ್ವಂತವಾಗಿ ಅಧ್ಯವ

---

"* From a study of the Buddha's dialogues it would appear that he never encountered a capable exponent of the highest Vedantic idealism. such a one as Yajnavalkya or Janaka.... "–Dr. Ananda Coomaraswamy.

† "ಬೋಧಿ ಸತ್ತ್ವ ಆಹ। ನೈಷ ಮಾರ್ಗೋ ನಿರ್ವೃತಯೇ ನ ವಿರಾಗಾಯ ನ ನಿರೋಧಾಯ ನೋಪಶಮಾಯ ನಾಭಿಜ್ಞಾಯೈ ನ ಸಂಬೋಧಯೇ ನ ಶ್ರಮಣಾಯ ನ ಬ್ರಾಹ್ಮಣಾಯ ನ ನಿರ್ವಾಣಾಯ ಸಂವರ್ತತೇ"—ಲಲಿತವಿಸ್ತರ. ೧೭ನೆಯ ಅಧ್ಯಾಯ (ಪುಟ ೨೪೫)

‡ ಈ ಅಂಶಕ್ಕೆ ಮಜ್ಝಿಮ ನಿಕಾಯ ಮುಂತಾದ ಗ್ರಂಥಗಳಲ್ಲಿ ಉದಾಹೃತವಾಗಿರುವ ಬುದ್ಧನ ಹೇಳಿಕೆಗಳೇ ಆಧಾರವಾಗಿವೆ. ಆಧುನಿಕ ಪಂಡಿತರಲ್ಲಿ ಅನೇಕರೂ ಅದೇ ರೀತಿ ನಿಷ್ಕರ್ಷಿಸಿದ್ದಾರೆ. ಡಾಕ್ಟರ್ ರಾಧಾಕುಮುದ ಮುಖರ್ಜಿಯವರು "With the knowledge and training in *Yoga* received from his Brahmin masters, the Buddha now resolved to depend upon himself for his further progress...." ಎಂದು ಹೇಳಿದ್ದಾರೆ. ಯೋಗಸಾಧನೆಯಿಂದಲೂ, ಧ್ಯಾನದಿಂದಲೂ ಶಾಕ್ಯಮುನಿಯು ತತ್ತ್ವಸಾಕ್ಷಾತ್ಕಾರವನ್ನು ಪಡೆದನೆಂಬುದನ್ನು ಪಾಳಿ ಗ್ರಂಥಗಳು ಘಂಟಾಘೋಷವಾಗಿ ಸಾರುತ್ತವೆ.

ಸಾಯುವಮಾಡಿ ತತ್ತ್ವಸಾಕ್ಷಾತ್ಕಾರ ಮಾಡಿಕೊಳ್ಳಲು ಧೈರ್ಯವುಂಟಾಯಿತು. ಆತನು ತತ್ತ್ವಸಾಕ್ಷಾತ್ಕಾರವನ್ನು ಪಡೆಯುವ ಉದ್ದೇಶದಿಂದ ಗಯಾಕ್ಷೇತ್ರದ ಸಮೀಪದಲ್ಲಿ ನೈರಂಜನಾ ನದೀತೀರದಲ್ಲಿದ್ದ ಪ್ರಶಸ್ತವಾದ ತಪೋವನಕ್ಕೆ ತೆರಳಿದನು. ಈಗ ಬುದ್ಧಗಯೆಯೂ, ಬೌದ್ಧ ದೇವಾಲಯವೂ ಇರುವುದು ಇದೇ ಸ್ಥಳದಲ್ಲಿಯೇ.

**ಶಾಕ್ಯಮುನಿಯ ಸಾಧನೆಗಳು**

ಆ ತರುವಾಯ ಆರು ವರುಷಗಳಕಾಲ ಶಾಕ್ಯಮುನಿಯು ಬಗೆಬಗೆಯ ತಪೋನಿಯಮಗಳನ್ನಾಚರಿಸಿ ತತ್ತ್ವಾನುಸಂಧಾನ ಮಾಡಿದನು. ಆತನು ಕೈಕೊಂಡ ನಾನಾ ಸಾಧನೆಗಳ ವಿವರವೂ ಮಜ್ಝಿಮನಿಕಾಯ ಮುಂತಾದ ಗ್ರಂಥಗಳಲ್ಲಿ ವಿಶದವಾಗಿ ಹೇಳಿದೆ. ನೂರಾರುಜನ ದಾಸ ದಾಸಿಯರಿಂದ ಓಲೈಸಿಕೊಳ್ಳುತ್ತಿದ್ದವನು ಏಕಾಕಿಯಾಗಿ ಅರಣ್ಯಮಧ್ಯದಲ್ಲಿ ವಾಸಮಾಡಿದುದೇ ಎಂತಹವರ ಹೃದಯವನ್ನೂ ಕರಗಿಸುವ ಸಂಗತಿ. ಭಯವೇ ತನ್ನ ಬಳಿಗೆ ಸುಳಿಯದಂತೆ ಮಾಡಿಕೊಳ್ಳುವುದಕ್ಕಾಗಿ ಶಾಕ್ಯಮುನಿಯು ಸ್ಮಶಾನಗಳಲ್ಲಿಯೂ, ಗಿರಿಗಹ್ವರಗಳಲ್ಲಿಯೂ ಅಂಧಕಾರಮಯವಾದ ಕೃಷ್ಣಪಕ್ಷದ ರಾತ್ರಿಗಳಲ್ಲಿ ಸುತ್ತಾಡಿ ತನ್ನನ್ನು ತಾನೆ ಪರೀಕ್ಷೆಮಾಡಿ ನೋಡಿಕೊಂಡನಂತೆ. ಈ ರೀತಿಯಲ್ಲಿ ಸ್ಥೈರ್ಯಪರೀಕ್ಷೆ ಮಾಡಿಕೊಂಡ ನಂತರ ಆತನು ಉರುವೇಲದ ಸಮೀಪದಲ್ಲಿ ನೈರಂಜನಾ ನದೀತೀರದ ಪ್ರಶಸ್ತವಾದೊಂದು ಪ್ರದೇಶವನ್ನು ಕಂಡು ತನ್ನಲ್ಲಿ ತಾನೆ, "ರಮಣೀಯವಾದ ಕಾನನಮಧ್ಯದಲ್ಲಿರುವ ಈ ಪ್ರದೇಶವು ನನ್ನ ತಪಸ್ಸಾಧನೆಗೆ ಪ್ರಶಸ್ತವಾಗಿದೆ. ಮಧುರ ಶೀತಲವಾದ ತಿಳಿನೀರಿನಿಂದ ಕೂಡಿ ತಾಯಿಯಂತೆ ಅಮೃತಧಾರೆಯನ್ನೆರೆಯುವ ನೈರಂಜನಾ ನದಿಯೂ, ಅದರ ತೀರದ ಪುಳಿನಸಮೂಹವೂ ಮನೋಹರವಾಗಿವೆ. ಭಿಕ್ಷಾಟನೆಗಾಗಿ ಹೋಗಿಬರಲು ಊರೂ ಬಹಳ ದೂರದಲ್ಲಿಲ್ಲ. ಇದೇ ತಪಸ್ಸಾಧನೆಗೆ ತಕ್ಕ ಸ್ಥಳ" ಎಂದುಕೊಂಡನು.

ಮೊದಲು ಹಠಯೋಗದಿಂದಲೂ, ಕಾಯಕ್ಲೇಶಗಳಿಂದಲೂ ಶಾಕ್ಯಮುನಿಯು ಸಿದ್ಧಿಯನ್ನು ಕಾಣುವ ಪ್ರಯತ್ನವನ್ನು ಮಾಡಿದನು. ಪ್ರಾಣಾಯಾಮವನ್ನೂ, ಶ್ವಾಸನಿರೋಧವನ್ನೂ ಆತನು ಕೆಲಕಾಲ ಸಾಧಿಸಿ ನೋಡಿದನು. ಶ್ವಾಸನಿರೋಧಕಾಲದಲ್ಲಿ ಆತನ ದೇಹದಿಂದ ಬೆವರು ಹರಿಯುತ್ತಿದ್ದಿತಂತೆ. ಒತ್ತಿದ ಕುಲುಮೆಯ ತಿದಿಗಳ ಶಬ್ದದಂತೆ ಆತನ ಕಿವಿಗಳಲ್ಲಿ ಶಬ್ದವು ಕೇಳಿಸುತ್ತಿದ್ದಿತಂತೆ. ಶ್ವಾಸವನ್ನು ಬಂಧಿಸಿದ ಆವೇಗದ ಬೆಸೆಯಿಂದ ತಲೆಯನ್ನು ಬೈರಿಗೆಯಿಂದ ಕೊರೆದಂತೆಯೂ, ಮೈಯನ್ನು ಗುಳಿಯಲ್ಲಿರಿಸಿ ಬೆಂಕಿಯನ್ನು ತುಂಬಿದಂತೆಯೂ ಹಿಂಸೆಯಾಯಿತಂತೆ. ಆದರೂ ಶಾಕ್ಯಮುನಿಯು ತನ್ನ ಮನಸ್ಸಿನ ಸ್ಥೈರ್ಯವು ಅಚಲವಾಗಿರುವಂತೆ ಕಾಪಾಡಿಕೊಂಡನಂತೆ. —ಆತನೇ ಇವುಗಳನ್ನೆಲ್ಲ ವಿವರಿಸಿ ತಿಳಿಸಿದ್ದಾನೆ. ಹೀಗೆ ಶ್ವಾಸರೋಧದಿಂದಲೂ, ಬಗೆಬಗೆಯ ಕಾಯಕ್ಲೇಶಗಳಿಂದಲೂ ಶಾಕ್ಯಮುನಿಯು ಸ್ವಲ್ಪಕಾಲ ಕಠೋರ ನಿಯಮವನ್ನಾಚರಿಸಿದನು.

**ಐವರು ಶಿಷ್ಯರ ಆಗಮನ. ನಿರಾಹಾರವ್ರತ.**

ಶಾಕ್ಯಮುನಿಯ ತಪೋನುಷ್ಠಾನದ ವಾರ್ತೆಯು ನಾನಾ ಸ್ಥಳಗಳಿಗೂ ಹರಡಿತು. ಕೌಂಡಿನ್ಯ, ವಾಪ್ಪ, ಭದ್ರಿಕ, ಅಶ್ವಜಿತು, ಮಹಾನಾಮ ಎಂಬವರೈವರು ಶಾಕ್ಯಮುನಿಯಲ್ಲಿಗೆ ಬಂದು ಶಿಷ್ಯವೃತ್ತಿಯನ್ನು ಕೈಕೊಂಡು ಆತನನ್ನು ಸೇವಿಸತೊಡಗಿದರು. ಶಾಕ್ಯಮುನಿಯು ಕುಳಿತುಕೊಳ್ಳುತ್ತಿದ್ದ ಗುಹೆಯನ್ನು ಗುಡಿಸಿ ಸಾರಿಸುವುದು, ಆತನಿಗೆ ಸ್ನಾನಾದಿ ಕರ್ಮಗಳಲ್ಲಿ ಸಹಾಯಕರಾಗುವುದು, ಮುಂತಾದುವುಗಳೆಲ್ಲ ಅವರ ಕರ್ತವ್ಯಗಳಾದುವು. ಶಾಕ್ಯಮುನಿಯು ಬುದ್ಧನಾದೊಡನೆಯೇ ತಮಗೆ ತತ್ತ್ವೋಪದೇಶವಾಗುವುದೆಂದು ನಿರೀಕ್ಷಿಸುತ್ತ, ಅವರು ಆತನನ್ನು ಬಗೆಬಗೆಯಾಗಿ ಸೇವಿಸುತ್ತಿದ್ದರು.

ಶಾಕ್ಯಮುನಿಯು ನಿರಾಹಾರ ವ್ರತವನ್ನು ಕೈಕೊಂಡುದನ್ನು ಕಂಡು ಅವರ ಸಂತೋಷಕ್ಕೆ ಪಾರವಿಲ್ಲದಂತಾಯಿತು. ನಿರಾಹಾರ

ವ್ರತದಿಂದ ಶಾಕ್ಯಮುನಿಯ ದೇಹವು ದಿನದಿನವೂ ಕೃಶವಾಗುತ್ತ ಬಂದಿತು. ಮಾಂಸಖಂಡಗಳೆಲ್ಲ ಶೋಷಿಸಿಹೋಗಿ ಆತನ ಕಾಲು ಕೈಗಳು ಗಿಣ್ಣುಗಳಿಂದ ಕೂಡಿದ ಬಿದಿರುಗಳಂತೆ ತೋರುತ್ತಿದ್ದುವು. ಬೆನ್ನು ಮೂಳೆಯ ಗಂಟುಗಳನ್ನು ಅತಿಸುಲಭವಾಗಿ ಎಣಿಸಬಹುದಾದ ಮಟ್ಟಿಗೆ ಅದು ಹಾಯ್ದುಕೊಂಡಿದ್ದಿತು. ಕೂದಲುಗಳು ಉದುರಿ ಹೋದುವು. ಹೊಟ್ಟೆಯು ಬೆನ್ನಿಗೆ ಅಂಟಿಕೊಂಡು, ಮೂಳೆಗಳೆಲ್ಲ ಎದ್ದುಕೊಂಡಿದ್ದುವು. ಕಣ್ಣುಗುಡ್ಡೆಗಳು ಆಳಕ್ಕಿಳಿದುಹೋಗಿ ಬಾವಿಯೊಳಗಿನ ನಕ್ಷತ್ರ ಪ್ರತಿಬಿಂಬಗಳಂತೆ* ದೂರಗತವಾಗಿ ಕಾಣುತ್ತಿದ್ದುವು. ಅಲ್ಲಿಗೂ ಶಾಕ್ಯಮುನಿಯು ನಿರಾಹಾರ ವ್ರತವನ್ನು ನಿಲ್ಲಿಸಲಿಲ್ಲ. ಕೊನೆಗೊಂದು ದಿನ ಆತನು ಸ್ಮೃತಿತಪ್ಪಿ ಕಳಗೆ ಬಿದ್ದುಬಿಟ್ಟನು

**ಶಿಷ್ಯರ ಪಲಾಯನ**

ಶಾಕ್ಯಮುನಿಯು ಮೂರ್ಛೆಯಿಂದೆಚ್ಚೆತ್ತಾಗ ಆತನ ಮನಸ್ಸಿನಲ್ಲಿ ಬಗೆಬಗೆಯ ಆಲೋಚನೆಗಳು ತಲೆದೋರಿದುವು. ಆಗ ಆತನು ತನ್ನಲ್ಲಿ ತಾನು "ಇಷ್ಟುಮಟ್ಟಿನ ಕಾಯಕ್ಲೇಶವನ್ನು ಸಹಿಸಿಯೂ ನಾನಾವ ಸಿದ್ಧಿಯನ್ನೂ ಪಡೆಯಲಿಲ್ಲ. ನನ್ನ ಈಪ್ಸಿತಾರ್ಥ ಸಿದ್ಧಿಗೆ ಬೇರೆ ಮಾರ್ಗವನ್ನೇ ಅನುಸರಿಸಬೇಕು"‡ ಎಂದು ಹೇಳಿಕೊಂಡನು. ದೇಹರಕ್ಷಣೆಮಾಡಿಕೊಂಡು ಯೋಗಮಾರ್ಗಗಳನ್ನನುಸರಿಸಿ ಚಿತ್ತವೃತ್ತಿನಿರೋಧದಿಂದ ಆಶೆಯನ್ನೂ ರಾಗಪ್ರವೃತ್ತಿಯನ್ನೂ ಅಡಗಿಸಿ ಧ್ಯಾನಮಗ್ನನಾದಲ್ಲದೆ, ಕೇವಲ ಕಾಯಕ್ಲೇಶದಿಂದಲೂ ನಿರಾಹಾರವ್ರತದಿಂದಲೂ ತನಗೆಂದಿಗೂ ತತ್ತ್ವಸಾಕ್ಷಾತ್ಕಾರವಾಗದೆಂದು ಆತನ ಮನಸ್ಸಿಗೆ ಹೊಳೆಯಿತು. ಆತನು ಕೂಡಲೆ ನಿರಾಹಾರವ್ರತವನ್ನು ನಿಲ್ಲಿಸಿದನು. ಆರುವರ್ಷಗಳ ಕಾಲದ ತಪೋನುಷ್ಠಾನದಿಂದಲೇ ಸಿದ್ಧಿಯನ್ನು ಕಾಣದ ಶಾಕ್ಯಮುನಿಯು, ಆಹಾರ

* "ಕೂಪತಾರಕೆಗಳಂತೆ"

‡ ಮಜ್ಝಿಮ ನಿಕಾಯವನ್ನು ನೋಡಿ.

ಸ್ವೀಕಾರಮಾಡಿ ಸುಖಜೀವಿಯಾದಮೇಲೆ ಆತನೆಂದಿಗೂ ಬುದ್ಧನಾಗುವ ಸಂಭವವಿಲ್ಲವೆಂದು ನಿರ್ಧರಿಸಿ ಕೌಂಡಿನ್ಯನೇ ಮುಂತಾದ ಐವರು ಶಿಷ್ಯರೂ ವಾರಣಾಸಿಯ ಸಮೀಪದಲ್ಲಿದ್ದ ಮೃಗವನಕ್ಕೆ ಹೊರಟುಹೋದರು.

ಕೌಂಡಿನ್ಯನೇ ಮುಂತಾದ ಐವರು ಶಿಷ್ಯರೂ ತನ್ನನ್ನು ಬಿಟ್ಟು ಹೊರಟುಹೋದ ಬಳಿಕ ಶಾಕ್ಯಮುನಿಯು ಮತ್ತೊಮ್ಮೆ ಏಕಾಕಿಯಾದನು. ಆತನು ಮುಂದಿನ ಮಹತ್ತರಪ್ರಯತ್ನಕ್ಕೆ

**ಏಳುವಾರಗಳ ಧ್ಯಾನಮಗ್ನತೆಯ ಸಂಕಲ್ಪ**

ತಕ್ಕಷ್ಟು ದೇಹದಾರ್ಢ್ಯವನ್ನು ಸಂಪಾದಿಸುವುದಕ್ಕಾಗಿ ಸ್ವಲ್ಪಕಾಲ ಮತ್ತೆ ಭಿಕ್ಷಾವೃತ್ತಿಯನ್ನನುಸರಿಸಿ ಆಹಾರ ಸೇವನೆ ಮಾಡುತ್ತಿದ್ದನು. ಆಹಾರದಿಂದ ದೇಹವು ಪುಷ್ಟಿಹೊಂದಿ ಕಳಕಳಿಸಿದಂತೆಯೇ ತತ್ತ್ವಚಿಂತನೆಯಿಂದಲೂ ಯೋಗಾಭ್ಯಾಸದಿಂದಲೂ ಮನಸ್ಸು ಪ್ರಶಾಂತವಾಗಿ ಪ್ರಸನ್ನತೆಯನ್ನು ಹೊಂದಿತು. ಒಂದುದಿನ ಶಾಕ್ಯಮುನಿಯು ತಪೋವನಕ್ಕೆ ಸ್ವಲ್ಪದೂರದಲ್ಲಿದ್ದ ಒಂದು ಗ್ರಾಮದ ಹೊರಭಾಗದಲ್ಲಿ ಒಂದು ಅಶ್ವತ್ಥವೃಕ್ಷದ ಕೆಳಗೆ ಕುಳಿತಿದ್ದನು. ಆ ನಾಡಿನ ಒಡೆಯನ ಮಗಳು ಸುಜಾತೆಯೆಂಬವಳು ದೊಡ್ಡದೊಂದು ಚಿನ್ನದ ಪಾತ್ರೆಯಲ್ಲಿ ಪಾಯಸವನ್ನು ತುಂಬಿಕೊಂಡು ತನ್ನ ಸಖಿಯಾದ ಪುಣ್ಯೆಯೊಡನೆ* ಅಶ್ವತ್ಥಸೇವೆಗೆಂದು ಬಂದಳು. ಸುಜಾತೆಯು ಶಾಕ್ಯಮುನಿಯನ್ನು ಕಂಡು ಆತನು ಅಶ್ವತ್ಥವೃಕ್ಷದ ಅಭಿಮಾನದೇವತೆಯಾಗಿರಬೇಕೆಂದು ಭ್ರಮಿಸಿದಳು. ಆತನ ದರ್ಶನದಿಂದ ತಾನು ಕೃತಾರ್ಥೆಯಾದಂತೆ ಭಾವಿಸಿ ಭಕ್ತಿಯಿಂದ ನಮಸ್ಕರಿಸಿ ಪಾಯಸ ಸಮರ್ಪಣೆ ಮಾಡಿದಳು. ಶಾಕ್ಯಮುನಿಯು ಆದರದಿಂದ ಪಾಯಸವನ್ನು ಸ್ವೀಕರಿಸಿ, ಮುಂದೆ ಏಳುವಾರಗಳ ಕಾಲ ನಿರಾಹಾರ

---

* ಸುಜಾತೆಯ ಸಖಿಯ ಹೆಸರು ರಾಧೆಯೆಂದು ಲಲಿತ ವಿಸ್ತರದಲ್ಲಿ ಹೇಳಿದೆ.

ವ್ರತವನ್ನು ಕೈಕೊಂಡು ತತ್ತ್ವಸಾಕ್ಷಾತ್ಕಾರವನ್ನು ಪಡೆದು ಕೃತಕೃತ್ಯನಾಗಬೇಕೆಂದು ಸ್ಥಿರನಿಶ್ಚಯ ಮಾಡಿದನು. ಅಂದು ವೈಶಾಖ ಮಾಸದ ಹುಣ್ಣಿಮೆ. ಶಾಕ್ಯಮುನಿಯು ಬಿಸಿಲಿನ ಬೇಗೆಯು ತಪ್ಪುವವರೆಗೂ ಸಾಲವೃಕ್ಷಗಳ ತೋಪಿನಲ್ಲಿ ವಿಶ್ರಾಂತಿಯನ್ನು ಪಡೆದು, ಆ ಬಳಿಕ—ಬುದ್ಧಗಯೆಯೆಂದು ಪ್ರಸಿದ್ಧವಾಗಿರುವ ಪ್ರದೇಶದಲ್ಲಿ ಬೌದ್ಧರಿಗೆ ಈಗಲೂ ಪವಿತ್ರವಾಗಿರುವ ಬೋಧಿವೃಕ್ಷವೆಂಬ—ಅಶ್ವತ್ಥವೃಕ್ಷದ ಕೆಳಗೆ ಕುಳಿತನು. ಸ್ವಾಸ್ತಿಕನೆಂಬಾತನಿಂದ ಪಡೆದ ದರ್ಭೆಯ ಹುಲ್ಲನ್ನು ನೆಲಕ್ಕೆ ಹಾಸಿ, ಅದರ ಮೇಲೆ ಪೂರ್ವಾಭಿಮುಖವಾಗಿ ಕುಳಿತುಕೊಂಡು, ತತ್ತ್ವಸಾಕ್ಷಾತ್ಕಾರದ ಸಿದ್ಧಿಯನ್ನು ಪಡೆದಲ್ಲದೆ ತಾನು ಆ ಸ್ಥಳದಿಂದ ಕದಲಕೂಡದೆಂದು ಶಾಕ್ಯಮುನಿಯು ಪ್ರತಿಜ್ಞೆಮಾಡಿದನು. ರಕ್ತವೇ ಶೋಷಿಸಿಹೋದರೂ, ಮೂಳೆಗಳೇ ಕಳಚಿಬಿದ್ದರೂ, ಚರ್ಮವೇ ಸುಲಿದುಹೋದರೂ, ಬುದ್ಧನಾದಲ್ಲದೆ ಬಹಿರ್ಮುಖನಾಗಿ ಮೇಲಕ್ಕೇಳಲೊಲ್ಲೆನೆಂಬ ಸ್ಥಿರನಿಶ್ಚಯದಿಂದ ಕೂಡಿ ಶಾಕ್ಯಮುನಿಯು ಧ್ಯಾನಮಗ್ನನಾದನು. ಎಲೆಗಳ ಸಂದಿಯಿಂದ ನುಸುಳಿಬಂದ ಬೆಳದಿಂಗಳು ಆತನ ಮುಖಮಂಡಲದ ಮೇಲೆ ಪಸರಿಸಿ ಎಲೆಗಳು ಅಲುಗಿದಂತೆಲ್ಲ ನೃತ್ಯಮಾಡಿ ನಲಿದಾಡಿತು. ಆಶ್ರಮಪ್ರಾಂತದ ಅಂದಿನ ಅನಿರ್ವಚನೀಯವಾದ ಶಾಂತಿರಂಗವನ್ನು ಶಾಕ್ಯಮುನಿಯ ಶಾಂತಮೂರ್ತಿಯು ಹುಣ್ಣಿಮೆಯ ಬೆಳದಿಂಗಳಿಗಿಂತ ಹೆಚ್ಚಾಗಿ ಬೆಳಗಿತು.

**ಪ್ರೇಯಸ್ಸಿನೊಡನೆ ಕೊನೆಯ ಹೋರಾಟ**

ಐಶ್ವರ್ಯವನ್ನೂ, ರಾಜಪದವಿಯನ್ನೂ ತುಚ್ಛವೆಂದು ಭಾವಿಸಿ ವನಕ್ಕೆ ಬಂದು ಆರುವರುಷಗಳ ಕಾಲ ಸಂಯಮಶೀಲನಾಗಿದ್ದ ಶಾಕ್ಯಮುನಿಯ ಮನಸ್ಸು ಕೂಡ ತನ್ನ ಪಥದಿಂದ ಕೊಂಚಮಟ್ಟಿಗೆ ಕದಲಿತು. ಆತನು ಬಹುಕಾಲದಿಂದಲೂ ದಮನಮಾಡಿದ್ದ ಆಸೆಯು ಆರಿಹೋಗುವ ಕೊಳ್ಳಿಯಂತೆ ಕೊನೆಯ ಸಾರಿ ತನ್ನ ಪ್ರಭಾವವನ್ನು ತೋರಿಸಿ ಪ್ರಜ್ವಲಿಸಿತು.

ತನ್ನ ಅಗಲಿಕೆಯಿಂದ ವೃದ್ಧರಾಜನೂ, ಮಹಾರಾಣಿಯೂ, ಯುವರಾಣಿಯರೂ ಬಹಳವಾಗಿ ಪರಿತಪಿಸುತ್ತಿರಬಹುದೆಂದು ಶಾಕ್ಯಮುನಿಗೆ ಕಳವಳವುಂಟಾಯಿತು. ಶತ್ರುಗಳೇನಾದರೂ ಕಪಿಲವಸ್ತು ರಾಜ್ಯವನ್ನು ಮುತ್ತಿ ತನ್ನ ಬಂಧುಗಳನ್ನು ಬವಣೆಗೊಳಿಸಿದ್ದರೆ ಗತಿಯೇನೆಂದು ಶಂಕೆಯುಂಟಾಗಿ ಮುನಿಯ ಮನಸ್ಸು ತಲ್ಲಣಿಸಿತು. ಯಶೋಧರೆಯೇ ಮುಂತಾದ ಪ್ರೇಯಸಿರಾದ ಯುವರಾಣಿಯರೊಡನೆ ತಾನು ಅರಮನೆಯಲ್ಲಿ ರಾಜಭೋಗವನ್ನನುಭವಿಸುತ್ತಿದ್ದುದರ ನೆನಪಾಯಿತು. ತಾನು ತೊರೆದುಬಂದಿದ್ದ ಎರಡನೆಯ ಜೀವಿತದಂತಿದ್ದ ಬಾಲಪ್ರವಾಳ ರಾಹುಲನ ಸ್ಮರಣೆಯುಂಟಾಯಿತು. ತಾನು ಅರಮನೆಯಲ್ಲಿದ್ದಾಗ ಅನುಭವಿಸಿದ ಸೌಖ್ಯಗಳು ಆ ಬಳಿಕ ಒಂದೊಂದಾಗಿ ಶಾಕ್ಯಮುನಿಯ ಜ್ಞಾಪಕಕ್ಕೆ ಬಂದು, ರಾಜಭೋಗದ ಭವ್ಯದೃಶ್ಯವೇ ಆತನೆದುರಿಗೆ ಚಿತ್ತಾಕರ್ಷಕವಾಗಿ ನರ್ತನ ಮಾಡಿತು. ಕಪಿಲವಸ್ತು ನಗರಕ್ಕೆ ಹಿಂದಿರುಗಿ ಪ್ರಿಯಬಂಧುಗಳೊಡನೆ ಸಂಸಾರಸುಖವನ್ನನುಭವಿಸುತ್ತ ಕ್ಷಾತ್ರತೇಜವನ್ನು ಮೆರೆದು ಪರರಾಜರ ಮೇಲಿನ ದಿಗ್ವಿಜಯಗಳಿಂದ ಯಶೋರಾಶಿಯನ್ನು ಗಳಿಸಿ ಅಟ್ಟಹಾಸದಿಂದ ಬಾಳುವುದು ಯುಕ್ತವಲ್ಲವೆ ಎಂದು ಮನಸ್ಸು ಪ್ರಶ್ನೆಮಾಡಿತು. ರಾಗವಿರಾಗಗಳ ಒಳತೋಟಿಯಿಂದ ಆತನ ಹೃದಯವು ಕ್ಷತವಿಕ್ಷತವಾಗಿ ಪರಿಣಾಮದಲ್ಲಿ ವಿರಾಗಕ್ಕೇ ವಿಜಯಮಾಲಿಕೆಯು ದೊರೆಯಿತು. ಪ್ರೇಯಸ್ಸಿನ ಮಡುವಿಗೆ ಧುಮ್ಮಿಕ್ಕುವುದರಲ್ಲಿದ್ದ ಮನಸ್ಸು ಶ್ರೇಯಸ್ಸಿನ ಕಡೆಗೆ ಹಾರಲುದ್ಯುಕ್ತವಾಗಿ ಸುಪ್ರಸನ್ನವಾಯಿತು. ಮಹಾಪುರುಷನಾದ ಶಾಕ್ಯಮುನಿಯು ತೃಷ್ಣೆಯ ಬಲೆಗೆ ಬೀಳದೆ, ಕ್ಷಣಿಕವಾಗಿ ತನ್ನ ಹೃದಯವನ್ನಾವರಿಸಿದ್ದ ದೌರ್ಬಲ್ಯಕ್ಕಾಗಿ ತಾನೇ ವಿಸ್ಮಿತನಾದನು. ಮೊದಲಿಗಿಮ್ಮಡಿಯಾದ ಮನೋನಿಗ್ರಹದಿಂದ ಧ್ಯಾನಮಗ್ನನಾಗಿ ತತ್ತ್ವದ ನೆಲೆಯನ್ನು ಒಳಗಣ್ಣಿನ ತೀಕ್ಷ್ಣದೃಷ್ಟಿಯಿಂದ ಹುಡುಕತೊಡಗಿದನು.

ಶಾಕ್ಯಮುನಿಯ ಹೃದಯದಲ್ಲಿ ನಡೆದ ರಾಗವಿರಾಗಗಳ ಒಳ ತೋಟಿಯನ್ನೇ ಬೌದ್ಧಗ್ರಂಥಗಳು ಮಾರರಾಜನ ಆಟೋಪವೆಂದು ವರ್ಣಿಸಿ ಮನೋಹರವಾದ ಸಾಂಕೇತಿಕ ರೂಪದಲ್ಲಿ ತಿಳಿಸಿವೆಯೆಂದು ಬೌದ್ಧರಲ್ಲಿ ಕೆಲವರು ಅಭಿಪ್ರಾಯಪಟ್ಟಿದ್ದಾರೆ.‡ ಭೋಗದ ಹೆದ್ದೈವವಾದ ಮಾರರಾಜನ ಆಟೋಪವು ಸಾಂಕೇತಿಕವೇ ಅಥವಾ ವಾಸ್ತವವೇ ಎಂಬುದರ ಚರ್ಚೆಯು ಇಲ್ಲಿ ಅಪ್ರಸ್ತುತವೇ ಸರಿ.

**ಮಾರರಾಜನ ಆಟೋಪ**

ಮಾರರಾಜನ ಆಟೋಪವನ್ನು ಕುರಿತು ಬೌದ್ಧಗ್ರಂಥಗಳಲ್ಲಿ ಹೇಳಿರುವ ಮುಖ್ಯವಾದ ಅಂಶಗಳಿವು : ಶಾಕ್ಯಮುನಿಯ ಭೋಗ ಬುದ್ಧಿಯಳಿದು ಆತನು ಬುದ್ಧನಾಗುವುದು ಧರ್ಮರಿಪುವಾದ ಮಾರರಾಜನಿಗೆ ಸಮ್ಮತವಿಲ್ಲದೆ ಹೋಯಿತು. ಭೋಗಾಧಿಪತಿಯೂ, ನಿರ್ವಾಣದ್ವೇಷಿಯೂ ಆದ ಮಾರರಾಜನು ಶಾಕ್ಯಮುನಿಯ ಸಂಕಲ್ಪವು ಈಡೇರದಂತೆ ಮಾಡುವುದಕ್ಕಾಗಿ ಆತನ ಬಳಿಗೆ ಹೋದನು. ವಿಭ್ರಮ, ಹರ್ಷ, ದರ್ಪ, ಎಂಬ ಪುತ್ರರೂ ಅರಾತಿ, ರಾಗ, ತೃಷ್ಣೆ, ಎಂಬ ಪುತ್ರಿಯರೂ ಆತನೊಡನೆ ತೆರಳಿದರು. ಮಾರರಾಜನು ಒಬ್ಬ ದೂತನಂತೆ ವೇಷವನ್ನು ಧರಿಸಿ ಬಹುದೂರದಿಂದ ಓಡಿಬಂದವನಂತೆ ನಟಿಸುತ್ತ ಶಾಕ್ಯ

---

‡ ಅವರಲ್ಲಿ ಸುಭದ್ರ ಭಿಕ್ಷುಗಳೆಂಬವರೂ ಒಬ್ಬರು. ಅವರು ಹೀಗೆ ಹೇಳಿದ್ದಾರೆ:—"The Buddhist Scriptures, in a magnificent brilliantly coloured allegory, represent this inward struggle of the solitary Sage, as a fight of Gautama and Mara,"—*The Message of Buddhism* By Subhadra Bhikku.

**ರಾಧೆಯೆಂಬೊಬ್ಬ ಶಿಷ್ಯೆಯು "ಭಗವಾನ್ ! ಮಾರರಾಜ, ಮಾರರಾಜ ಎನ್ನುತ್ತಾರಲ್ಲ, ಮಾರರಾಜನಿದ್ದಾನೆಯೋ ?" ಎಂದು ಕೇಳಿದಳಂತೆ. ಆಗ ಬುದ್ಧನು "ವತ್ಸೇ! ದೇಹವೂ, ಪ್ರೇಯಃ ಪದಾರ್ಥಗಳೂ ಇದ್ದ ಕಡೆ ಮಾರರಾಜನಿರುವನು. ದೇಹವೇ ಮಾರರಾಜ ಸ್ವರೂಪಿ" ಎಂದನಂತೆ.**

ಮನೆತನದ ಅರಸು ಮಕ್ಕಳು ಬರೆದಂತಿದ್ದ ಪತ್ರವೊಂದನ್ನು ಶಾಕ್ಯ ಮುನಿಗೆ ಕೊಟ್ಟನು. ದೇವದತ್ತನು ಶುದ್ಧೋದನನ ಮೇಲೆ ಕೈಮಾಡಿ ಅವನನ್ನು ಸೆರೆಯಲ್ಲಿಟ್ಟು ಯಶೋಧರೆಯೇ ಮುಂತಾದವರನ್ನು ಪೀಡಿಸುತ್ತಿದ್ದುದಾಗಿ ಅದರಲ್ಲಿ ಬರೆದಿದ್ದಿತು. ಶಾಕ್ಯಮುನಿಯು ಅದರ ವಿಚಾರವಾಗಿ ಯೋಚಿಸಿ ದೇವದತ್ತನು ದುರಾಶೆಯಿಂದ ಹಾಗೆ ಮಾಡಿರ ಬೇಕೆಂದೂ, ಶಾಕ್ಯರ ಹೇಡಿತನದಿಂದ ವೃದ್ಧರಾಜನಿಗೆ ರಕ್ಷಣೆಯು ದೊರೆಯದೆ ಹೋಯಿತೆಂದೂ, ನಿರ್ಧರಿಸಿದನು. ಅಲ್ಲದೆ ದುರಾಶಾ ಯುಕ್ತರಾದವರ ತುಚ್ಛತನವನ್ನು ಹಳಿದು ಶಾಕ್ಯಮುನಿಯು ತೃಷ್ಣೆ ಯನ್ನು ಜಯಿಸುವ ಪ್ರಯತ್ನವನ್ನು ಮುಂದುವರಿಸಿದನು. ಆ ಬಳಿಕ ಮಾರರಾಜನು ಆತನ ಬಳಿಗೆ ತನ್ನ ನಿಜರೂಪದಿಂದ ಬಂದು ಶಾಕ್ಯ ಮುನಿಯು ಕಪಿಲವಸ್ತುವಿಗೆ ಹಿಂತಿರುಗಿ ಸುಖವಾಗಿ ಬಾಳಬೇಕೆಂದೂ, ಆತನು ಅದಕ್ಕೊಪ್ಪುವುದಾದರೆ ಭೂಲೋಕದ ಚಕ್ರವರ್ತಿಪದವಿ ಯನ್ನೇ ಕೊಡಿಸುವುದಾಗಿಯೂ ತಿಳಿಸಿದನು. ಆಗ ಶಾಕ್ಯಮುನಿಯು "ಮಾರರಾಜ! ದೂರ ಹೊರಡು" ಎಂದು ಉತ್ತರ ಹೇಳಿದನು. ಮಾರರಾಜನು ಕುಪಿತನಾಗಿ ಪಂಚಭೂತಗಳನ್ನೇ ಕೆರಳಿಸಿ ಶಾಕ್ಯ ಮುನಿಗೆ ವಿರೋಧವಾಗಿ ಪ್ರಯೋಗಿಸಿದನು. ಆಗ ಸಿಡಿಲುಗಳು ಗುಡುಗುಗಳು, ಭೂಕಂಪ, ಬಿರುಗಾಳಿ, ದೊಡ್ಡಮಳೆ, ಮುಂತಾದವು ಕಾಣಿಸಿಕೊಂಡುವು. ಕೊನೆಗೆ ಕೆಂಡಗಳ ಮಳೆಯೂ ಸುರಿಯಿತು. ಶಾಕ್ಯಮುನಿಯು ಅದೊಂದರಿಂದಲೂ ಭಯಪಡದೆ ಸುಮ್ಮನಿದ್ದುದನ್ನೂ ಯಾವ ಬಾಧೆಯೂ ಆತನಿಗೆ ತಟ್ಟದಂತಿದ್ದುದನ್ನೂ ಕಂಡು ಆ ಮಾರ ರಾಜನಿಗೂ ಆಶ್ಚರ್ಯವಾಯಿತು. ಮಾರರಾಜನ ಪುತ್ರಿಯರು ಶಾಕ್ಯ ಮುನಿಯ ಚಿತ್ತವನ್ನಾಕರ್ಷಿಸಿ ಸ್ವಾಧೀನಪಡಿಸಿಕೊಳ್ಳುವ ಪ್ರಯತ್ನ ಮಾಡಿ ಭಗ್ನಮನೋರಥರಾದರು. ತಮ್ಮೆಲ್ಲರ ಪ್ರಯತ್ನಗಳೂ ವಿಫಲ ವಾದುದನ್ನು ಕಂಡು ಮಾರರಾಜನೂ, ಅವನ ಮಕ್ಕಳೂ ಹತಾಶರಾಗಿ ಹೊರಟುಹೋದರು. ಇದೆಲ್ಲ ಸಾಂಕೇತಿಕವೆಂದೂ, ಶ್ರೇಯಸ್ಸಿ ನೊಡನೆ ಶಾಕ್ಯಮುನಿಯ ಹೋರಾಟವೆಂದೂ ಭಾವಿಸಬಹುದಲ್ಲವೆ?

ಶಾಕ್ಯಮುನಿಯು ಧ್ಯಾನಮಗ್ನನಾಗಿ ಕುಳಿತ ದಿನ ರಾತ್ರಿ ಮೊದಲನೆಯ ಜಾವದಲ್ಲಿ ಹಿಂದಿನ ಜನ್ಮಗಳೆಲ್ಲದರ ವೃತ್ತಾಂತಗಳ ಪರಿಜ್ಞಾನವನ್ನೂ ಪಡೆದನು. ಎರಡನೆಯ ಜಾವದಲ್ಲಿ

ಇಷ್ಟಾರ್ಥಸಿದ್ಧಿ

ಸಮಸ್ತ ವಿಷಯಗಳನ್ನೂ ತಿಳಿದುಕೊಳ್ಳಲು ಸಾಧಕವಾದ ಜ್ಞಾನನೇತ್ರವು ಆತನಿಗೆ ದೊರಿಯಿತು. ಮೂರನೆಯ ಜಾವದಲ್ಲಿ ದುಃಖಕಾರಣವಾದ ತೃಷ್ಣೆಯ ಮೂಲವು ಆತನ ಜ್ಞಾನನೇತ್ರಕ್ಕೆ ಗೋಚರಿಸಿತು.* ಕೊನೆಯ ಜಾವದಲ್ಲಿ ಶಾಕ್ಯಮುನಿಯು ತತ್ತ್ವಸಾಕ್ಷಾತ್ಕಾರವನ್ನು ಪಡೆದು, ಸೂರ್ಯೋದಯದ ವೇಳೆಗೆ ಬುದ್ಧನಾದನು. ಬೆಳಗಿನ ತಂಗಾಳಿಯು ಉಲ್ಲಾಸಜನಕ. ಮೇಲಕ್ಕೇರಿ ಬರುತ್ತಿದ್ದ ಸೂರ್ಯಬಿಂಬದ ಚೆಂಬಿಸಿಲಿನ ಕಮನೀಯ ಕಾಂತಿಯು ಉಲ್ಲಾಸಜನಕ. ಕಲರವದಿಂದ ಕೂಗುತ್ತ ಹಾರಾಡುತ್ತಿದ್ದ ವಿವಿಧಪಕ್ಷಿಸಂಕುಲಗಳ ಮನೋಹರವಾದ ನೋಟವು ಉಲ್ಲಾಸಜನಕ. ಬಣ್ಣಬಣ್ಣದ ಹೂಗಳಿಂದಲೂ, ಎಲೆಗಳಿಂದಲೂ ಕೂಡಿ ತಂಗಾಳಿಗೆ ತಲೆದೂಗುತ್ತ, ಎಳೆಬಿಸಿಲಿನಿಂದ ತೊಳಗಿ ನಲಿದಾಡುತ್ತ, ವಸಂತಲಕ್ಷ್ಮಿಯ ತೊಡೆಯಮೇಲೆ ಕುಣಿದಾಡುವ ಮಕ್ಕಳಂತೆ ತೋರುತ್ತಿದ್ದ ಗಿಡಬಳ್ಳಿಗಳು ಉಲ್ಲಾಸಜನಕ. ಉಲ್ಲಾಸಜನಕವಾದ ಆ ಬಗೆಯ ದೃಶ್ಯದಮಧ್ಯದಲ್ಲಿ ನಿರ್ವಾಣದ ನೆಲೆಯನ್ನರಿತ ಬುದ್ಧನ ಮನಸ್ಸು ಅನಿರ್ವಚನೀಯವಾದ ಆನಂದಾನುಭವದಿಂದ

---

* ಇಂದಿನ ವಿಜ್ಞಾನಯುಗದಲ್ಲಿ ಇದನ್ನೆಲ್ಲ ನಂಬುವುದು ಸಾಧ್ಯವೇ—ಎಂದು ಸಂಶಯಪಡುವವರು ಸರ್. ಎಸ್. ರಾಧಾಕೃಷ್ಣ ಅವರ "We cannot say with any definiteness or certainty whether greater freedom of mind and clarity of imagination can be obtained by a shutting out of sense impressions or a hypnotic exhaustion of the outer senses, Modern science in this department is still in its infancy" ಎಂಬ ಮಾತುಗಳನ್ನು ಮನನಮಾಡಿ ನೋಡುವುದು ಮೇಲು.

ಕೂಡಿ ಶಾಂತಿಯು ಬೀಡೆನಿಸಿತು. ಆತನು "ಜನನ ಮರಣಗಳ ರೂಪದ ಸಂಸಾರದ ಕಾರಣವನ್ನು ಹುಡುಕುತ್ತ ದುಃಖಮಯವಾದ ಅಸಂಖ್ಯಾತ ಜನ್ಮಗಳನ್ನು ದಾಟಿ ತೊಳಲಿದುದಾಯಿತು. ದೇಹ ರೂಪದ ಅನೇಕ ಸೆರೆಮನೆಗಳಲ್ಲಿ ಬಳಲಿದುದಾಯಿತು. ಈ ಬಗೆಯ ದೇಹಗಳ ಬವಣೆಯನ್ನು ನಿರ್ಮಿಸುವ ಎಲೆ ಗೃಹಕಾರಕ ತತ್ತ್ವವೆ! ಈಗ ನಿನ್ನನ್ನು ಕಂಡುಕೊಂಡೆನು. ಇನ್ನು ನೀನು ಮನೆಗಳನ್ನು ನಿರ್ಮಿಸಿ ಬಂಧನದಲ್ಲಿಡುವಂತಿಲ್ಲ. ನಿನ್ನ ಸಂಕಲೆಗಳೆಲ್ಲ ಮುರಿದು ಹೋದುವು. ನೀನು ಊರೆಕೊಡುತ್ತಿದ್ದ ಮೂಲಸ್ತಂಭವು (ಗೃಹ ಕೂಟವು) ಮುರಿದುಬಿದ್ದಿತು. ಚಿತ್ರವು ವಿಸಂಸ್ಕಾರವಾಯಿತು. ತೃಷ್ಣೆಯು ನಿರ್ನಾಮವಾಯಿತು" ಎಂದು* ತನ್ನಲ್ಲಿ ತಾನೆ ಹೇಳಿ ಕೊಂಡನು.

T. U. C Annual.

---

* ಈ ಅರ್ಥವನ್ನು ಸೂಚಿಸುವ ಶ್ಲೋಕಗಳು ಶಾಕ್ಯಮುನಿಯು ಬುದ್ಧ ನಾದ ಮೇಲೆ ಮೊಟ್ಟಮೊದಲು ನುಡಿದವುಗಳಂತೆ. ಆ ಕಾರಣಕ್ಕಾಗಿ ಅವು ಬೌದ್ಧ ರಿಗೆ ಪರಮ ಪವಿತ್ರವಾಗಿವೆ. ಅವುಗಳಾವುವೆಂದರೆ:—

"ಅನೇಕ ಜಾತಿ ಸಂಸಾರಂ ಸಂಧಾವಿಸ್ಸಂ ಅನಿಬ್ಬಿಸಂ ।
ಗಹಕಾರಕಂ ಗವೇಸನ್ತೋ ದುಕ್ಖಾ ಜಾತಿ ಪುನಪ್ಪುನಂ
॥೧೫೩॥"

"ಗಹಕಾರಕ ದಿಟ್ಠೋऽಸಿ ಪುನ ಗೇಹಂ ನ ಕಾಹಸಿ ।
ಸಬ್ಬಾ ತೇ ಫಾಸುಕಾ ಭಗ್ಗಾ ಗಹಕೂಟಂ ವಿಸಙ್ಖತಂ
ವಿಸಙ್ಖಾರಗತಂ ಚಿತ್ತಂ ತಣ್ಹಾನಂ ಖಯಮಜ್ಝಗಾ
॥೧೫೪॥"

# ಏಳನೆಯ ಅಧ್ಯಾಯ

—+—

## ಶಿಷ್ಯಲಾಭ

**ನಲವತ್ತೆಂಟು ದಿನಗಳಕಾಲ ನಿರಾಹಾರ**

ಯೋಗಮಾರ್ಗವನ್ನನುಸರಿಸಿ ಧ್ಯಾನಮಗ್ನನಾಗಿ ಕುಳಿತ ಮೊದಲನೆಯ ದಿನವೇ ಶಾಕ್ಯಮುನಿಯು ಬುದ್ಧನಾಗಿ ನಿರ್ವಾಣದಶೆಯ ಅಮೂಲ್ಯಲಾಭವನ್ನು ಪಡೆದನು. ಆ ಬಳಿಕ ಪ್ರಜ್ಞಾಲಾಭದ ಆನಂದವನ್ನನುಭವಿಸುತ್ತ ಒಂದುವಾರ ಬೋಧಿವೃಕ್ಷದ ಕೆಳಗೆ ಕುಳಿತಿದ್ದನು. ಆ ಬಳಿಕ ಮೂರು ವಾರಗಳ ಕಾಲ ಅದರ ಸಮೀಪದಲ್ಲಿಯೇ ಇದ್ದು, ಐದನೆಯ ವಾರವನ್ನು ಅಜಪಾಲ ವೃಕ್ಷವೆಂಬ ಆಲದಮರದ ಕೆಳಗೆ ಕಳೆದನು. ಆರನೆಯ ವಾರದಲ್ಲಿ ಮುಚಲಿಂದ ವೃಕ್ಷವನ್ನೂ, ಏಳನೆಯ ವಾರದಲ್ಲಿ ರಾಜಾಯತನ ವೃಕ್ಷವನ್ನೂ, ಆಶ್ರಯಿಸಿ ಧ್ಯಾನಮಗ್ನತೆಯ ಆನಂದಾನುಭವದಲ್ಲಿ ಲೀನನಾಗಿ ಆತನು ದಿನಗಳನ್ನೇ ಕ್ಷಣಗಳಂತೆ ಕಳೆದನು. ಆತನು ಕುಳಿತಿದ್ದ ರಾಜಾಯತನ ವೃಕ್ಷವೆಂಬ ಅರಳಿಯ ಮರಕ್ಕೆ ಸಮೀಪದಲ್ಲಿ ಉತ್ಕಲದಿಂದ ಮಧ್ಯದೇಶದ ಕಡೆಗೆ ಹೋಗುತ್ತಿದ್ದ ಐನೂರು ಬಂಡಿಗಳು ಸಾಗಿದುವು. ತ್ರಪುಷ ಮತ್ತು ಭಲ್ಲಿಕರೆಂಬೀರ್ವರು ವರ್ತಕರು ಅವುಗಳಲ್ಲಿ ಮಾರಾಟದ ವಸ್ತುಗಳನ್ನು ತುಂಬಿಕೊಂಡು ಹೋಗುತ್ತಿದ್ದರು. ಅವರೀರ್ವರೂ ಬುದ್ಧನ ತೇಜಸ್ಸನ್ನು ಕಂಡು ಬೆರಗಾಗಿ ತಮ್ಮ ಬಂಡಿಗಳನ್ನು ನಿಲ್ಲಿಸಿ ಆತನೆಡೆಗೆ ಬಂದು ನಮಸ್ಕರಿಸಿ, "ಭಗವನ್! ತಮ್ಮಲ್ಲಿ ಶರಣಾಗತರಾಗಿದ್ದೇವೆ. ನಮ್ಮನ್ನು ಗೃಹಸ್ಥರಾದ ಶಿಷ್ಯರಂತೆ (ಎಂದರೆ 'ಉಪಾಸಕ'ರಂತೆ) ಸ್ವೀಕರಿಸಿ ಧರ್ಮೋಪದೇಶದಿಂದ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದರು. ಬುದ್ಧನ ನಾಲ್ವತ್ತೆಂಟು ದಿನಗಳ ನಿರಾಹಾರದ ವಿಚಾರವನ್ನು ತಿಳಿದು ಚಕಿತರಾಗಿ, ತಾವು ಸಮರ್ಪಿಸತಕ್ಕ ವಸ್ತುಗಳಿಂದ ಆ ನಾಲ್ವತ್ತೊಂಬತ್ತ

ನೆಯ ದಿನವಾದರೂ ಪಾರಣೆಯಾಗಬೇಕೆಂದು ಅವರು ಬೇಡಿದರು. ಅವರು ಭಕ್ತಿಯಿಂದ ಸಮರ್ಪಿಸಿದ ಲಡ್ಡು ಮುಂತಾದವುಗಳನ್ನು ಗುರುವು ಸ್ವೀಕರಿಸಿದನು. ಅವರೀರ್ವರೂ ಗೃಹಸ್ಥಾಶ್ರಮವನ್ನು ಬಿಡದೆಯೇ ಆತನ ಶಿಷ್ಯರಾದರು. (ಗೃಹಸ್ಥಾಶ್ರಮದಲ್ಲಿದ್ದುಕೊಂಡೇ ಬುದ್ಧನ ಶಿಷ್ಯರಾದವರು ಉಪಾಸಕರೆಂಬ ಹೆಸರಿನಿಂದ ಪಂಚಶೀಲಗಳನ್ನು ಕೈಕೊಂಡು ವರ್ತಿಸಬಹುದು. ಭಿಕ್ಷುಗಳಾಗಿ "ಸಂಘ"ದ ವ್ಯವಸ್ಥೆಗೆ ಸೇರಿದವರು ದಶಶೀಲಗಳನ್ನು ಕೈಕೊಂಡು ವರ್ತಿಸಬೇಕು. ಭಿಕ್ಷುಗಳು ಆರ್ಯಾಷ್ಟಾಂಗಿಕ ಮಾರ್ಗದನ್ರೋರೆಗೆ ಅನುಷ್ಠಾನವನ್ನಿಟ್ಟುಕೊಂಡು ಅರ್ಹತರಾಗಲು ಪ್ರಯತ್ನಿಸುತ್ತ ಬರಬೇಕು. ಪಂಚಶೀಲಗಳಾವುವು, ದಶಶೀಲಗಳಾವುವು ಎಂಬುದನ್ನು ಮುಂದೆ ಹದಿಮೂರನೆಯ ಅಧ್ಯಾಯದಲ್ಲಿ ತಿಳಿಸುವೆವು) ಅವರೀರ್ವರೂ ಶಿಷ್ಯರಾದಾಗ್ಗೆ ಗೌತಮಬುದ್ಧನಿಗೆ ಮುವ್ವತ್ತೈದುವರುಷ ವಯಸ್ಸು. ಅಲ್ಲಿಂದ ಮುಂದೆ ಆತನು ಜೀವಿಸಿದ್ದ ನಲವತ್ತೈದು ವರುಷಗಳೂ ಧರ್ಮಬೋಧೆಗೆ ಮೀಸಲಾದುವು.

**ಮೊದಲಿನ ಐವರು ಶಿಷ್ಯರಲ್ಲಿಗೆ ಪ್ರಯಾಣ**

ಗೌತಮಬುದ್ಧನು ತನ್ನ ಸಿದ್ಧಿಯನ್ನು ಮೊದಲು ಆರಾಡಕಾಲಾಮುನಿಗೂ, ರುದ್ರಕನಿಗೂ ತಿಳಿಸಿ ಅವರಲ್ಲಿ ತನಗಿದ್ದ ಗುರುಭಕ್ತಿಯನ್ನು ಆ ಮೂಲಕ ತೋರಿಸಬೇಕೆಂದು ತವಕಪಟ್ಟನು. ಆದರೆ ಅವರೀರ್ವರೂ ಮೃತಪಟ್ಟಿದ್ದುದನ್ನರಿತು ಸುಮ್ಮನಾದನು. ಆ ಬಳಿಕ, ಹಿಂದೆ ತನ್ನಲ್ಲಿ ಶಿಷ್ಯವೃತ್ತಿಯನ್ನವಲಂಬಿಸಿದ್ದ ಕೌಂಡಿನ್ಯ ಮುಂತಾದ ಐವರು ಕಿರಿಯರನ್ನು ಹುಡುಕಿಕೊಂಡು ವಾರಣಾಸಿಗೆ ಪ್ರಯಾಣಮಾಡಿ, ಯಥಾಕಾಲದಲ್ಲಿ ಋಷಿಪತನದ ಮೃಗವನದಲ್ಲಿ ಅವರ ಬಳಿಗೆ ಹೋದನು. ಆ ಐವರು ಭಿಕ್ಷುಗಳೂ ದೂರದಿಂದಲೇ ಆತನನ್ನು ಕಂಡು "ಸಾಧನಾಭ್ರಷ್ಟನಾದ ಶ್ರಮಣಗೌತಮನು ಇಲ್ಲಿಗೆ ಬರುತ್ತಿದ್ದಾನೆ. ನಾವು ಅವನಿಗೆ ಅಭಿವಾದನ ಮಾಡಕೂಡದು. ಪ್ರತ್ಯುತ್ಥಾನ ಮಾಡಕೂಡದು. ಕುಳಿ

ತಲ್ಲಿಯೇ ಕುಳಿತಿರಬೇಕು" ಎಂದು ನಿಶ್ಚಯಮಾಡಿಕೊಂಡರು. ತೇಜಸ್ವಿಯಾದ ಗೌತಮಬುದ್ಧನು ಅವರ ಸಮೀಪಕ್ಕೆ ಬಂದಹಾಗೆಲ್ಲ ಅವರ ಪ್ರತಿಜ್ಞೆಯ ಕಟ್ಟು ಸಡಿಲಿತು. ಗೌತಮಬುದ್ಧನ ತೇಜಸ್ಸೂ ಶಾಂತಿ ಗಾಂಭೀರ್ಯಗಳೂ ಅವರ ಶಾಠ್ಯವನ್ನು ಜಯಿಸಿದುವು. ಮೇಲಕ್ಕೇಳದೆ ಕುಳಿತಿರಬೇಕೆಂದಿದ್ದವರು ಭಕ್ತಿನಮ್ರರಾಗಿ ಆಸನವನ್ನೂ ಪಾದೋದಕವನ್ನೂ ಹವಣಿಸಿ ಅತನಿಗೆ ಸೇವೆಯನ್ನು ಸಮರ್ಪಿಸಲು ಹುರುಡಿನಿಂದ ಸಡಗರಪಟ್ಟರು. ಜ್ಞಾನ ಕಾರುಣ್ಯಗಳು ಮೂರ್ತೀಭವಿಸಿದಂತಿದ್ದ ಬುದ್ಧನನ್ನು ಅಂದು ಸಾಯಂಕಾಲದವರೆಗೂ ಅವರು ಬಗೆಬಗೆಯಾಗಿ ಸತ್ಕರಿಸಿದರು.

**ಧರ್ಮಚಕ್ರ ಪ್ರವರ್ತನ**

ಅಂದು ಸಾಯಂಕಾಲ ಬುದ್ಧನು ಆ ಐವರಿಗೂ ಮತಬೋಧೆ ಮಾಡಲುಪಕ್ರಮಿಸಿದನು. ಆತನು ಬೋಧನೆಗಾರಂಭಿಸಿದುದು ಅದೇ ಮೊಟ್ಟಮೊದಲನೆಯ ಸಲವಾದುದರಿಂದ ಅದಕ್ಕೆ ಧರ್ಮಚಕ್ರ ಪ್ರವರ್ತನವೆಂದು ಹೆಸರಾಯಿತು. ಮಹಾಪುರುಷನಾದ ಗೌತಮಬುದ್ಧನು ಅವರಿಗೆ ಬೋಧನೆಯನ್ನು ಆರಂಭಿಸಿದಾಗ ಆ ಮೃಗವನಕ್ಕೆ ಅನಿರ್ವಚನೀಯವಾದೊಂದು ಜೀವಕಳೆಯುಂಟಾದಂತೆ ತೋರುತ್ತಿದ್ದಿತು. ತಂಗಾಳಿಗೆ ತಲೆದೂಗುವಂತೆ ತೋರುತ್ತಿದ್ದ ಗಿಡ ಮರಗಳೂ, ತಮ್ಮ ಸರ್ವಸ್ವವನ್ನೂ ಸಮರ್ಪಿಸುವಂತೆ ತೋರುತ್ತ ತೆರೆದ ಹೃದಯದಿಂದ ನವಸೌರಭವನ್ನು ಬೀರುತ್ತಿದ್ದ ಬಗೆಬಗೆಯ ಹೂಗಳೂ ಬುದ್ಧದೇವನ ಅಧಿಷ್ಠಾತೃತ್ವದಲ್ಲಿ ಆನಂದಪರವಶವಾಗಿದ್ದಂತೆ ತೋರುತ್ತಿದ್ದಿತು. ಬುದ್ಧನು ತನ್ನ ಸಾಧನೆಯಿಂದ ಮನಗಂಡಿದ್ದ ಆರ್ಯಸತ್ಯಗಳನ್ನೂ ಆರ್ಯಾಷ್ಟಾಂಗಿಕ ಮಾರ್ಗವನ್ನೂ‡ ಕೌಂಡಿನ್ಯನೇ

---

‡ ಆರ್ಯಸತ್ಯಗಳಾವುವೆಂಬುದನ್ನೂ ಆರ್ಯಾಷ್ಟಾಂಗಿಕ ಮಾರ್ಗದ ವಿಚಾರವನ್ನೂ ಮುಂದೆ ಹನ್ನೆರಡನೆಯ ಅಧ್ಯಾಯದಲ್ಲಿ ವಿವರಿಸುವೆವು.

ಮುಂತಾದ ಆ ಐವರಿಗೂ ಬೋಧಿಸಿದನು. ಅವರಲ್ಲಿ ಹಿರಿಯನಾದ ಕೌಂಡಿನ್ಯನು ಆ ದಿನವೇ ಹೊಸಮತವನ್ನು ಸ್ವೀಕರಿಸಿ ಭಿಕ್ಷುವಾದನು. ವಾಷ್ಪನು ಮರುದಿವಸ ದೀಕ್ಷೆಯನ್ನು ವಹಿಸಿದನು. ಆ ಬಳಿಕ ಮೂರು ದಿವಸಗಳ ಅವಧಿಯಲ್ಲಿ ಭದ್ರಿಕನೂ, ಮಹಾನಾಮನೂ, ಅಶ್ವಜಿತುವೂ ಬುದ್ಧನಲ್ಲಿ ಶಿಷ್ಯವೃತ್ತಿಯನ್ನು ಕೈಕೊಂಡು "ಬುದ್ಧ ನನ್ನು ಶರಣು ಹೊಗುವೆನು; ಧರ್ಮವನ್ನು ಶರಣು ಹೊಗುವೆನು; ಸಂಘವನ್ನು ಶರಣು ಹೊಗುವೆನು."‡ ಎಂಬ ರತ್ನತ್ರಯವನ್ನು ನುಡಿದು ಭಿಕ್ಷುಗಳಾದರು. ಅಂದು ಬುದ್ಧನು ಸ್ಥಾಪಿಸಿದ ಭಿಕ್ಷುಗಳ "ಸಂಘ" ಎಂಬ ವ್ಯವಸ್ಥೆಯು ಸಿಂಹಳದ್ವೀಪ, ಬ್ರಹ್ಮದೇಶ (ಬರ್ಮ) ಮುಂತಾದವುಗಳಲ್ಲಿ ಇಂದಿಗೂ ನಡೆದುಬರುತ್ತಿದೆ.

**ಯಶನೆಂಬುವನ ದೀಕ್ಷಾಪರಿಗ್ರಹ**

ಬೌದ್ಧ ಮತವನ್ನಂಗೀಕರಿಸಿ ಭಿಕ್ಷುಗಳಾದವರಲ್ಲಿ ಆರನೆಯ ವನು ಕಾಶೀನಗರದ ವರ್ತಕಶ್ರೇಷ್ಠನ ಪ್ರೀತಿಯಪುತ್ರನಾದ ಯಶ ಕುಮಾರನು. ಯಶಕುಮಾರನೂ, ಅವನ ತಂದೆಯೂ ಬುದ್ಧನ ಉಪದೇಶದಿಂದ ಆನಂದ ಪಟ್ಟರು; ಅಲ್ಲದೆ ಬೌದ್ಧಮತವನ್ನಂಗೀಕರಿಸಿ ತಮ್ಮ ಸಂಪತ್ತನ್ನೆಲ್ಲ ಗುರುವಿಗೆ ಸಮರ್ಪಿಸಿ ಧನ್ಯರಾದರು. ಭಿಕ್ಷುಗಳಾಗಲಿ ಬುದ್ಧನಾಗಲಿ ಚಿನ್ನ, ಬೆಳ್ಳಿ, ಹಣ, ಭೂಸ್ಥಿತಿ, ಮುಂತಾದ ಯಾವ ಸ್ವತ್ತುಗಳನ್ನು ಸ್ವೀಕರಿಸಿದರೂ ಅವು ಸಂಘಕ್ಕೆ ಸೇರಬೇಕೇಹೊರತು ಸ್ವಂತಕ್ಕಿರಕೂಡದೆಂದು ಬುದ್ಧನು ನಿಯಮವನ್ನೇರ್ಪಡಿಸಿದನು. ಆ ಹಣವು ಸಂಘಕ್ಕೆ ಸೇರಿತು.

ಆ ಬಳಿಕ "ನಾನು ಮುಂದು ತಾನು ಮುಂದು" ಎಂದು ಹುಡುಡುಪಡುತ್ತ, ಹಲವರು ಬೌದ್ಧಮತಕ್ಕೆ ಸೇರಲುಪಕ್ರಮಿಸಿದರು.

---

‡ ಬುದ್ಧಂ ಸರಣಂ ಗಚ್ಛಾಮಿ । ಧಮ್ಮಂ ಸರಣಂ ಗಚ್ಛಾಮಿ । ಸಂಘಂ ಶರಣಂ ಗಚ್ಛಾಮಿ ।"

**ಅರುವತ್ತುಮಂದಿ ಭಿಕ್ಷುಗಳ ಪ್ರಯಾಣ**

ಶಾಕ್ಯಮುನಿಯು ಬುದ್ಧನಾದ ತರುವಾಯ ಐದು ತಿಂಗಳುಗಳ ಅವಧಿಯೊಳಗಾಗಿ ಅರುವತ್ತುಮಂದಿ ಬೌದ್ಧಧರ್ಮವನ್ನಂಗೀಕರಿಸಿ ಭಿಕ್ಷುಗಳಾದರು. ತನ್ನ ಧರ್ಮಜ್ಯೋತಿಯ ಬೆಳಕು ಭರತಖಂಡದಲ್ಲೆಲ್ಲ ಬೆಳಗುವಂತೆ ಮಾಡಬೇಕೆಂಬ ಉದ್ದೇಶದಿಂದ ಕೂಡಿ ಬುದ್ಧನು ಅವರೆಲ್ಲರನ್ನೂ ಕುರಿತು, "ಭಿಕ್ಷುಗಳಿರಾ! ನಿಮ್ಮಲ್ಲಿ ಒಬ್ಬೊಬ್ಬರೂ ಒಂದೊಂದು ಕಡೆಗೆ ಪ್ರಯಾಣ ಮಾಡಿ ಜನರಿಗೆ ಧರ್ಮವನ್ನು ಬೋಧಿಸಿರಿ. ದೀಕ್ಷೆಯನ್ನು ವಹಿಸಲಿಚ್ಛಿಸುವ ಜನರಿಗೆ ಭಿಕ್ಷು ದೀಕ್ಷೆಯನ್ನನುಗ್ರಹಿಸಿ ಸಂಘಕ್ಕೆ ಸೇರಿಸಿಕೊಳ್ಳಿರಿ" ಎಂದು ಪ್ರೀತ್ಯಾದರಗಳಿಂದ ಅಪ್ಪಣೆಮಾಡಿ ಅವರನ್ನು ಬೀಳ್ಕೊಂಡನು. ಆ ಬಳಿಕ ಬುದ್ಧನು ಉರುವೇಲಕ್ಕೆ ಪ್ರಯಾಣ ಮಾಡಿದನು.

**ಉರುವೇಲದಲ್ಲಿ ಶಿಷ್ಯಪರಿಗ್ರಹ**

ಬ್ರಾಹ್ಮಣ ಜಾತಿಯ ಸಾಧಕರಲ್ಲಿ ಆಗ್ಗೆ ಬ್ರಹ್ಮಚಾರಿಗಳು, ಜಟಾಧಾರಿಗಳು (ಜಟಿಲರು), ಅಗ್ನಿಹೋತ್ರಿಗಳು, ಮುಂತಾದ ಪಂಗಡಗಳವರಿದ್ದರು. ಉರುವೇಲವು ಸಾವಿರಮಂದಿ ಜಟಿಲರ ಪ್ರಾಬಲ್ಯಕ್ಕೊಳಗಾಗಿದ್ದಿತು. ಅವರಲ್ಲಿ ಐನೂರು ಮಂದಿ ಜಟಿಲರಿಗೆ ಉರುವೇಲ ಕಾಶ್ಯಪನೆಂಬವನೂ, ಮುನ್ನೂರು ಮಂದಿ ಜಟಿಲರಿಗೆ ನದೀಕಾಶ್ಯಪನೆಂಬವನೂ, ಇನ್ನೂರು ಮಂದಿ ಜಟಿಲರಿಗೆ ಗಯಾಕಾಶ್ಯಪನೆಂಬವನೂ ಅಧಿನಾಯಕರಾಗಿದ್ದರು. ಆ ಮೂವರು ಅಧಿನಾಯಕರೂ ಸಹೋದರರು. ಗೌತಮ ಬುದ್ಧನು ಅವರಲ್ಲಿಗೆ ಹೋಗಿ ಅವರ ಆಶ್ರಮದಲ್ಲಿ ಆತಿಥ್ಯಹೊಂದಿದನು. ತಮಗಿಂತ ಗೌತಮ ಬುದ್ಧನು ಜ್ಞಾನದಲ್ಲಿ ಕಿರಿಯವನೆಂದು ಮೊದಲು ಮೊದಲು ಭಾವಿಸಿದ್ದ ಆ ಮೂವರೇ ಕ್ರಮಕ್ರಮವಾಗಿ ಆತನ ಹಿರಿಮೆಯನ್ನು ಕಂಡು ಬೆರಗಾಗಿ ಆತನನ್ನು, "ಮಹಾಶ್ರಮಣ"ನೆಂದೂ, "ಮಹಾನು

ಭಾವ"ನೆಂದೂ, "ದಿವ್ಯಶಕ್ತಿಧರ"ನೆಂದೂ ಕರೆದರು. ಕೊನೆಗೆ ಅವರು ಮೂವರೂ—ತಮ್ಮ ತಮ್ಮ ಅನುಯಾಯಿಗಳೊಡನೆ—ಒಬ್ಬೊಬ್ಬರಾಗಿ ಬೌದ್ಧಮತಕ್ಕೆ ಸೇರಿ ಭಿಕ್ಷುದೀಕ್ಷೆಯನ್ನು ವಹಿಸಿದರು. ಆ ಬಳಿಕ ಗೌತಮ ಬುದ್ಧನು ತನ್ನ ಜಟಿಲ ಶಿಷ್ಯರೊಡನೆ ಗಯಾ ಕ್ಷೇತ್ರಕ್ಕೆ ಪ್ರಯಾಣಮಾಡಿದನು.

**ಗಯಾಶೀರ್ಷ ವೆಂಬ ಬೆಟ್ಟದ ಮೇಲೆ ಶಿಷ್ಯರಿಗೆ ಉಪದೇಶ**

ಒಂದು ದಿನ ಸಾಯಂಕಾಲ ಬುದ್ಧನು ತನ್ನ ಶಿಷ್ಯರೊಡನೆ ಗಯಾಕ್ಷೇತ್ರದ ಬಳಿಯ ಗಯಾಶೀರ್ಷವೆಂಬ ಬೆಟ್ಟಕ್ಕೆ ಹೋದನು. ಗುರುಶಿಷ್ಯರು ಬೆಟ್ಟದ ಮೇಲಿರುವಾಗ ದೂರದಲ್ಲಿ ಕಾಡುಗಿಚ್ಚನ್ನು ಕಂಡರು. ಅವರು ಅದನ್ನೇ ನೋಡುತ್ತಿರುವಲ್ಲಿ ರಾತ್ರಿಯಾಯಿತು. ಕಾಡು ಗಿಚ್ಚಿನ ಜ್ವಾಲೆಯಿಂದ ಅಂತರಿಕ್ಷವೂ ಕೆಂಪಡರಿದಂತೆ ಕಾಣುತ್ತ, ಭೂವ್ಯಂತರಿಕ್ಷಗಳೆರಡೂ ಉರಿಯುವಂತೆ ತೋರುತ್ತಿದ್ದಿತು. ಕರುಣಾಳುವಾದ ಬುದ್ಧನು ಕಾಡುಗಿಚ್ಚಿನ ಅನಾಹುತವನ್ನು ಕುರಿತು ಚಿಂತಿಸುತ್ತಿದ್ದು, ಶಿಷ್ಯರಿಗೆ ಅಮೋಘವಾದ ಉಪದೇಶವೊಂದನ್ನು ಅನುಗ್ರಹಿಸಿದನು. ಅದೇನೆಂದರೆ: "ಪ್ರಿಯ ಭಿಕ್ಷುಗಳಿರಾ! ನೋಡಿ, ನೋಡಿ, ಎಲ್ಲೆಲ್ಲಿಯೂ ಉರಿಯು ವ್ಯಾಪಿಸಿರುವುದನ್ನು ನೋಡಿ. ರಾಗವೆಂಬ ಅಗ್ನಿಜ್ವಾಲೆಯಿಂದ, ದ್ವೇಷವೆಂಬ ಅಗ್ನಿಜ್ವಾಲೆಯಿಂದ, ಮೋಹವೆಂಬ ಅಗ್ನಿಜ್ವಾಲೆಯಿಂದ, ಜನ್ಮಜರಾಮರಣಗಳೆಂಬ ಅಗ್ನಿಜ್ವಾಲೆಯಿಂದ, ಶೋಕತಾಪಗಳೆಂಬ ಅಗ್ನಿಜ್ವಾಲೆಯಿಂದ, ಸಮಸ್ತವೂ ದಹಿಸುತ್ತಿರುವುದನ್ನು ನೋಡಿ. ಈ ಜ್ವಾಲೆಗೆ ಸಿಕ್ಕಿ, ಕಿವಿಗಳು ಉರಿಯುತ್ತಿವೆ; ಶಬ್ದವು ಉರಿಯುತ್ತಿದೆ; ಸ್ಪರ್ಶೇಂದ್ರಿಯವು ಉರಿಯುತ್ತಿದೆ; ಕಣ್ಣುಗಳು ಉರಿಯುತ್ತಿವೆ; ರೂಪವು ಉರಿಯುತ್ತಿದೆ; ನಾಲಗೆಯು ಉರಿಯುತ್ತಿದೆ; ಗಂಧವು ಉರಿಯುತ್ತಿದೆ; ಮೂಗು ಉರಿಯುತ್ತಿದೆ; ವಾಸನೆಯು ಉರಿಯುತ್ತಿದೆ; ಇಂದ್ರಿಯಗಳೆಲ್ಲ ಉರಿಯುತ್ತಿವೆ.

ಮನಸ್ಸೂ, ಹೃದಯವೂ ಉರಿಯುತ್ತಿವೆ. ವಿವೇಕಿಯಾದವನು ಇಂದ್ರಿಯ ವ್ಯಾಪಾರಗಳಿಗೆ ಗಮನವನ್ನೇ ಕೊಡದೆ ಇಂದ್ರಿಯ ಗಳಲ್ಲಿಯೂ ಇಂದ್ರಿಯ ವ್ಯಾಪಾರಗಳಲ್ಲಿಯೂ ಮನಸ್ಸಿಡದೆ ನಿರ್ವೇದ ಹೊಂದುವುದೇ ಈ ಜ್ವಾಲೆಯಿಂದ ಪಾರಾಗುವ ಮಾರ್ಗ. ನಿರ್ವೇದ ವನ್ನು ಮುಂದುವರಿಸಿದರೆ, ಪ್ರಜ್ಞಾಲಾಭವಾಗುವುದು. ಅಲ್ಲಿಗೆ ಜನ್ಮಗಳ ಕೋಟಲೆಯು ಮುಗಿದು ಕರ್ತವ್ಯವು ಪರಿಪೂರ್ಣವಾಗಿ ಅರ್ಹತ ದಶೆಯೊದಗುವುದು. ವಿಮುಕ್ತನು ಅಲ್ಲಿಂದ ಮುಂದೆ ಸಾಧಿಸ ಬೇಕಾದುದು ಮತ್ತಾವುದೂ ಇರುವುದಿಲ್ಲ." ಗುರುವಿನ ಈ ಉಪದೇಶ ವಾಣಿಗಳನ್ನು ಕೇಳಿ ಸಾವಿರದ ಮೂರು ಮಂದಿ ಜಟಿಲ ಶಿಷ್ಯರೂ ಸಂತಸಗೊಂಡರು; ಅವರ ಚಿತ್ತವು ಅಲಿಪ್ತವೆನಿಸಿ ಸ್ವಚ್ಛವಾಯಿತು.

ಗೌತಮ ಬುದ್ಧನು ತನ್ನ ಶಿಷ್ಯರೊಡನೆ ಗಯಾಶೀರ್ಷದಿಂದ ಹೊರಟು ಮಗಧರಾಜ್ಯದ ರಾಜಧಾನಿಯಾದ ರಾಜಗೃಹ ನಗರಕ್ಕೆ ಸ್ವಲ್ಪದೂರದಲ್ಲಿದ್ದ ಯಷ್ಟಿವನಕ್ಕೆ ಬಂದಿಳಿದನು.

**ಬಿಂಬಿಸಾರನಿಗೆ ಧರ್ಮಬೋಧೆ**

ತಾನು ಬುದ್ಧನಾದ ಮೇಲೆ ಬಿಂಬಿಸಾರ ರಾಜನಿಗೆ ಧರ್ಮೋಪದೇಶ ಮಾಡಲು ರಾಜಗೃಹಕ್ಕೆ ಬರುವುದಾಗಿ ವಾಗ್ದಾನ ಮಾಡಿದ್ದುದನ್ನು ಆತನು ಮರೆತಿರಲಿಲ್ಲ. ಬುದ್ಧನು ಯಷ್ಟಿವನದಲ್ಲಿ ಬಂದಿದ್ದುದನ್ನು ಕೇಳಿ ಮಗಧರಾಜ ಬಿಂಬಿಸಾರನು ಸಪರಿವಾರನಾಗಿ ಉತ್ಸಾಹದಿಂದ ಆತನ ದರ್ಶನಕ್ಕೆ ಬಂದನು. ಅವನೊಡನೆ ಅನೇಕ ಮಂದಿ ಬ್ರಾಹ್ಮಣರು ಬಂದು ಬುದ್ಧನ ಮೋಹನ ರೂಪವನ್ನೂ ಸ್ನೇಹಶೀಲತೆಯನ್ನೂ ಕಂಡು ಬೆರಗಾದರು. ಎಷ್ಟೆಷ್ಟು ವಿಧವಾಗಿ ಎಷ್ಟೆಷ್ಟು ಆದರದಿಂದ ಆತನನ್ನು ಕುರಿತು ಕುಶಲ ಪ್ರಶ್ನೆಮಾಡಿದರೂ ಅವರ ಮನಸ್ಸಿಗೆ ತೃಪ್ತಿಯಾಗದೆ ಹೋಯಿತು. ಆದಾಗ್ಗೂ, ವಯೋವೃದ್ಧನೆಂದೂ ಜ್ಞಾನವೃದ್ಧನೆಂದೂ ಸಾಧಕಶ್ರೇಷ್ಠನೆಂದೂ ಪ್ರಖ್ಯಾತನಾಗಿದ್ದ

ಉರುವೇಲ ಕಾಶ್ಯಪನು ಬುದ್ಧನೊಡನಿದ್ದುದನ್ನು ಕಂಡು, ಆತನಲ್ಲಿ ಬುದ್ಧನಿಗೆ ಶಿಷ್ಯವೃತ್ತಿಯೋ ಅಥವಾ ಆತನಿಗೆ ಬುದ್ಧನಲ್ಲಿ ಶಿಷ್ಯ ವೃತ್ತಿಯೋ—ಎಂಬ ಸಂಶಯುವು ಅವರೆಲ್ಲರ ಮನಸ್ಸನ್ನೂ ಆವರಿಸಿತು. ಇಂಗಿತಜ್ಞನಾದ ಉರುವೇಲ ಕಾಶ್ಯಪನು ಅವರ ಸಂಶಯುವ ನ್ನರಿತವನಾಗಿ, "ನಾನು ಶ್ರಾವಕನು; ಭಗವಾನ್ ಬುದ್ಧನು ಶಾಸ್ತಾ ರನು. ನಾನು ಶಿಷ್ಯನು; ಆತನು ಗುರುವು" ಎಂದು ಹೇಳಿದನು. ಅದನ್ನು ಕೇಳಿ ಅವರೆಲ್ಲರೂ ಬೆಕ್ಕಸಬೆರಗಾದರು; ಬುದ್ಧನ ಮಹಿಮೆಗೆ ಅದಕ್ಕಿಂತ ಹೆಚ್ಚಿನ ಪ್ರಮಾಣವೇ ಅನವಶ್ಯವಾಯಿತು. ಬಿಂಬಿ ಸಾರನೂ, ಇತರರೂ ಬುದ್ಧನಿಂದ ಧರ್ಮಬೋಧೆಯ ಅನುಗ್ರಹವನ್ನು ಯಾಚಿಸಿದರು. ಮೂರನೆಯದಿನ ಬುದ್ಧನು ತನ್ನ ಶಿಷ್ಯರೊಡನೆ ಭಿಕ್ಷೆಗಾಗಿ ಅರಮನೆಗೆ ಚಿತ್ತೈಸಬೇಕೆಂದು ಬಿಂಬಿಸಾರನು ಪ್ರಾರ್ಥಿಸಿ ದನು. ಆ ಪ್ರಾರ್ಥನೆಯು ನೆರವೇರಿ ಔತಣವು ಮುಗಿದ ಮೇಲೆ ರಾಜನು ವೇಣುವನವೆಂಬ ಹೆಸರಿನ ಉದ್ಯಾನವನ್ನು ಭಿಕ್ಷು ಸಂಘಕ್ಕೆ ದಾನವಾಗಿ ಸಮರ್ಪಿಸಿ, ಸಂಘದ ಪ್ರಮುಖನಾದ ಬುದ್ಧನು ಶಿಷ್ಯರೊಡ ಗೂಡಿ ಅಲ್ಲಿ ನಿರ್ಮಿತವಾಗಿದ್ದ ವಿಹಾರದಲ್ಲಿ ವಾಸವಾಗಿದ್ದು ಅನುಗ್ರಹ ಮಾಡಬೇಕೆಂದು ಬೇಡಿದನು. ಯಷ್ಟಿವನಕ್ಕಿಂತಲೂ ವೇಣುವನವು ರಾಜಧಾನಿಯಾದ ರಾಜಗೃಹ ನಗರಕ್ಕೆ ಸಮೀಪವಾಗಿದ್ದುದರಿಂದ ಬುದ್ಧನು ಅದಕ್ಕೆ ಸಮ್ಮತಿಸಿದನು. ಬಿಂಬಿಸಾರನು ಉತ್ಸಾಹ ಸಂತೋಷಗಳಿಂದ ಕೂಡಿ ವೇಣುವನದಲ್ಲಿ ಮಹಾವಿಹಾರವನ್ನು ಕಟ್ಟಿಸಿದನು.

ಸಾರಿಪುತ್ರನೆಂಬವನೂ, ಮೌದ್ಗಲ್ಯಾಯನನೆಂಬವನೂ ಪರಿವ್ರಾ ಜಕನಾದ ಸಂಜಯನೆಂಬವನ ಇನ್ನೂರೈವತ್ತುಮಂದಿ ಶಿಷ್ಯರಲ್ಲಿ ಬಹುಮುಖ್ಯರು. ಸಂಜಯನ ಮತ್ತು ಅವನ ಶಿಷ್ಯರ ಖ್ಯಾತಿಯು ಮಗಧ ರಾಜ್ಯದಲ್ಲೆಲ್ಲ ಹರಡಿದ್ದಿತು. ಹೀಗಿರುವಲ್ಲಿ ಸಾರಿಪುತ್ರನು ಒಂದು ದಿನ ಭಿಕ್ಷೆಗಾಗಿ ಹೋಗುತ್ತಿದ್ದ ಅಶ್ವಜಿತುವನ್ನು ಕಂಡು,

ಆತನ ಉಜ್ಜ್ವಲ ತೇಜಸ್ಸಿನಿಂದ ಮುಗ್ಧನಾದನು. ಒಡನೆಯೇ ಕುಶಲಪ್ರಶ್ನೆಗೆ ಪ್ರಾರಂಭವಾಯಿತು. ಅಶ್ವಜಿತು ವಿನಿಂದ ಬುದ್ಧನ ಮಹಿಮೆಯನ್ನು ತಿಳಿದು ಸಾರಿಪುತ್ರನು ಬುದ್ಧನಲ್ಲಿಗೆ ಹೋಗಿ ಆತನ ಧರ್ಮಬೋಧೆಯ ಪರಿಣಾಮವಾಗಿ ಭಿಕ್ಷುದೀಕ್ಷೆಯನ್ನು ಕೈಕೊಂಡನು. ಅಲ್ಲದೆ, ಅವನು ಮೌದ್ಗಲ್ಯಾಯನನಿಗೂ ಬುದ್ಧನ ವಿಚಾರವನ್ನು ತಿಳಿಯಹೇಳಿ ಅವನೂ ದೀಕ್ಷಾಸ್ವೀಕಾರ ಮಾಡುವಂತೆ ಪ್ರೇರಿಸಿದನು. ಅವರಿಬ್ಬರಲ್ಲದೆ ಸಂಜಯ ಶಿಷ್ಯರಲ್ಲಿ ಇತರ ಬಹುಮಂದಿಗಳೂ, ಅವರ ಮೇಲ್ಪಙ್ತಿಯಿಂದ ಮಗಧರಾಜ್ಯದ ಹಲವು ಮಂದಿ ಗಣ್ಯರೂ ಬೌದ್ಧಮತವನ್ನವಲಂಬಿಸಿದರು. ಇದರಿಂದ ರಾಜಗೃಹ ನಗರದಲ್ಲಿಯೂ ಮಗಧರಾಜ್ಯದ ಇತರ ಪ್ರದೇಶಗಳಲ್ಲಿಯೂ, "ತಂದೆಯನ್ನು ಕಸಿದುಕೊಂಡು ಮಕ್ಕಳನ್ನು ತಬ್ಬಲಿಮಾಡುವ ಶಾಕ್ಯಶ್ರಮಣಕನು ಬಂದಿದ್ದಾನೆ. ಕುಟುಂಬಗಳನ್ನು ಮುಳುಗಿಸುವ ಗೌತಮನು ಬಂದಿದ್ದಾನೆ. ಗಂಡನು ಬದುಕಿದ್ದೂ ಹೆಂಡತಿಯು ವಿಧವೆಯುಂತಾಗುವ ಪರಿಸ್ಥಿತಿಯನ್ನುಂಟುಮಾಡುವ ಗೌತಮನು ಬಂದಿದ್ದಾನೆ" ಎಂದು ಕಲಕಲನಾದವೆದ್ದಿತು. ಆದರೆ ಬುದ್ಧನನ್ನು ಕೊಂಡಾಡುವರೇ ಹೆಚ್ಚುಮಂದಿಗಳಿದ್ದರು.

ಸಾರಿಪುತ್ರ ಮೌದ್ಗಲ್ಯಾಯನರ ದೀಕ್ಷಾ ಸ್ವೀಕಾರ

stage, is reborn in a higher existence, not in this world, and attains Nirvana there.
The stage after this is that of 'Arahat'ship when a person has destroyed all the bonds and the asavas, and craving has been destroyed through the knowledge of the origin of the pain and the way in which it can be ended. No lay-man can enter this stage for any person who
P. T. O.

# ಎಂಟನೆಯ ಅಧ್ಯಾಯ

—÷—

## ಕಪಿಲವಸ್ತುನಗರಕ್ಕೆ ಪ್ರಯಾಣ

**ಶುದ್ಧೋದನನ ರಾಯಭಾರಿಗಳು**

ಅತ್ತ, ಶುದ್ಧೋದನನು ತನ್ನ ಪ್ರಿಯಪುತ್ರನು ಅರಮನೆಯಿಂದ ಹೊರಟುಹೋದ ತರುವಾಯ ಅವನನ್ನು ಮತ್ತೆ ಬರಮಾಡಲು ತಾನು ನಡೆಯಿಸಿದ ಪ್ರಯತ್ನಗಳೆಲ್ಲ ವಿಫಲವಾದುದನ್ನು ಕಂಡು ಶೋಕವಿಹ್ವಲನಾದನು. ಮಹಾರಾಣಿಯೂ, ಯುವರಾಣಿಯರೂ ದುಃಖಾರ್ತೆಯರಾಗಿ ಆರುವರುಷಗಳನ್ನೂ ಆರು ಯುಗಗಳಂತೆ ಕಳೆದಿದ್ದರು. ಸಿದ್ಧಾರ್ಥನು ಬುದ್ಧನಾಗಿ ರಾಜಗೃಹಕ್ಕೆ ಬಂದು ಧರ್ಮೋಪದೇಶ ಮಾಡುತ್ತಿದ್ದ ವಾರ್ತೆಯನ್ನೂ, ಬುದ್ಧನ ಯಶಸ್ಸನ್ನೂ ಕೇಳಿ ತಾನು ಸಾಯುವುದಕ್ಕೆ ಮುಂಚೆ ಕಪಿಲವಸ್ತು ನಗರಕ್ಕೆ ಬಂದು ತನಗೆ ದರ್ಶನ ಕೊಡಬೇಕೆಂದು ಬುದ್ಧನಿಗೆ ಬಿನ್ನೈಸಲು ಶುದ್ಧೋದನನು ಕಳುಹಿಸಿದವರೆಲ್ಲ ಭಿಕ್ಷುದೀಕ್ಷೆಯನ್ನು ವಹಿಸಿ ನಿಂತರು. ಅದರಿಂದ ಹತಾಶನಾದ ಶುದ್ಧೋದನನು ತನ್ನ ಕೊನೆಯ ಪ್ರಯತ್ನವಾಗಿ ಆಪ್ತ ಸಚಿವನಾದ ಉದಾಯಿಯನ್ನು ಕರೆದು, "ವತ್ಸ, ಉದಾಯಿ! ರಾಜಗೃಹಕ್ಕೆ ಹೋದ ಬಹುಮಂದಿಗಳಲ್ಲಿ ಯಾರೊಬ್ಬರೂ ಹಿಂತಿರುಗಲಿಲ್ಲ. ನೀನು ಅವನ ಸಹಪಾಠಿ. ನೀನಾದರೂ ಹೋಗಿ ವತ್ಸನನ್ನು ಕರೆದುಕೊಂಡು ಬಾ" ಎಂದನು. ಉದಾಯಿಯು ರಾಜಗೃಹಕ್ಕೆ ಹೋಗಿ ವೇಣುವನದಲ್ಲಿ ಬುದ್ಧನನ್ನು ಕಂಡಮೇಲೆ ತಾನೂ ಪರಿವ್ರಾಜಕನಾದನು. ಉದಾಯಿಯ ಪ್ರಾರ್ಥನೆಯಂತೆ ಕಪಿಲವಸ್ತುವಿಗೆ ಹೋಗಲು ಬುದ್ಧನೂ ಸಮ್ಮತಿಸಿ, ವಸಂತ ಕಾಲವು ಸನ್ನಿಹಿತವಾಗಿದ್ದ ಕಾರಣ ಒಡನೆಯೇ ಸಾವಿರಾರು ಮಂದಿ ಶಿಷ್ಯರೊಡನೆ ಪ್ರಯಾಣ ಹೊರಟನು.

ಬುದ್ಧನು ಕಪಿಲವಸ್ತುವಿಗೆ ಬರುವ ವಾರ್ತೆಯನ್ನು ಕೇಳಿ ಶುದ್ಧೋದನನಿಗೆ ಅಪಾರವಾದ ಆನಂದವುಂಟಾಯಿತು. ಬುದ್ಧನು ಬರುವ ವಾರ್ತೆಯನ್ನು ಕೇಳಿ ಕಪಿಲವಸ್ತು ನಗರ ನಿವಾಸಿಗಳಿಗೂ ಅಮಿತವಾದ ಆನಂದವುಂಟಾಯಿತು. ಬಗೆಬಗೆಯ ನಗರ ಶೃಂಗಾರಗಳು ಮೆರೆದುವು. ಪಟ್ಟಣದ ಹೊರಗಿದ್ದ ನ್ಯಗ್ರೋಧವನವೆಂಬ ಹೆಸರಿನ ದೊಡ್ಡ ಆಲದಮರದ ತೋಪಿನಲ್ಲಿ ಬುದ್ಧನಿಗೂ ಆತನ ಅಸಂಖ್ಯಾತ ಶಿಷ್ಯರಿಗೂ ಬಿಡಾರಗಳು ಸಿದ್ಧವಾದುವು. ಬುದ್ಧನು ಬರುವ ಮಾರ್ಗದಲ್ಲಿಯೂ ನ್ಯಗ್ರೋಧವನದಲ್ಲಿಯೂ ಜನಸಂದಣಿಯು ಕಿಕ್ಕಿರಿಯುತ್ತಿದ್ದಿತು. ಮಂಗಳವಾದ್ಯಗಳು ಭೋರ್ಗರೆಯುತ್ತಿದ್ದುವು. ಸಂಜೆಯ ಸಮಯಕ್ಕೆ ಬಿಜಯಮಾಡಿದ ಬುದ್ಧನನ್ನೆದುರುಗೊಳ್ಳಲು ಶುದ್ಧೋದನನು ಪುಷ್ಪಾದಿಗಳೊಡನೆಯೂ, ಲಾಜಾಕ್ಷತೆಗಳೊಡನೆಯೂ ಬಾಲಕ ಬಾಲಕಿಯರನ್ನು ತಾಳಮೇಳಗಳ ಹಿಂದೆ ಮೊದಲು ಕಳುಹಿಸಿದನು; ಆ ಬಳಿಕ ಆತನು ಬುದ್ಧನೆಡೆಗೆ ಹೋಗಿ ಅರ್ಘ್ಯಪಾದ್ಯಾದಿಗಳಿಂದ ಅವನನ್ನು ಸತ್ಕರಿಸಿ ಕೊನೆಗೆ ಕಂಬನಿದುಂಬಿ, ಸನಾತನ ಧರ್ಮ ಸಂಪ್ರದಾಯದಂತೆ ಬುದ್ಧನಿಗೆ ದಂಡಪ್ರಣಾಮ ಮಾಡಿದನು* ಯುವರಾಣಿಯರಲ್ಲಿ ಯಶೋಧರಾದೇವಿಯೊಬ್ಬಳು ಮಾತ್ರ ನ್ಯಗ್ರೋಧವನಕ್ಕೆ ಹೋಗಿರಲಿಲ್ಲ.

**ಆದರದ ಸ್ವಾಗತ**

ಪ್ರಾಪ್ತವಯಸ್ಕನಾದ ಪುತ್ರನನ್ನು ಅರಣ್ಯ ಸಾಮ್ರಾಜ್ಯಕ್ಕೆ ಬಿಟ್ಟುಕೊಟ್ಟು ತಾನು ಅರಮನೆಯಲ್ಲಿ ಭೋಗಮಧ್ಯದಲ್ಲಿರಬೇಕಾಗಿ ಬಂದ ದುಃಖವು ಉಕ್ಕಿ ಹರಿಯುದರಿಂದಲೋ, ಅಥವಾ ಭಿಕ್ಷುಗಳಲ್ಲಿಯೇ ಭೋಜನ ವ್ಯವಸ್ಥೆಯು ನಡೆಯುವುದೆಂಬ ನಂಬಿಕೆಯಿಂದಲೋ,

**ಭಿಕ್ಷಾಟನ**

---

* ಸಂನ್ಯಾಸಿಗೆ ಆತನ ತಾಯಿಯೊಬ್ಬಳ ಹೊರತು ಉಳಿದ ಬಂಧುಗಳೆಲ್ಲರೂ ನಮಸ್ಕಾರ ಮಾಡುವುದು ಸನಾತನ ಧರ್ಮ ಸಂಪ್ರದಾಯ.

ಶುದ್ಧೋದನನು ಮೂರನೆಯ ದಿನ ಬುದ್ಧನನ್ನೂ, ಅವನ ಜೊತೆಯವರನ್ನೂ ಭೋಜನಕ್ಕೆ ಕರೆಯದೆ ಪ್ರಮಾದವನ್ನಾಚರಿಸಿದನು. ಬುದ್ಧನು ಅರಮನೆಯಿಂದ ಭೋಜನಕ್ಕೆ ಆಹ್ವಾನ ಬರಬಹುದೆಂದು ಮಧ್ಯಾಹ್ನದ ವರೆಗೂ ನಿರೀಕ್ಷಿಸಿ ನೋಡಿ, ಆ ಬಳಿಕ ತನ್ನ ಪದ್ಧತಿಯಂತೆ ಭಿಕ್ಷಾಟನ ಮಾಡುವ ಉದ್ದೇಶದಿಂದ ಶಿಷ್ಯರೊಡನೆ ಪುರಪ್ರವೇಶ ಮಾಡಿದನು. ಸಿಂಹಾಸನವನ್ನೇರಿ ತಮ್ಮ ಪ್ರಭುವಾಗಬೇಕಾಗಿದ್ದವನು ವೈರಾಗ್ಯವೇ ದೇಹವನ್ನು ದರಿಸಿದ್ದಂತೆ ಶೋಭಿಸುತ್ತ ತಮ್ಮ ಮನೆಯ ಬಾಗಿಲಿಗೆ ಶಿಷ್ಯರೊಡನೆ ಭಿಕ್ಷಕ್ಕೆ ಬಂದುದನ್ನು ಕಂಡು ಅಚ್ಚರಿಗೊಂಡ ಪುರಜನರು ಸಂತೋಷದಿಂದ ಹಿಗ್ಗಿದರು. ಅತ್ತ, ಬುದ್ಧನ ಭಿಕ್ಷಾಟನ ವಾರ್ತೆಯನ್ನು ಕೇಳಿ ಯಶೋಧರಾದೇವಿಯು ಶೋಕಭರದಿಂದ ಕುಗ್ಗಿದಳು. ಬುದ್ಧನನ್ನು ಭೋಜನಕ್ಕೆ ಕರೆಯದೆ ತಾನು ಮಾಡಿದ ಅವಿವೇಕಕ್ಕಾಗಿ ಶುದ್ಧೋದನನಿಗೆ ಪಶ್ಚಾತ್ತಾಪವೂ ಆಯಿತು. ಅಲ್ಲದೆ, ಕುಲದ ನೆಗಳ್ತೆಯನ್ನು ಅಲಕ್ಷ್ಯಮಾಡಿ ಬುದ್ಧನು ತನ್ನ ಪ್ರಜೆಗಳ ಮನೆಗೇ ಭಿಕ್ಷಕ್ಕೆ ಹೋದನೆಂದು ಆತನ ಮನಸ್ಸಿಗೆ ಸ್ವಲ್ಪ ಅಸಮಾಧಾನವೂ ಉಂಟಾಯಿತು. ಶುದ್ಧೋದನನು ಮಗನ ಬಳಿಗೆ ಹೋಗಿ, "ಹೀಗೆ ಭಿಕ್ಷವೆತ್ತುವುದು ಯುಕ್ತವೆ? ನಮ್ಮಲ್ಲಿ ಅನ್ನವಿರಲಿಲ್ಲವೆ?" ಎಂದು ಕೇಳಿದನು. ಬುದ್ಧನು ಮುಗುಳುನಗೆಯಿಂದ ಕೂಡಿ, "ಭಿಕ್ಷಾಟನವು ನಮ್ಮ ವಂಶದ ಆಚಾರ" ಎಂದನು. ಶುದ್ಧೋದನನು, "ನಮ್ಮದು ಕ್ಷತ್ರಿಯ ಮನೆತನ. ಶಾಕ್ಯವಂಶದಲ್ಲಿ ಯಾರೂ ಭಿಕ್ಷೆಯನ್ನು ಬೇಡಿಲ್ಲ" ಎಂದನು. ಬುದ್ಧನು ಸ್ವಲ್ಪ ನಕ್ಕು, "ನಾನು ಹೇಳಿದುದು ಬುದ್ಧರಾದವರ ಸಂಪ್ರದಾಯವನ್ನು. ನಾನು ಅವರ ಪರಂಪರೆಗೆ ಸೇರಿದವನು; ಅವರ ಪೀಳಿಗೆಯವನು. ಭಿಕ್ಷಾವೃತ್ತಿಯು ನಮ್ಮ ವಂಶಾಚಾರ" ಎಂದು ಉತ್ತರ ಹೇಳಿದನು. ಶುದ್ಧೋದನನು ಯಥೋಚಿತವಾಗಿ ಮಾತನಾಡಿ ಅವರೆಲ್ಲರನ್ನೂ ಭೋಜನಕ್ಕಾಗಿ ಅಟ್ಟಹಾಸದಿಂದ ಅರಮನೆಗೆ ಕರೆದೊಯ್ದನು.

ಬುದ್ಧನಿಗೂ, ಇತರರಿಗೂ ಭೋಜನವಾದ ಮೇಲೆ ಮಹಾರಾಣಿಯಾದ ಮಹಾಪ್ರಜಾಪತೀದೇವಿಯೂ, ಯಶೋಧರಾದೇವಿಯೊಬ್ಬಳ ಹೊರತು ಉಳಿದ ಸಮಸ್ತ ನಾರಿಯರೂ ಬುದ್ಧ ದರ್ಶನಕ್ಕಾಗಿ ಬಿಜಯಮಾಡಿದರು. ಯಶೋಧರೆಯ ಚೇಟಿಯರಲ್ಲೊಬ್ಬಳು, "ದೇವಿಯವರು ದೇವರನ್ನು ನೋಡಿ ಬರುವುದಿಲ್ಲವೆ?" ಎಂದು ಕೇಳಿದಳು. ಮಾನಧನೆಯಾದ ಸಾಧ್ವಿ ಯಶೋಧರೆಯು "ನಾನೊಂದು ವಸ್ತುವೆಂದು ಅವರು ಗಣಿಸಿದ್ದರೆ—ನನ್ನ ಗುಣಗಳನ್ನು ಮೆಚ್ಚಿ ತಮ್ಮ ದಿವ್ಯಚಿತ್ತದಲ್ಲಿ ನೆನಸಿಟ್ಟುಕೊಂಡಿದ್ದರೆ—ಅವರೇ ನನ್ನಲ್ಲಿಗೆ ಬಂದು ದರ್ಶನವಿತ್ತು ಸೇವೆಯನ್ನು ಸಲ್ಲಿಸಿಕೊಳ್ಳುವರು" ಎಂದು ಉತ್ತರ ಹೇಳಿದಳು. ಯಶೋಧರಾದೇವಿಯು ಕ್ರೋಧದಿಂದಾಗಲಿ, ಅಥವಾ ಗರ್ವದಿಂದಾಗಲಿ ಆ ಮಾತುಗಳನ್ನಾಡಲಿಲ್ಲ. ಪತಿಪ್ರಾಣೆಯೂ ಮಾನಧನೆಯೂ ಆಗಿದ್ದ ಆಕೆಯು ಶೋಕಪರವಶಳಾಗಿ ಆ ಮಾತುಗಳನ್ನಾಡಿ, ಶ್ರೀಗರ್ಭವೆಂಬ ಹೆಸರಿನ ತನ್ನ ಶಯ್ಯಾಗೃಹದಲ್ಲಿ ರೋದಿಸುತ್ತ ಕುಳಿತಳು.

ಯಶೋಧರೆಯ ಬಳಿಗೆ ಹೋದುದು

ಸಾರಿಪುತ್ರನನ್ನೂ, ಮೌದ್ಗಲ್ಯಾಯನನನ್ನೂ ಸಂಗಡ ಕರೆದುಕೊಂಡು ಬುದ್ಧನು ಶ್ರೀಗರ್ಭದ ಕಡೆಗೆ ಹೊರಡುವುದಿಲ್ಲಿರುವನೆಂದು ಸ್ವಲ್ಪ ಹೊತ್ತಿನಲ್ಲಿಯೇ ಸುದ್ದಿಯು ಬಂದಿತು. ಮಳೆಯ ಹನಿಗಳು ಬೀಳುತ್ತಿರುವಾಗಲೇ ಏಕಕಾಲದಲ್ಲಿ ಯಶೋಧರೆಯ ಮನಸ್ಸಿಗೆ ಹೂಬಿಸಿಲಿನ ಅನುಭವವೂ ಆಯಿತು. ಅವಳು ಆಸ್ಥೆಯಿಂದ ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡಳು. ಬೋಧಿ ಶ್ರೀ ವಿರಾಜಿತನಾದ ತನ್ನ ಸಿದ್ಧಾರ್ಥನ ಮಂಗಳಮೂರ್ತಿಯನ್ನು ಕಂಡಾಗ ಕ್ಷಣಕಾಲ ಅವಳ ಮನಸ್ಸು ಸುಮ್ಮಾನ ಸುಧಾಂಬುಧಿಯಲ್ಲಿ ತೇಲಾಡಿತು. ಒಡನೆಯೇ ಪತಿಯನ್ನಗಲಿರುವ ತನ್ನ ಜೀವನವು ಬರಿದೆಂಬ ಶೋಕಾಗ್ನಿಜ್ವಾಲೆಗೆ ಸಿಕ್ಕಿ ಅವಳ ಮನಸ್ಸು ಬೆಂಕಿಗೆ ಸಿಕ್ಕಿದ ಬಾಳೆಯ ಸುಳಿಯಂತೆ ಬಾಡಿ

ಹೋಯಿತು. ಬುದ್ಧನ ಹಿಮ್ಮಡಿಗಳನ್ನು ಹಿಡಿದು ನಮಸ್ಕರಿಸಿದ ಯಶೋಧರಾದೇವಿಯು ಬಿಕ್ಕಿಬಿಕ್ಕಿ ಅಳುತ್ತ ಪತಿಯ ಪಾದಗಳಮೇಲೆ ತಲೆಯನ್ನೂರಿದವಳು ಮೇಲಕ್ಕೇಳಲೇ ಇಲ್ಲ. ಅಷ್ಟರಲ್ಲಿ ಅಲ್ಲಿಗೆ ಬಂದಿದ್ದ ಶುದ್ಧೋದನ ಮಹಾರಾಜನು ಸೊಸೆಯ ದುಃಖವನ್ನು ನೋಡಿ ಸೈರಿಸಲಾರದೆ ಮನನೊಂದು "ವತ್ಸೆಗೆ ನಿನ್ನಲ್ಲಿಯೇ ಪ್ರಾಣ. ನೀನು ಸಂನ್ಯಾಸ ಸ್ವೀಕಾರ ಮಾಡಿದೆಯೆಂದು ಕೇಳಿದಾಗಿನಿಂದ ಅವಳೂ ಕಾಷಾಯವಸ್ತ್ರಗಳನ್ನು ಧರಿಸುತ್ತಿದ್ದಾಳೆ. ನಿನಗೆ ಏಕಭುಕ್ತವೆಂದು ಕೇಳಿ ತಾನೂ ಒಂದೇಹೊತ್ತು ಊಟಮಾಡುತ್ತಿದ್ದಳೆ. ನೀನು ಬರಿಯ ನೆಲದಮೇಲೆ ನಿದ್ರಿಸುವುದನ್ನು ಕೇಳಿ ಅವಳೂ ಬರಿಯ ನೆಲದ ಮೇಲೆ ಮಲಗುತ್ತಿದ್ದಾಳೆ. ವತ್ಸೆಯು ಗುಣವತಿ. ನಿಜವಾದ ಸಹ ಧರ್ಮಿಣಿ" ಎಂದು ಹೇಳಿ ಯಶೋಧರಾದೇವಿಯನ್ನು ಸಂತೈಸಿದನು. ಬುದ್ಧನೂ ಆಕೆಗೆ ಸಮಾಧಾನ ಹೇಳಿ ಧರ್ಮಬೋಧೆ ಮಾಡಿದನು. ಆ ಬಳಿಕ ಆತನು, "ಶ್ರೀಗರ್ಭ"ವೆಂಬ ಹೆಸರಿನ ಆ ಶಯ್ಯಾಗಾರದಿಂದ ಎಲ್ಲರೊಡನೆ ಹೊರಟನು.

**ನಂದ ರಾಹುಲರಿಗೆ ದೀಕ್ಷಾಪ್ರದಾನ**

ಬುದ್ಧನು ಕಪಿಲವಸ್ತು ನಗರಕ್ಕೆ ಬಂದ ಮೂರನೆಯದಿನ ರಾಜಕುಮಾರ ನಂದನಿಗೆ ದೀಕ್ಷೆಯನ್ನಿತ್ತನು. ಶುದ್ಧೋದನನು ಜನಪದ ಕಲ್ಯಾಣಿಯೆಂಬ ಸುಂದರಿಯನ್ನು ತಂದುಕೊಂಡು ನಂದನಿಗೆ ವಿವಾಹಮಾಡಬೇಕೆಂದೂ, ನಂದನಿಗೆ ಯುವರಾಜ ಪಟ್ಟವನ್ನು ವಹಿಸಬೇಕೆಂದೂ ಯೋಚಿಸಿದ್ದನು. ನಂದನು ಪರಿವ್ರಾಜಕ ದೀಕ್ಷೆಯನ್ನು ತಳೆದುದರಿಂದುಂಟಾದ ದುಃಖವನ್ನು ಕಷ್ಟದಿಂದ ಸೈರಿಸುತ್ತಿರುವಾಗಲೇ ರಾಜದಂಪತಿಗಳಿಗೆ ಮತ್ತೊಂದು ಹೃದಯಶಲ್ಯವೂ ಒದಗಿತು. ಬುದ್ಧನು ಕಪಿಲವಸ್ತುವಿಗೆ ಬಂದು ಏಳುದಿನಗಳಾದಮೇಲೆ ಯಶೋಧರಾದೇವಿಯು ಅನರ್ಘ್ಯವಾದ ವಸ್ತ್ರಾಭರಣಗಳಿಂದ ರಾಹುಲನನ್ನಲಂಕರಿಸಿ ತಂದೆಯ ಬಳಿಗೆ ಹೋಗಿ

ಆತನಲ್ಲಿರುವ ಭಂಡಾರವನ್ನು ದಾಯಭಾಗವಾಗಿ ಅನುಗ್ರಹಿಸುವಂತೆ ಬೇಡಿಬರಬೇಕೆಂದು ನ್ಯಗ್ರೋಧವನಕ್ಕೆ ಕಳುಹಿಸಿದಳು. ಮುಂದೆ ಮಹಾರಾಜನಾಗಿ ಸುಖದಿಂದ ಬಾಳೆಂದು ರಾಹುಲನಿಗೆ ಬುದ್ಧನ ಆಶೀರ್ವಾದವಾಗಲೆಂಬ ಬಯಕೆಯಿಂದ ಕೂಡಿ ಆಕೆಯು ರಾಹುಲ ನನ್ನು ಹಾಗೆ ಕಳುಹಿಸಿದಳೆಂದು ತೋರುತ್ತದೆ. ಹಾಲುಹಸುಳೆಯಾದ ಏಳುವರುಷ ವಯಸ್ಸಿನ ರಾಹುಲನು ಬುದ್ಧನ ಬಳಿಗೆ ಹೋಗಿ, "ಗುರುವೆ! ನಿನ್ನಲ್ಲಿರುವ ಭಂಡಾರವನ್ನು ದಾಯಭಾಗವಾಗಿ ಅನು ಗ್ರಹಿಸು" ಎಂದು ಕೇಳಿದನು. ನಶ್ವರವಾದ ರಾಜಪದವಿಯ ಭೋಗ ಭಂಡಾರಕ್ಕಿಂತ ರಾಜತ್ವಕ್ಕೆ ಮಿಗಿಲಾದ ಧರ್ಮ ಭಂಡಾರವೇ ರಾಹುಲ ನಿಗೆ ತಕ್ಕುದೆಂದು ಬಗೆದು ಸಾರಿಪುತ್ರನಿಂದ ಬುದ್ಧನು ಅವನಿಗೆ ಪರಿವ್ರಾಜಕ ದೀಕ್ಷೆಯನ್ನು ಕೊಡಿಸಿದನು. ಅದನ್ನು ಕೇಳಿ ಶುದ್ಧೋದ ನನು ಬಹುಸಂಕಟಪಟ್ಟು, ಬುದ್ಧನ ಬಳಿಗೆ ಹೋಗಿ ಇನ್ನುಮುಂದೆ ತಾಯಿತಂದೆಗಳ ಅನುಮತಿಯಿಲ್ಲದೆ ಯಾರಿಗೂ ದೀಕ್ಷೆಕೊಡುವುದಿಲ್ಲ ವೆಂದು ವಾಗ್ದಾನಮಾಡಬೇಕೆಂದು ಕೇಳಿದನು. ಬುದ್ಧನು ಆ ರೀತಿ ವಾಗ್ದಾನಮಾಡಿ ಶುದ್ಧೋದನನಿಗೆ ಧರ್ಮಬೋಧೆಮಾಡಿದನು. ತಾಯಿ ತಂದೆಗಳ ಅನುಮತಿಯಿಲ್ಲದೆ ದೀಕ್ಷೆಯನ್ನು ಕೊಡಕೂಡದೆಂಬ ನಿಯಮವು ಬೌದ್ಧರಲ್ಲಿ ಇಂದಿಗೂ ಆಚರಣೆಯಲ್ಲಿದೆ.

[illegible]

( Page148 )

# ಒಂಬತ್ತನೆಯ ಅಧ್ಯಾಯ

## ಧರ್ಮಸಾಮ್ರಾಜ್ಯ ಸ್ಥಾಪನೆ

ಕಪಿಲವಸ್ತು ನಗರದಲ್ಲಿ ಸುಮಾರು ಎರಡು ತಿಂಗಳ ಕಾಲ ವಾಸವಾಗಿದ್ದು ಆ ಬಳಿಕ ಬುದ್ಧನು ಅನೂಪಿಯಕ್ಕೆ ಹೋದನು.

**ಆನಂದ ಮುಂತಾದವರಿಗೆ ದೀಕ್ಷಾಪ್ರದಾನ**

ಶಾಕ್ಯವಂಶಕ್ಕೆ ಸೇರಿದ ಅನೇಕ ಮಂದಿ ಕುಲೀನರು ಆತನಲ್ಲಿಗೆ ಬಂದು ಪರಿವ್ರಾಜಕ ದೀಕ್ಷೆಯನ್ನು ಪಡೆದರು. ಅವರಲ್ಲಿ ಆನಂದ, ದೇವದತ್ತ, ಅನಿರುದ್ಧ ಎಂಬೀ ಮೂವರೂ ಮುಖ್ಯರು. ಉಪಾಲಿಯೆಂಬೊಬ್ಬ ಕ್ಷೌರಕನಿಗೂ ಬುದ್ಧನು ದೀಕ್ಷಾಪ್ರದಾನ ಮಾಡಿದನು. ಬುದ್ಧನು ಬದುಕಿರುವವರೆಗೂ ಆನಂದನು ಆತನ ಆಪ್ತಶಿಷ್ಯರಲ್ಲೊಬ್ಬನಾಗಿ ಶ್ರದ್ಧೆಯಿಂದ ಗುರುಸೇವೆಮಾಡಿದನು. ಮೊದಲಿನಿಂದಲೂ ಬುದ್ಧನಲ್ಲಿ ವಿರೋಧಿಯಾಗಿದ್ದ ದೇವದತ್ತನು ಬುದ್ಧನ ಮೇಲಿನ ಹುರುಡಿನಿಂದ ತಾನೂ ಪರಿವ್ರಾಜಕನಾದನು.

ಶಾಕ್ಯಮುನಿಯು ತಾನು ಬುದ್ಧನಾದಾಗಿನಿಂದ ನಾಲ್ವತ್ತೈದು ವರುಷಗಳ ಕಾಲ ಧರ್ಮಬೋಧೆಮಾಡಿ ತನ್ನ ಎಂಬತ್ತನೆಯ ವಯಸ್ಸಿನಲ್ಲಿ ನಿರ್ಯಾಣಹೊಂದಿದನು.

**ನಾಲ್ವತ್ತೈದು ವರುಷಗಳ ಕಾಲ ಧರ್ಮಬೋಧೆ**

ಈ ನಾಲ್ವತ್ತೈದು ವರುಷಗಳಲ್ಲಿ ಪ್ರತಿಯೊಂದರಲ್ಲಿಯೂ ಎಂಟು ತಿಂಗಳುಗಳ ಕಾಲ ಬುದ್ಧನು ತನ್ನ ಶಿಷ್ಯರೊಡನೆ ಸಂಚಾರ ಹೊರಟು ಹಳ್ಳಿಯಿಂದ ಹಳ್ಳಿಗೂ, ಪಟ್ಟಣದಿಂದ ಪಟ್ಟಣಕ್ಕೂ, ರಾಜ್ಯದಿಂದ ರಾಜ್ಯಕ್ಕೂ ಹೋಗಿ ಉಪನ್ಯಾಸಗಳ ಮೂಲಕವೂ, ಗೂಢಾರ್ಥವುಳ್ಳ ಕಥೆಗಳ ಮೂಲಕವೂ, ವಾಕ್ಯಾರ್ಥಗಳ ಮೂಲಕವೂ ಅನೇಕ ಜನರಿಗೆ ಧರ್ಮೋಪದೇಶಮಾಡಿ ತನ್ನ ಜನ್ಮವನ್ನು ಸಾರ್ಥಕಮಾಡಿಕೊಂಡನು.

ಮಳೆಗಾಲವಾದ ನಾಲ್ಕು ತಿಂಗಳುಗಳಲ್ಲಿಯೂ ಬುದ್ಧನು ಸಂಚಾರವನ್ನು ನಿಲ್ಲಿಸಿದ್ದು ಶಿಷ್ಯರ ಮನೆಯಲ್ಲಿಯೋ, ಅಥವಾ ವೇಣುವನ ಮುಂತಾದ ವಿಹಾರಗಳಲ್ಲಿಯೋ ವಾಸವಾಗಿರುತ್ತಿದ್ದನು; ಆಗಲೂ ಸಹ ಸುಮ್ಮನೆ ಕುಳಿತಿರದೆ, ತನ್ನಲ್ಲಿಗೆ ಬಂದ ಜನರಿಗೆ ಧರ್ಮೋಪದೇಶ ಮಾಡಿ ನಿರ್ವಾಣದ ಮಾರ್ಗವನ್ನು ತೋರಿಸುತ್ತಿದ್ದನು. ಧರ್ಮ ಸಾಮ್ರಾಜ್ಯಸ್ಥಾಪನೆಯ ಕಾರ್ಯವು ದಿನದಿನವೂ ಮುಂದೆ ಸಾಗಿತು.

ನಾಲ್ವತ್ತೈದು ವರುಷಗಳ ದೀರ್ಘಕಾಲ ಪ್ರತಿದಿನವೂ ತಪ್ಪದೆ ನಡೆಯುತ್ತಿದ್ದ ಬುದ್ಧನ ದಿನಚರಿಯನ್ನು ನೋಡಿದರೆ ಆತನ ಕಾರ್ಯಶೀಲತೆಯೂ ನಿಯಮಸ್ಪೃಹೆಯೂ ವ್ಯಕ್ತವಾಗುವುವು. ಆತನು ಪ್ರಾತಃಕಾಲ ಐದು ಗಂಟೆಗೆ ನಿದ್ರೆಯಿಂದೆಚ್ಚೆತ್ತು, ಶಿಷ್ಯರಿಗೆ ತೊಂದರೆಯಾಗಕೂಡದೆಂಬ ಉದ್ದೇಶದಿಂದ ತಾನೆ ನೀರನ್ನೊದಗಿಸಿಕೊಂಡು, ಸ್ನಾನಮಾಡಿ ಬಟ್ಟೆಗಳನ್ನೊಗೆದುಕೊಳ್ಳುತ್ತಿದ್ದನು.

**ಬುದ್ಧನ ದಿನಚರಿ**

ಶಿಷ್ಯರಿಂದ ತಾನು ಸೇವೆಯನ್ನು ಕೈಕೊಳ್ಳುವುದು ಹಾಗಿರಲಿ, ಭಿಕ್ಷುಗಳಲ್ಲಿ ರೋಗಗ್ರಸ್ತರಾದವರಿಗೆ ಅನೇಕ ಸಂದರ್ಭಗಳಲ್ಲಿ ಆತನು ತಾನೇ ಸೇವೆಮಾಡುತ್ತಿದ್ದನು. ಗುರುವಿನ ಕರ್ತವ್ಯಗಳನ್ನು ವಿಧಿಸುವುದರಲ್ಲಿ ಬುದ್ಧನು, "ಶಿಷ್ಯರಿಗೆ ವಸ್ತ್ರಗಳಿಲ್ಲದಿದ್ದರೆ ಗುರುವು ತನ್ನಲ್ಲಿರುವ ವಸ್ತ್ರವನ್ನು ಕೊಡಬೇಕು. ಶಿಷ್ಯನಿಗೆ ರೋಗಬಂದರೆ ಗುರುವು ಅವನಿಗೆ ಮುಖೋದಕವನ್ನು ಸಿದ್ಧಪಡಿಸುವುದು, ಹಾಸಿಗೆಯನ್ನು ಹಾಸುವುದು, ಅನ್ನತಿನ್ನಿಸುವುದು ಮುಂತಾದುವುಗಳನ್ನೆಲ್ಲ ಮಾಡಬೇಕು" ಎಂದು ಹೇಳಿ ತಾನೂ ಆರೀತಿ ನಡೆಯುತ್ತಿದ್ದನು. ಒಮ್ಮೆ ರೋಗದಿಂದ ನರಳುತ್ತಿದ್ದ ಭಿಕ್ಷುವೊಬ್ಬನನ್ನು ಇತರ ಭಿಕ್ಷುಗಳು ಅಲಕ್ಷ್ಯಮಾಡಿದ್ದುದನ್ನು ಕಂಡು ಕರುಣಾಳುವಾದ ಬುದ್ಧನು ತಾನೇ ಅವನಿಗೆ ಆರೈಕೆ ಮಾಡಿ, ಉಪೇಕ್ಷೆಯನ್ನು ತೋರಿಸಿದ್ದ ಭಿಕ್ಷುಗಳನ್ನು ಕುರಿತು, "ಭಿಕ್ಷುಗಳೇ! ತಾಯಿತಂದೆಗಳಿಂದ ದೂರರಾಗಿರುವವರು ನೀವು. ಆದಕಾರಣ,

ಪರಸ್ಪರವಾಗಿ ನಿಮಗೆ ನೀವೇ ತಾಯಿತಂದೆಗಳಂತೆ ಪ್ರೀತಿಯಿಂದಿರಬೇಕು. ಒಬ್ಬರಿಗೊಬ್ಬರು ಆದರದಿಂದ ಸಹಾಯಮಾಡಬೇಕು" ಎಂದು ಬುದ್ಧಿ ಹೇಳಿದನು. ಐವತ್ತುನಾಲ್ಕು ವರುಷ ವಯಸ್ಸಾಗಿ ಮುಪ್ಪಡಿಸಿದಮೇಲೆ ಮಾತ್ರವೇ ಆತನು ಆನಂದನ ಶುಶ್ರೂಷೆಯನ್ನಪೇಕ್ಷಿಸಿದುದು. ಬುದ್ಧನು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಶಿಷ್ಯರೊಡನೆ ಪ್ರಯಾಣಹೊರಡುವನು. ಪ್ರಯಾಣದ ದಿನವಲ್ಲದಿದ್ದರೆ ಮಧ್ಯಾಹ್ನದವರೆಗೂ ಏಕಾಂತದಲ್ಲಿ ಕುಳಿತು ಧ್ಯಾನಮಗ್ನನಾಗಿದ್ದು, ಆ ಬಳಿಕ ಭಿಕ್ಷೆಗೆ ಹೊರಡುತ್ತಿದ್ದನು. ಕೆಲವುವೇಳೆ ಒಬ್ಬನೇ ಹೋಗುವನು. ಆಗ ಯಾರೊಡನೆಯೂ ಮಾತನಾಡದೆ ಮೌನದಿಂದ ತಲೆಬಾಗಿ ನಿಲ್ಲುವನು. ಧನಿಕರಾದ ಗೃಹಸ್ಥರು, "ಈ ದಿನ ಭಗವಾನ್ ಬುದ್ಧದೇವನಿಗೆ ಭಿಕ್ಷೆಮಾಡಿಸುವ ಭಾಗ್ಯ ನಮ್ಮದು", "ನಮ್ಮಲ್ಲಿಗೆ ದಯಮಾಡಿಸಬೇಕು", "ನಮ್ಮಲ್ಲಿಗೆ ಬಿಜಯಮಾಡಬೇಕು", "ನಮ್ಮಲ್ಲಿ ಐವತ್ತು ಮಂದಿ ಶಿಷ್ಯರಿಗೆ ಭಿಕ್ಷವಾಗಲಿ", "ನಮ್ಮಲ್ಲಿ ನೂರುಮಂದಿ ಶಿಷ್ಯರಿಗೆ ಭಿಕ್ಷವಾಗಲಿ" ಎಂದು ಮುಂತಾಗಿ ಮೇಲಾಡಿ ಭೋಜನಮಾಡಿಸುವರು. ಭೋಜನವಾದಮೇಲೆ ಅನ್ನದಾತರ ಮನೆಯಲ್ಲಿ ಬುದ್ಧನ ಉಪದೇಶವು ನಡೆಯುವುದು. ಆ ಬಳಿಕ ಬುದ್ಧನೂ, ಆತನ ಶಿಷ್ಯರೂ ಆಶ್ರಮಕ್ಕೆ ಹಿಂತಿರುಗುವರು. ಯಾರೂ ಔತಣ ಹೇಳದಿದ್ದ ಸ್ಥಳಗಳಲ್ಲಿ ಬುದ್ಧನೂ, ಆತನ ಶಿಷ್ಯರಾದ ಭಿಕ್ಷುಗಳೂ, ತಮಗೆ ಅವಶ್ಯವಾದಷ್ಟು ಗ್ರಾಸವು ಶೇಖರವಾಗುವವರೆಗೂ ಭಿಕ್ಷವೆತ್ತಿಕೊಂಡು ಹೋಗಿ, ಭೋಜನವಾದಮೇಲೆ ಕೊಂಚಹೊತ್ತು ವಿಶ್ರಮಿಸಿಕೊಳ್ಳುವರು. ಆ ಬಳಿಕ ಬುದ್ಧನು ತನ್ನ ಶಿಷ್ಯರಲ್ಲಿ ಅವರವರ ಅರ್ಹತೆಗೆ ತಕ್ಕಂತೆ ತತ್ತ್ವಬೋಧೆಮಾಡಿ, ಧ್ಯಾನಮಾಡಲು ವಿಷಯ ನಿರ್ದೇಶಮಾಡುವನು. ಅವರೆಲ್ಲರೂ ಏಕಾಂತಪ್ರದೇಶಗಳಿಗೆ ಹೋಗಿ ಧ್ಯಾನಮಾಡುವರು. ಆ ಬಳಿಕ ಬುದ್ಧನು ತಾನೂ ಧ್ಯಾನಮಗ್ನನಾಗುವನು. ಬಿಸಿಲು ತಂಪುನ ವೇಳೆಗೆ ನೆರೆಹೊರೆಯ ಗ್ರಾಮಗಳಿಂದಲೂ, ಪಟ್ಟಣಗಳಿಂದಲೂ ಜನರು ಬಂದು ಸೇರುವರು. ಸಂಜೆಯವರೆಗೂ ಬುದ್ಧನು

ಕ್ಷೌರ – ಮಹೋಪವೃದ್ಧಿ ಜಿ ಕ್ಷ್ಮಃ



ಅವರಿಗೆ ಧರ್ಮವನ್ನು ಬೋಧಿಸಿ, ಆ ಬಳಿಕ ಅವಶ್ಯಕಂಡರೆ ಮತ್ತೊಮ್ಮೆ ಸ್ನಾನಮಾಡುವನು. ಆತನ ಸ್ನಾನವು ಪೂರೈಸುವ ವೇಳೆಗೆ ಶಿಷ್ಯರೆಲ್ಲರೂ ತಮ್ಮ ತಮ್ಮ ಸಂಶಯ ನಿವೃತ್ತಿಗಾಗಿ ಗುಂಪು ಗೂಡುವರು. ಬುದ್ಧನು ರಾತ್ರಿಯಲ್ಲಿ ಮೊದಲನೆಯಜಾವವು ಕಳೆಯುವ ವರೆಗೂ—ಕೆಲವುವೇಳೆ ಸರಿರಾತ್ರಿಯವರೆಗೂ—ಅವರ ಪ್ರಶ್ನೆಗಳಿಗೆಲ್ಲ ಉತ್ತರ ಹೇಳಿ ಅವರು ನಿದ್ರಿಸುವಂತೆ ತಿಳಿಸಿ ಬೀಳ್ಕೊಂಡು, ಆ ಬಳಿಕಲೂ ಬಹಳಹೊತ್ತು ಧ್ಯಾನಮಗ್ನನಾಗಿದ್ದು—ಅಥವಾ ಆಲೋಚನಾಮಗ್ನನಾಗಿ ಸುತ್ತಾಡುತ್ತಿದ್ದು—ಕೊನೆಗೆ ನಿದ್ರಿಸುವನು.† ಹೀಗೆ ಲೋಕೋದ್ಧರಣಕ್ಕಾಗಿ ನಿರಂತರವೂ ಶ್ರಮಿಸಿದ ಮಹಾನುಭಾವನು ಬುದ್ಧನು.

**ಅನಾಥ ಪಿಂಡಕನಿಂದ ಜೇತವನದಾನ**

ಬುದ್ಧನು ಅನೂಪಿಯದಿಂದ ಶಿಷ್ಯರೊಡನೆ ವೇಣುವನಕ್ಕೆ ತೆರಳಿದ ಮೇಲೆ ಶ್ರಾವಸ್ತಿ ನಗರದ ಧನಿಕಶ್ರೇಷ್ಠನಾದ ಅನಾಥ ಪಿಂಡಿಕನು ರಾಜಗೃಹಕ್ಕೆ ಬಂದನು. ಅವನ ಹೆಸರು ಸುದತ್ತನೆಂದು. ಬಡವರ ಸಹಾಯಾರ್ಥವಾಗಿಯೂ, ಅನಾಥರ ಪೋಷಣೆಗಾಗಿಯೂ ಅನೇಕಾನೇಕ ಧರ್ಮಕಾರ್ಯಗಳನ್ನು ಅವನು ನಡೆಯಿಸಿದ್ದುದರಿಂದ ಅವನಿಗೆ ಅನಾಥಪಿಂಡಕನೆಂಬ ಅಡ್ಡ ಹೆಸರು ಬಂದಿದ್ದಿತು. ಅವನು ಬುದ್ಧನ ಧರ್ಮಶೀಲತೆಯನ್ನು ಕೇಳಿ ತಲೆದೂಗಿದ್ದವನಾದಕಾರಣ, ಗುರುವಿನ ದರ್ಶನಕ್ಕಾಗಿ ವೇಣುವನಕ್ಕೆ ತೆರಳಿ, ಅಲ್ಲಿ ದೊರೆತ ಉಪದೇಶಾಮೃತವನ್ನು ಮನಸಾರೆ ಪಾನಮಾಡಿದನು; ಅಲ್ಲದೆ, ಬುದ್ಧನು ಬೋಧಿಸಿದ ಹೊಸ

---

† ಡಾಕ್ಟರ್ ಆನಂದ ಕುಮಾರ ಸ್ವಾಮಿಯವರ "Buddha and The Gospel of Buddhism" ಎಂಬ ಗ್ರಂಥವನ್ನೂ, ಡಾಕ್ಟರ್ ರಾಧಾ ಕುಮುದ ಮುಖರ್ಜಿಯವರ, "Men And Thought In Ancient India" ಎಂಬ ಗ್ರಂಥವನ್ನೂ ನೋಡಿ.

ಮತವನ್ನಂಗೀಕರಿಸಿ "ಉಪಾಸಕ" ತರಗತಿಯ ಗೃಹಸ್ಥ ಶಿಷ್ಯ
ವೃತ್ತಿಯನ್ನು ಕೈಕೊಂಡು, ಗುರುವು ಶ್ರಾವಸ್ತಿಗೆ ಬಿಜಯಮಾಡ
ಬೇಕೆಂದು ಬಗೆಬಗೆಯಾಗಿ ಬೇಡಿ, ಶ್ರಾವಸ್ತಿಗೆ ಹಿಂತಿರುಗಿದನು.
ಬುದ್ಧನು ಬರುವ ವೇಳೆಗೆ ತನ್ನ ಧನಾಢ್ಯತೆಗೆ ತಕ್ಕಂತೆ ದೊಡ್ಡ
ದೊಂದು ವಿಹಾರವನ್ನು ಕಟ್ಟಿಸಿ ಸಮರ್ಪಿಸಬೇಕೆಂಬುದು ಅನಾಥ
ಪಿಂಡಕನ ಆಶೆ. ಶ್ರಾವಸ್ತಿಯ ಸಮೀಪದಲ್ಲಿ ಜೇತವನವೆಂಬ ಪ್ರಶಸ್ತ
ವಾದೊಂದು ಉದ್ಯಾನವಿದ್ದಿತು. ಅದು ಜೇತನೆಂಬ ರಾಜಕುಮಾರನಿಗೆ
ಸೇರಿದ್ದಿತು. ಅನಾಥ ಪಿಂಡಕನು ಅದನ್ನು ಕ್ರಯಕ್ಕೆ ಕೇಳಿದನು.
ಜೇತಕುಮಾರನು ಬೇಗ ಸಮ್ಮತಿಸಲಿಲ್ಲ. ಕೊನೆಗೆ ಜೇತವನದ
ನೆಲಕ್ಕೆಲ್ಲ ನಾಣ್ಯಗಳನ್ನು ಹಾಸಿಸಿ, ಅಷ್ಟು ನಾಣ್ಯಗಳನ್ನೂ ಕ್ರಯವಾಗಿ
ಸಮರ್ಪಿಸಿ ಅನಾಥ ಪಿಂಡಕನು ಆ ಉದ್ಯಾನವನವನ್ನು ಪಡೆದನು.

ಅಲ್ಲಿ ಅನಾಥ ಪಿಂಡಕನು ದೊಡ್ಡದೊಂದು ವಿಹಾರವನ್ನು
ಕಟ್ಟಿಸಿದನು. ಅದರಲ್ಲಿ ಅನೇಕ ಸಭಾಭವನಗಳೂ, ಬುದ್ಧನಿಗಾಗಿ
ಗಂಧಕುಟಿಯೆಂಬ ಭವ್ಯಗೃಹವೂ, ಬುದ್ಧನು ಕುಳಿತುಕೊಳ್ಳಲು
ಅಮೂಲ್ಯವಾದ, "ಮಣಿಫಲಕ"ವೂ, ಗಂಧಕುಟಿಯ ಸುತ್ತಲೂ
ಭಿಕ್ಷುಮುಖ್ಯರಿಗಾಗಿ ಎಂಬತ್ತು ವಾಸಗೃಹಗಳೂ ಉಳಿದ ಅಸಂಖ್ಯಾತ
ಮಂದಿ ಭಿಕ್ಷುಕರಿಗೂ ಸುಖವಸತಿಗಳೂ, ಸುಂದರವಾದ ಅನೇಕ
ಸರೋವರ ಮುಂತಾದುವುಗಳೂ ನಿರ್ಮಿತವಾದುವು. ಸಂಪತ್ತಿನಲ್ಲಿ
ರಾಜರುಗಳನ್ನೂ ಮೀರಿಸಿದ್ದ ಅನಾಥ ಪಿಂಡಕನು ಬುದ್ಧನನ್ನು
ಶಿಷ್ಯವೃಂದದೊಡನೆ ಶ್ರಾವಸ್ತಿಗೆ ಬರಮಾಡಿಕೊಂಡು, ಪ್ರೀತಿ ಗೌರವ
ಗಳಿಂದ ಸತ್ಕರಿಸಿ, ಚಿನ್ನದ ಪಾತ್ರೆಯಿಂದ ದಾನ ಧಾರೆಯನ್ನೆರೆದು
ಜೇತವನವನ್ನೊಪ್ಪಿಸಿದನು. ಭಿಕ್ಷುವಾದವನು ತನಗಾಗಿ ಏನನ್ನೂ
ದಾನವಾಗಿ ಸ್ವೀಕರಿಸಕೂಡದೆಂಬ ನಿಯಮಕ್ಕನುಸಾರವಾಗಿ ವಿರಕ್ತ
ಚಕ್ರವರ್ತಿಯಾದ ಬುದ್ಧನು ವಾಡಿಕೆಯಂತೆ ಭಿಕ್ಷುಗಳ ಸಂಘದ
ಪರವಾಗಿ ದಾನವನ್ನು ಸ್ವೀಕರಿಸಿದನು.

ಶ್ರಾವಸ್ತಿಯಲ್ಲಿದ್ದ ಪುಣ್ಯವರ್ಧನನೆಂಬ ಧನಿಕನ ಕಾಲಾನಂತರ ಅವನ ಅತುಳ ಸಂಪತ್ತಿಗೂ ಅವನ ಹೆಂಡತಿಯಾದ ವಿಶಾಖೆಯು ಒಡತಿಯಾದಳು. ಬುದ್ಧನಿಗೆ ತನ್ನ ಸೇವೆಯನ್ನು ಸಮರ್ಪಿಸಬೇಕೆಂಬ ಆಶೆಯಿಂದ ಆಕೆಯು ಪೂರ್ವಾರಾಮವೆಂಬ ಉದ್ಯಾನವನ್ನು ಸಂಘಕ್ಕೆ ದಾನಮಾಡಿದಳು. ಜೇತವನಕ್ಕೆರಡನೆಯದಾಗಿದ್ದ ಆ ಉದ್ಯಾನದಲ್ಲಿ ಹಲವು ಅಂತಸ್ತುಗಳಿದ್ದ ಪ್ರಾಸಾದವೊಂದಿದ್ದಿತು.

**ಪೂರ್ವಾರಾಮ ವಿಹಾರ**

ಅದೇ ಸಮಯದ ಸರಿಸುಮಾರಿನಲ್ಲಿ ಜೀವಕನೆಂಬ ಮತ್ತೊಬ್ಬ ಪ್ರಸಿದ್ಧ ಪುರುಷನು ಬುದ್ಧನಿಂದ ಉಪದೇಶವನ್ನು ಪಡೆದು, "ಉಪಾಸಕ" ತರಗತಿಯ ಶಿಷ್ಯನಾದನು. ಅವನು ಬಿಂಬಿಸಾರನ ಆಸ್ಥಾನ ವೈದ್ಯನಾಗಿದ್ದುದಲ್ಲದೆ, ಆಗಿನ ಕಾಲದಲ್ಲಿ ಅತ್ಯಂತ ಶ್ರೇಷ್ಠನಾದ ವೈದ್ಯನೆಂದು ಪ್ರಖ್ಯಾತನಾಗಿ, ಶ್ರಾವಸ್ತಿಯಿಂದ ಉಜ್ಜಯಿನಿಯವರೆಗಿದ್ದ ಅನೇಕ ರಾಜ್ಯಗಳಲ್ಲಿಯೂ ಆಸ್ಥಾನ ವೈದ್ಯನಾಗಿದ್ದನು. ಮಕ್ಕಳ ವ್ಯಾಧಿಗಳಿಗೆ ವೈದ್ಯಮಾಡುವುದರಲಂತೂ ಅವನು ನಿಸ್ಸೀಮನಾಗಿದ್ದನು.

**ಜೀವನಿಗೆ ಧರ್ಮೋಪದೇಶ**

ರೋಹಿಣೀ ನದಿಯ ನೀರನ್ನು ವ್ಯವಸಾಯಕ್ಕೆ ಉಪಯೋಗಿಸುವ ವಿಚಾರದಲ್ಲಿ ಶಾಕ್ಯರಿಗೂ, ಕೋಲಿಯರಿಗೂ ವಿವಾದವು ಹುಟ್ಟಿ, ಅದರ ಪರಿಣಾಮವಾಗಿ ಯುದ್ಧವು ಕೈಗಟ್ಟುವಂತಿದ್ದಿತು. (ಶಾಕ್ಯಮುನಿಯು ಬುದ್ಧನಾದ ಮೇಲೆ ಮೊದಲನೆಯ ಮಳೆಗಾಲವನ್ನು ವಾರಣಾಸಿಯಲ್ಲಿಯೂ, ಆ ಬಳಿಕ ಮೂರು ಮಳೆಗಾಲಗಳನ್ನು ವೇಣುವನದಲ್ಲಿಯೂ ಕಳೆದು, ಐದನೆಯದನ್ನು ವೈಶಾಲೀ ನಗರದಲ್ಲಿ ಕಳೆಯಲು ಬಂದಿದ್ದನು. ಮಹಾವನವೆಂಬ ಉದ್ಯಾನದಲ್ಲಿದ್ದ ಕೂಟಾಗಾರವೆಂಬ ವಿಹಾರದಲ್ಲಿ ಆತನು ಇಳಿದಿದ್ದನು.) ಕಪಿಲವಸ್ತು

**ಶಾಕ್ಯ ಕೋಲಿಯರ ವಿವಾದ ಪರಿಹಾರ**

ನಗರಕ್ಕೆ ಬಂದು ತಮ್ಮ ವಿವಾದವನ್ನು ಬಗೆಹರಿಸಬೇಕೆಂದು ಉಭಯಪಕ್ಷದವರೂ ಬುದ್ಧನನ್ನು ಬೇಡಿದರು. ಬುದ್ಧನು ಅವರ ಪ್ರಾರ್ಥನೆಯನ್ನು ಲಾಲಿಸಿ ಕಪಿಲವಸ್ತು ನಗರಕ್ಕೆಹೋಗಿ ವಿವಾದ ವನ್ನು ತೀರ್ಮಾನಿಸಿ ಮತ್ತೆ ವೈಶಾಲಿಗೆ ಹೋದನು. ಆಗ ಐನೂರು ಮಂದಿ ಬೌದ್ಧ ಮತಕ್ಕೆ ಸೇರಿದರು.

**ಸ್ತ್ರೀಯರಿಗೆ ಭಿಕ್ಷುಣೀದೀಕ್ಷೆ**

ಬುದ್ಧನು ವೈಶಾಲೀ ನಗರಕ್ಕೆ ಹೋದ ಬಳಿಕ ಸ್ವಲ್ಪಕಾಲ ದಲ್ಲಿಯೇ ಶುದ್ಧೋದನನ ಮರಣ ಕಾಲವು ಸಮಿಾಪಿಸಿದುದರಿಂದ ಮತ್ತೆ ಕಪಿಲವಸ್ತುವಿಗೆ ಬರಬೇಕಾಯಿತು. ಬುದ್ಧನು ಧರ್ಮಬೋಧೆ ಮಾಡಿದ ಮೇಲೆ ಶುದ್ಧೋದನನು ಶಾಂತಿಯಿಂದ ಮರಣ ಹೊಂದಿದನು. ಶುದ್ಧೋದನನಿಗೆ ಆಗ ತೊಂಬತ್ತೇಳು ವರುಷ ವಯಸ್ಸು. ಮಳೆಗಾಲ ಪ್ರಯುಕ್ತವಾದ ನಾಲ್ಕು ತಿಂಗಳುಗಳ ಅವಧಿಯು ಇನ್ನೂ ಪೂರೈಸಿರಲಿಲ್ಲವಾದ ಕಾರಣ, ಬುದ್ಧನು ಮತ್ತೆ ವೈಶಾಲೀ ನಗರಕ್ಕೆ ಹಿಂತಿರುಗಿದನು. ತನ್ನ ಮಗನಾದ ನಂದನು ಭಿಕ್ಷುದೀಕ್ಷೆಯನ್ನು ವಹಿಸಿ ಹೊರಟುಹೋದುದೇ ಮಹಾರಾಣಿ ಮಹಾ ಪ್ರಜಾಪತೀದೇವಿಗೆ ಸಹಿಸಲಶಕ್ಯವಾದಷ್ಟು ದುಃಖವನ್ನುಂಟುಮಾಡಿ ದ್ದಿತು. ಪತಿಯು ಮೃತನಾದಮೇಲಂತೂ, ಅವಳು ಅರಮನೆಯಲ್ಲಿರ ಲಾರದೆ ಹೋದಳು. ತನಗೂ ಯಶೋಧರಾದೇವಿ ಮುಂತಾದವರಿಗೂ ದೀಕ್ಷಾಪ್ರದಾನಮಾಡಿ ಭಿಕ್ಷುಣಿಯರಿಗೂ ಸಂಘದಲ್ಲಿ ಸ್ಥಾನವನ್ನು ಕಲ್ಪಿಸಬೇಕೆಂದು ಆಕೆಯು ಬುದ್ಧನಿಗೆ ಮೂರುಸಲ ಹೇಳಿ ಕಳುಹಿಸಿದಳು. ಸ್ತ್ರೀಯರು ಭಿಕ್ಷುಣಿಯರಾಗಿ ಸೇರಿದರೆ ಭಿಕ್ಷುಗಳ ನಿಯಮಕ್ಕೆ ಭಂಗಬರಬಹುದೆಂಬ ಕಾರಣದಿಂದ ಬುದ್ಧನು ಆ ರೀತಿ ಮಾಡುವುದು ಸಾಧ್ಯವಿಲ್ಲವೆಂದು ಮೂರುಸಲವೂ ಹೇಳಿಕಳುಹಿಸಿದನು.* ಮಹಾ

---

* ಬುದ್ಧನು ಆರೀತಿ ಹೇಳಿಕಳುಹಿಸಿದುದಕ್ಕೆ ಪುರುಷರಿಗಿಂತ ಸ್ತ್ರೀಯರು ಕಡಿಮೆಯೆಂಬ ಭಾವನೆಯು ಬುದ್ಧನಿಗಿದ್ದುದೇನೂ ಕಾರಣವಲ್ಲ.

ಪ್ರಜಾಪತೀದೇವಿಯು ಅಲ್ಲಿಗೂ ನಿರಾಶಳಾಗಲಿಲ್ಲ. ಯಶೋಧರಾದೇವಿ ಮುಂತಾದವರೊಡನೆ ಆಕೆಯು ಕಪಿಲವಸ್ತು ನಗರದಿಂದ ವೈಶಾಲಿಗೆ ನಡೆದುಹೋಗಿ ಕೂಟಾಗಾರವನ್ನು ಸೇರಿದಳು. ಆಕೆಯೂ, ಯಶೋಧರಾದೇವಿಯೇ ಮುಂತಾದವರೂ ಕೇಶಖಂಡನ ಮಾಡಿಸಿಕೊಂಡು, ಕಾವಿಯ ವಸ್ತ್ರಗಳನ್ನು ಧರಿಸಿ ಬಂದಿದ್ದರು. ಅರಮನೆಯಲ್ಲಿ ಅಮೃತಶಿಲೆಯ ಮೆಟ್ಟಲುಗಳಮೇಲೆ ಮಹಡಿಯನ್ನೇರುವುದು ಕೂಡ ಆಯಾಸಕರವಾಗಿ ತೋರುತ್ತಿದ್ದ ಅಂತಃಪುರದ ಸ್ತ್ರೀಯರು ಕಲ್ಲುಗಳಿಂದ ತುಂಬಿದ ನೆಲದಮೇಲೆ ನಡೆದುಬಂದುದನ್ನೂ, ಅವರ ಕಾಲುಗಳಿಂದ ರಕ್ತವು ಹರಿಯುತ್ತಿದ್ದುದನ್ನೂ ಕಂಡು ಆನಂದನು ಕಂಬನಿದುಂಬಿದನು. ಆತನು ಅವರನ್ನು ಆದರದಿಂದ ಬರಮಾಡಿಕೊಂಡು ಅವರಿಗೆ ದೀಕ್ಷೆಕೊಡುವಂತೆ ಬುದ್ಧನನ್ನು ಪ್ರಾರ್ಥಿಸಿದನು. ಬುದ್ಧನು ಅದಕ್ಕೆ ಸಮ್ಮತಿಸದಿರಲು ಆನಂದನು, "ಗುರುವೆ! ಬುದ್ಧರು ಜನ್ಮವೆತ್ತುವುದು ಗಂಡಸರ ಉದ್ಧಾರಕ್ಕೆ ಮಾತ್ರವೇ? ಹೆಂಗಸರೂ ಭಿಕ್ಷುಣಿಯರಾಗಿ ಉದ್ಧಾರವಾಗಕೂಡದೇನು?" ಎಂದು ಕೇಳಿದನು. ಕೊನೆಗೆ ಬುದ್ಧನು ಸ್ತ್ರೀಯರಿಗೆ ಭಿಕ್ಷುಣೀ ದೀಕ್ಷೆಯನ್ನು ಕೊಡಲು ಸಮ್ಮತಿಸಿ, "ಆನಂದ! ಸ್ತ್ರೀಯರು ಸೇರದೆ ಹೋಗಿದ್ದರೆ ಸಂಘವು

---

ಆತನಿಗೆ ಆ ಬಗೆಯ ಭಾವನೆಯೇ ಇರಲಿಲ್ಲ. ಇದಕ್ಕೊಂದು ನಿದರ್ಶನವನ್ನೂ ಹೇಳಬಹುದು: ಪ್ರಸೇನಜಿತು ಮಹಾರಾಜನು ಒಂದುಸಲ ಬುದ್ಧನ ಬಳಿಗೆ ಹೋಗಿದ್ದಾಗ್ಗೆ ಆತನ ಪತ್ನಿಯಾದ ಮಲ್ಲಿಕಾದೇವಿಯು ಹೆಣ್ಣುಮಗುವನ್ನು ಹೆತ್ತಳೆಂದು ವರ್ತಮಾನ ಬಂದಿತಂತೆ. ತನಗೆ ಗಂಡುಮಗುವಾಗಲಿಲ್ಲವೆಂದು ಆತನು ಖಿನ್ನಮನಸ್ಕನಾದನಂತೆ. ಆಗ ಬುದ್ಧನು "ಯಾವ ಹೆಂಗಸು ಮೇಧಾವಿಯೂ ಶೀಲವತಿಯೂ, ಮಾವನಲ್ಲಿ ದೇವಭಾವನೆಯುಳ್ಳವಳೂ (ಶ್ವಶುರದೇವಾ), ಪತಿವ್ರತೆಯೂ ಆಗಿರುವಳೋ ಆ ಹೆಂಗಸು ಪುರುಷನಿಗಿಂತಲೂ ಶ್ರೇಷ್ಠಳು" ಎಂದು ಹೇಳಿದನಂತೆ. (ಮಲ್ಲಿಕಾ ಸುತ್ತವನ್ನು ನೋಡಿ)

ಸಾವಿರ ವರುಷಕಾಲ ಬಾಳುತ್ತಿದ್ದಿತು. ಮುಂದೆ ಸಂಘವು ಬೆಳಗುವುದು ಐನೂರೇ ವರುಷಗಳು" ಎಂದನು. ಮಹಾಪ್ರಜಾಪತೀ ದೇವಿಯೂ, ಯಶೋಧರಾದೇವಿಯೂ, ಇತರ ಐನೂರು ಮಂದಿ ಸ್ತ್ರೀಯರೂ ಭಿಕ್ಷುಣಿಯರಾದರು.

**ಮುಂದಿನ ಹದಿನೈದು ಮಳೆಗಾಲಗಳು**

ಬುದ್ಧನು ಮುಂದೆ ಆರನೆಯ ಮಳೆಗಾಲವನ್ನು ಮಂಕುಲ ಪರ್ವತದಲ್ಲಿ ಕಳೆದು ರಾಜಗೃಹಕ್ಕೆ ಹೋದನು. ಬಿಂಬಿಸಾರನ ಹೆಂಡತಿಯಾದ ಕ್ಷೇಮಾ ಎಂಬಾಕೆಗೆ ತಾನು ಸ್ಫುರದ್ರೂಪಿಣಿಯೆಂಬ ಗರ್ವವಿದ್ದಿತು. ಆಕೆಯು ತನ್ನ ಕಾಲವನ್ನೆಲ್ಲ ದೇಹವನ್ನಲಂಕರಿಸಿಕೊಳ್ಳುವುದರಲ್ಲಿಯೇ ಕಳೆಯುತ್ತಿದ್ದಳು. ಬುದ್ಧನು ಅದಕ್ಕಾಗಿ ಮರುಕಪಟ್ಟು ರೂಪವು ಅಶಾಶ್ವತವೆಂಬುವನ್ನು ಅವಳಿಗೆ ಹೃದಯಂಗಮವಾಗಿ ತಿಳಿಸಿದನು.* ಅವಳಿಗೆ ವೈರಾಗ್ಯವು ಹುಟ್ಟಿ ಅವಳು ಬುದ್ಧನ ಶಿಷ್ಯೆಯಾದಳು. ಏಳನೆಯ ಮಳೆಗಾಲವು ತ್ರಯಸ್ತ್ರಿಂಶ ಭವನದಲ್ಲಿಯೂ, ಎಂಟನೆಯ ಮಳೆಗಾಲವು ಸುಂಸುಮಾರ ಗಿರಿಯಲ್ಲಿಯೂ ಕಳೆದುವು. ಬೋಧಿಯೆಂಬ ರಾಜಕುಮಾರನು ತಾನು ಕಟ್ಟಿಸಿದ್ದ ಅರಮನೆಯ ಪ್ರವೇಶ ಮಹೋತ್ಸವಕ್ಕೆ ಬುದ್ಧನು ಬರಬೇಕೆಂದು ಪ್ರಾರ್ಥಿಸಿ, ಅರಮನೆಯ ಸಮಸ್ತ ಭಾಗಗಳಿಗೂ ಬಿಳಿಯ ಬಟ್ಟೆಯಿಂದ ಅಲಂಕಾರ ಮಾಡಿಸಿದ್ದನು. ನೆಲಕ್ಕೆ ಹಾಸಿದ್ದ ಬಿಳಿಯ ಬಟ್ಟೆಯಮೇಲೆ ಬುದ್ಧನು ಹೆಜ್ಜೆಯನ್ನಿಡಲೊಲ್ಲದೆ, "ಕಾವಿಯ ಬಟ್ಟೆಯೊಂದರ ಹೊರತು ಉಳಿದ ಯಾವ ಬಟ್ಟೆಯಮೇಲೆ ಕಾಲಿಡುವುದಕ್ಕೂ ಭಿಕ್ಷುಗಳಿಗೆ ಅಧಿಕಾರವಿಲ್ಲ" ಎಂದು

---

* ಬುದ್ಧನು ಆಕೆಗಿಂತ ಸಹಸ್ರಾರುಪಾಲು ಸುಂದರಿಯರಾದ ಅಪ್ಸರೆಯರನ್ನು ಅವಳು ಕಾಣುವಂತೆಯೂ, ಆ ಅಪ್ಸರೆಯರಿಗೆ ವೃದ್ಧಾಪ್ಯವು ಬಂದು ಅವರ ರೂಪವು ಅಳಿದುಹೋದುದು ಆಕೆಗೆ ಗೋಚರಿಸುವಂತೆಯೂ, ಅತಿಮಾನುಷಕ್ರಿಯೆಯೊಂದನ್ನು ತೋರಿಸಿ ಆಕೆಗೆ ವಿರಕ್ತಿಯನ್ನುಂಟುಮಾಡಿದನೆಂದು ಬೌದ್ಧಗ್ರಂಥಗಳಲ್ಲಿ ಹೇಳಿದೆ.

ತಿಳಿಸಿ, ಬೋಧಿಯು ಬಿಳಿಯ ಬಟ್ಟೆಯನ್ನು ತೆಗೆಯಿಸಿದಮೇಲೆ ಒಳಕ್ಕೆ ಹೋದನು.

ಬುದ್ಧನು ಒಂಬತ್ತನೆಯ ವರ್ಷಾಕಾಲವನ್ನು ಕೌಶಾಂಬಿಯ ಘೋಷಿತಾರಾಮದಲ್ಲಿ ಕಳೆದನು. ಘೋಷಿತಾರಾಮವು ಕೌಶಾಂಬಿಯ ಒಡೆಯನಾದ ಉದಯನರಾಜನ ಮೂವರು ಮಂತ್ರಿಗಳಲ್ಲೊಬ್ಬನಾದ ಘೋಷಿತನೆಂಬವನು ಸಮರ್ಪಿಸಿದ ವಿಹಾರ. ಹತ್ತನೆಯ ಮಳೆಗಾಲವನ್ನು ಪಾರಿಲೇಯಕ ವನಖಂಡದಲ್ಲಿಯೂ, ಹನ್ನೊಂದನೆಯ ಮಳೆಗಾಲವನ್ನು ನಾಲಾಬ್ರಾಹ್ಮಣ ಗ್ರಾಮದಲ್ಲಿಯೂ, ಹನ್ನೆರಡನೆಯದನ್ನು ವೈರಂಜಾದಲ್ಲಿಯೂ, ಹದಿಮೂರನೆಯದನ್ನು ಚಾಲಿಯ ಪರ್ವತದಲ್ಲಿಯೂ, ಹದಿನಾಲ್ಕನೆಯದನ್ನು ಶ್ರಾವಸ್ತಿಯ ಜೇತವನದಲ್ಲಿಯೂ ಬುದ್ಧನು ಕಳೆದನು. ಹದಿನೈದನೆಯ ವರ್ಷಾಕಾಲವನ್ನು ಕಳೆಯಲು ಬುದ್ಧನು ಕಪಿಲವಸ್ತುವಿಗೆ ಹೋದಾಗ, ಯಶೋಧರೆಯ ತಂದೆಯು ತನ್ನ ಮಗಳು ಮಹಾರಾಣಿಯಾಗುವುದು ತಪ್ಪಿಹೋಗಿ ಭಿಕ್ಷುಣಿಯಾಗಬೇಕಾಯಿತೆಂಬ ಕ್ರೋಧದಿಂದ ಭಿಕ್ಷುಗಳೆದುರಿಗೆ ಬುದ್ಧನನ್ನು ಮನಸ್ವಿಯಾಗಿ ನಿಂದಿಸಿದನು. ಬುದ್ಧನು ಮರುಮಾತನಾಡದೆ ಆತನ ಬೈಗುಳಗಳನ್ನೆಲ್ಲ. ಕೇಳಿ ಶಾಂತನಾಗಿಯೇ ಇದ್ದು, "ಬೈದವರನ್ನು ನಿಂದಿಸದೆ ಸುಮ್ಮನಿದ್ದರೆ ದ್ವಿಗುಣವಾದ ಜಯಲಾಭವನ್ನು ಪಡೆದಂತೆ" ಎಂದನು. ಬುದ್ಧನ ತಾಳ್ಮೆಗೆ ಅನೇಕ ನಿದರ್ಶನಗಳುಂಟು. ಒಮ್ಮೆ ಸುನಕ್ಷತ್ರನೆಂಬವನು ಬುದ್ಧನು ವಿಧಾಯಕ ಮಾಡಿದ ದೀಕ್ಷಾನಿಯಮಗಳನ್ನು ನೆರವೇರಿಸಲಾರದೆ, "ಬುದ್ಧನು ಅಜ್ಞಾನಿ. ನಮಗಿಂತ ಹೆಚ್ಚಾಗಿ ಅವನಿಗೇನೂ ತಿಳಿಯದು. ಅವನೊಬ್ಬ ವೇಷಧಾರಿ" ಎಂದು ಆಕ್ಷೇಪಿಸಿದನಂತೆ. ಬುದ್ಧನು ಅದನ್ನು ಕೇಳಿ, "ಪಾಪ! ಅದು ಅವನ ತಪ್ಪಲ್ಲ. ಅವನ ಕೋಪದ ತಪ್ಪು. ಕೋಪವು ಕುಣಿಸಿದರೆ ಅವನೇನು ಮಾಡಿಯಾನು?" ಎಂದು ಶಾಂತಭಾವದಿಂದ ಹೇಳಿದನಂತೆ.

ಬುದ್ಧನು ಹದಿನಾರನೆಯ ಮಳೆಗಾಲವನ್ನು ಆಲವಿಯಲ್ಲಿಯೂ ಹದಿನೇಳನೆಯದನ್ನು ರಾಜಗೃಹದಲ್ಲಿಯೂ, ಹದಿನೆಂಟನೆಯದನ್ನೂ ಹತ್ತೊಂಬತ್ತನೆಯದನ್ನೂ ಚಾಲಿಯ ಪರ್ವತದಲ್ಲಿಯೂ, ಇಪ್ಪತ್ತನೆಯದನ್ನು ಶ್ರಾವಸ್ತಿಯಲ್ಲಿಯೂ ಕಳೆದನು. ಆ ಬಳಿಕ ಉಳಿದ ಇಪ್ಪತ್ತೈದು ಮಳೆಗಾಲಗಳನ್ನು ಆತನೆಲ್ಲಿ ಕಳೆದನೆಂಬುದನ್ನು ಯಾವ ಗ್ರಂಥವೂ ಸೂಚಿಸಿಲ್ಲ. ಅವುಗಳನ್ನು ಶ್ರಾವಸ್ತಿಯ ಜೇತವನದಲ್ಲಿ ಕಳೆದನೆಂದು ಕೆಲವರು ಅಭಿಪ್ರಾಯಪಡುತ್ತಾರೆ.

**ವಿರೋಧಿಗಳು**

ಬುದ್ಧನು ಹಿಡಿದ ಧರ್ಮಪ್ರಚಾರ ಕಾರ್ಯವು ನಿರ್ವಿಘ್ನವಾಗಿ ನೆರವೇರಲಿಲ್ಲ. ಆತನಿಗೆ ಹಲವರು ವಿರೋಧಿಗಳೂ ಒದಗಿ ಕಿರುಕುಳಕೊಟ್ಟರು. ಅವರಲ್ಲಿ ಸಾರಿಪುತ್ರನ ಪೂರ್ವದ ಗುರುವಾಗಿದ್ದ ಸಂಜಯ ಮುಂತಾದ ಆರುಮಂದಿಗಳೂ, ಅವರ ಶಿಷ್ಯರೂ ಬಹು ಮುಖ್ಯರು. ಅವರು ಮಾತ್ರವೇ ಅಲ್ಲದೆ, ಬುದ್ಧನು ಬೋಧಿಸಿದ ತತ್ತ್ವಗಳು ಸರಿಬೀಳದವರೆಲ್ಲರೂ ಅವನಿಗೆ ತೊಂದರೆಯನ್ನುಂಟುಮಾಡಿದರು. ಆದರೆ ಆತನ ಶಕ್ತಿಸಾಮರ್ಥ್ಯಗಳ ಮುಂದೆ ಯಾರ ಪ್ರಯತ್ನವೂ ಸಾಗಲಿಲ್ಲ. ಅವನ ಪ್ರತಿಪಕ್ಷದವರು ಕೆಲವು ವೇಳೆ ಬಿರುನುಡಿಗಳಿಂದ ಅವನ ಮನಸ್ಸನ್ನು ನೋಯಿಸುವ ಯೋಚನೆಮಾಡುತ್ತಿದ್ದರು. ಇದಕ್ಕೆ ಒಂದು ನಿದರ್ಶನವನ್ನೂ ಇಲ್ಲಿ ಸೂಚಿಸಬಹುದಾಗಿದೆ. ಬುದ್ಧನು ನಾಲಾ ಬ್ರಾಹ್ಮಣ ಗ್ರಾಮದಲ್ಲಿ ಭಿಕ್ಷಾಟನಕ್ಕೆ ಹೊರಟಾಗ ಭಾರದ್ವಾಜನೆಂಬೊಬ್ಬ ಬ್ರಾಹ್ಮಣನು ಆತನನ್ನು ಧಿಕ್ಕರಿಸಿ ಮಾತನಾಡುತ್ತ, "ನನ್ನ ಭೂಮಿಯನ್ನು ನಾನು ಉತ್ತಿದ್ದೇನೆ. ಬೀಜವನ್ನು ಬಿತ್ತಿದ್ದೇನೆ. ಧಾನ್ಯವನ್ನು ಬೆಳೆ ಮಾಡಿದ್ದೇನೆ. ಹೀಗೆ ನಾನು ದೇಹಶ್ರಮದಿಂದ ಕೆಲಸಮಾಡಿ ಆಹಾರವನ್ನು ಸಂಪಾದಿಸಿದ್ದೇನೆ. ಗೌತಮ! ನೀನು ಯಾವ ಕಷ್ಟವನ್ನೂ ಪಟ್ಟಿಲ್ಲ. ನಿನಗೆ ಊಟಕ್ಕೆ ಅಧಿಕಾರವೆಲ್ಲಿದೆ? ನೀನು ಉಳಲಿಲ್ಲ; ಬಿತ್ತಲಿಲ್ಲ" ಎಂದು ಹೀಯಾಳಿಸಿದನು. ಬುದ್ಧನು ಶಾಂತಿಗೆಡದೆ, "ನಾನೂ ಉತ್ತಿರುವೆನು" ಎಂದನು.

ಭಾರದ್ವಾಜನು ಆಶ್ಚರ್ಯದಿಂದ "ಹಾಗಾದರೆ ನಿನ್ನ ನೇಗಿಲೆಲ್ಲಿ? ನೊಗವೆಲ್ಲಿ? ಎತ್ತುಗಳೆಲ್ಲಿ?" ಎಂದು ಕೇಳಿದನು. ಆಗ ಬುದ್ಧನು "ಧರ್ಮ ಶ್ರದ್ಧೆಯೇ ನಾನು ಬಿತ್ತುವ ಬೀಜ. ಪಾಪಕಾರ್ಯಗಳಿಗಾಗಿ ಪಡುವ ಪಶ್ಚಾತ್ತಾಪವೇ ಅದಕ್ಕೆ ಬೇಕಾದ ಮಳೆಯ ನೀರು. ವಿವೇಕವೇ ನನ್ನ ನೇಗಿಲು. ಸತ್ಕಾರ್ಯ ತತ್ಪರತೆಯೇ ಎತ್ತುಗಳು. ತತ್ತ್ವಸಾಕ್ಷಾತ್ಕಾರವೇ ಅವಿದ್ಯಾ ಪಾಪಗಳೆಂಬ ಕಳೆಗಳನ್ನು ನಾನು ಕತ್ತರಿಸುವ ಕುಡುಗೋಲು. ನಿರ್ವಾಣವೇ ನಾನು ಕಾಣುವ ಸುಗ್ಗಿ" ಎಂದು ಉತ್ತರ ಹೇಳಿದನು. ಭಾರದ್ವಾಜನಿಗೆ ಈ ಮಾತುಗಳನ್ನು ಕೇಳಿ ಜ್ಞಾನೋದಯವಾಯಿತು. ಅವನು ಪಶ್ಚಾತ್ತಾಪಪಡುತ್ತ ಬುದ್ಧನಿಗೆ ನಮಸ್ಕರಿಸಿದನು.

**ದೇವದತ್ತನ ದಾಂಧಲೆ**

ಬುದ್ಧನಿಗೆ ದೇವದತ್ತನಿಂದುಂಟಾದ ತೊಂದರೆಗಳು ಇತರ ವಿರೋಧಿಗಳಿಂದುಂಟಾದವುಗಳನ್ನೆಲ್ಲ ಮೀರಿಸಿದುವು. ದೇವದತ್ತನು ಬಾಲ್ಯದಿಂದಲೂ ಬುದ್ಧನ ದ್ವೇಷಿಯಾಗಿದ್ದುದನ್ನು ನಿದರ್ಶನಗಳೊಡನೆ ಹಿಂದೆಯೇ ತಿಳಿಸಲಾಗಿದೆ. ಅವನು ಭಿಕ್ಷುದೀಕ್ಷೆಯನ್ನು ವಹಿಸಿದುದು ಕೂಡ, ಸಮಯ ನಿರೀಕ್ಷೆಮಾಡಿಕೊಂಡಿದ್ದು ಬುದ್ಧನ ಸ್ಥಾನವನ್ನಾಕ್ರಮಿಸಬೇಕೆಂಬ ಸಂಕಲ್ಪದಿಂದಲೇ. ಬುದ್ಧನ ಖ್ಯಾತಿಯೂ, ಪ್ರಾಬಲ್ಯವೂ ದಿನದಿನವೂ ವೃದ್ಧಿಯಾಗುತ್ತ ಹೋದಂತೆಲ್ಲ ದೇವದತ್ತನ ಆಶೆಯು ಬಲಿಯುತ್ತ ಬಂದಿತು. ಒಂದು ದಿನ ದೇವದತ್ತನು ಬುದ್ಧನನ್ನು ಕುರಿತು, "ಭಗವನ್! ನಿಮ್ಮ ವೃದ್ಧಾಪ್ಯವು ಹೆಚ್ಚುತ್ತಿದೆ. ಇನ್ನು ಸಂಘದ ಪ್ರಮುಖಪದವಿಯನ್ನು ನನಗೆ ವಹಿಸಿ ವಿಶ್ರಾಂತಿ ಹೊಂದಬಹುದು" ಎಂದು ಹೇಳಿದನು. ಬುದ್ಧನು ಯಾವ ಉತ್ತರವನ್ನೂ ಹೇಳದೆ ಮೌನದಿಂದಿದ್ದನು. ದೇವದತ್ತನು ಅಂದಿನಿಂದ ಅಸಮಾಧಾನಹೊಂದಿ, ಬಿಂಬಿಸಾರನ ಮಗನಾದ ಅಜಾತಶತ್ರುವಿನೊಡನೆ ಸ್ನೇಹವನ್ನು ವೃದ್ಧಿಪಡಿಸತೊಡಗಿದನು. ಕುಟಿಲವೃತ್ತಿಯವನಾದ ದೇವದತ್ತನ ಸ್ನೇಹವನ್ನು ಬಿಡಬೇಕೆಂದು

ಬಿಂಬಿಸಾರನು ಮಗನಿಗೆ ಬುದ್ಧಿಹೇಳಿದುದು ವ್ಯರ್ಥವಾಯಿತು. ದೇವದತ್ತನೂ ಅಜಾತಶತ್ರುವೂ ಒಂದಾದರು. ಬಿಂಬಿಸಾರನನ್ನು ಕೊಂದು ಅಜಾತಶತ್ರುವು ಸಿಂಹಾಸನವನ್ನೇರತಕ್ಕದೆಂದೂ, ಬುದ್ಧನನ್ನು ಕೊಂದು ದೇವದತ್ತನು ಸಂಘದ ಪ್ರಮುಖಸ್ಥಾನವನ್ನಲಂಕರಿಸತಕ್ಕದೆಂದೂ ಒಪ್ಪಂದವಾಯಿತು. ಅಜಾತಶತ್ರುವು ತಂದೆಯನ್ನು ಕೊಲ್ಲಿಸುವ ಪ್ರಯತ್ನವು ವಿಫಲವಾಗಿ ಬಿಂಬಿಸಾರನು ತಾನಾಗಿಯೇ ಸಿಂಹಾಸನತ್ಯಾಗಮಾಡಿ ಮಗನಿಗೆ ರಾಜ್ಯವನ್ನು ವಹಿಸಿದನು. ಅತ್ತ ಬುದ್ಧನನ್ನು ಕೊಲ್ಲುವುದಕ್ಕಾಗಿ ದೇವದತ್ತನು ಹೊಸ ದೊರೆಯ ಸಹಾಯದಿಂದ ಕಳುಹಿಸಿದ ಕೊಲೆಪಾತಕರು ಕೂಡ ಶಾಂತಮೂರ್ತಿಯಾದ ಬುದ್ಧನ ವರ್ಚಸ್ಸನ್ನು ಕಂಡು ಬೆರಗಾಗಿ, ಆತನ ಮೇಲೆ ಕತ್ತಿಯನ್ನೆತ್ತಲಾರದೆ ತಪ್ಪನ್ನೊಪ್ಪಿಕೊಂಡು ಕ್ಷಮೆಯನ್ನು ಬೇಡಿದರು. ಬಿಂಬಿಸಾರನು ಸ್ವತಂತ್ರನಾಗಿದ್ದರೆ ಮತ್ತೆ ರಾಜ್ಯಲೋಭದಿಂದ ಸಿಂಹಾಸನವನ್ನೇರಬಹುದೆಂದು ಮುಂತಾಗಿ ಅಜಾತಶತ್ರುವಿಗೆ ಬೋಧಿಸಿ ದೇವದತ್ತನು ಆ ವೃದ್ಧನನ್ನು ಸೆರೆಯಲ್ಲಿಡಿಸಿ, ಅವನಿಗೆ ಆಹಾರವೂ ದೊರೆಯದಂತೆ ಮಾಡಿದನು. ಅಜಾತಶತ್ರುವಿನ ತಾಯಿಯು ಯಾರೂ ಕಾಣದಂತೆ ತನ್ನ ಪತಿಗೆ ಆಹಾರವನ್ನು ಒದಗಿಸುತ್ತಿದ್ದಳು. ಮುಂದೆ ಅದಕ್ಕೂ ಅವಕಾಶವಿಲ್ಲದೆ ಹೋಯಿತು. ತನ್ನ ಆಜ್ಞಾಭಂಗವಾಯಿತೆಂಬ ರೋಷದಲ್ಲಿ ಅಜಾತಶತ್ರುವು ಆಹಾರವಿಲ್ಲದಿದ್ದರೆ ಮುದುಕನ ಗತಿಯೇನೆಂಬುದನ್ನೂ ಯೋಚಿಸಲಿಲ್ಲ.

ಬುದ್ಧನು ಸಾಯುವಂತೆ ಮಾಡುವ ಸಂಕಲ್ಪದಿಂದ ನಾಲಾಗಿರಿಯೆಂಬ ಚಂಡಮದಗಜದ ಮಾವಟಿಗನನ್ನು ವಶಪಡಿಸಿಕೊಂಡು ಅವನು ಆನೆಗೆ ಮದ್ಯಪಾನಮಾಡಿಸಿ ರೇಗಿಸಿ ಬುದ್ಧನು ಬೀದಿಯಲ್ಲಿ ಬರುವಾಗ್ಗೆ ಅದು ಅವನನ್ನು ತುಳಿದುಹಾಕುವಂತೆ ಬಿಟ್ಟುಬಿಡಬೇಕೆಂದು ದೇವದತ್ತನು ಕಟ್ಟುಮಾಡಿದನು. ಘೀಳಿಡುತ್ತ ಬಂದ ಆನೆಯು ಬುದ್ಧನ ಸೌಮ್ಯಾಕೃತಿಯಿಂದಲೂ ಆತನು ಸಂಬೋಧಿಸಿದ

ಸವಿನುಡಿಯಿಂದಲೂ ರೋಷವನ್ನು ಬಿಟ್ಟು ಮಂಡಿಯೂರಿ ಸೊಂಡಿಲನ್ನು ಚಾಚಿತು. ಬುದ್ಧನು ಅದರ ತಲೆಯಮೇಲೆ ಅಂಗೈಯನ್ನಿಟ್ಟು ಸವರುತ್ತಿರುವಲ್ಲಿ ಅದು ಆ ಸಿದ್ಧಹಸ್ತನ ಸ್ಪರ್ಶಸುಖವನ್ನನುಭವಿಸುತ್ತ ಸುಮ್ಮನೆ ಮಲಗಿದ್ದಿತು. ಹಿಂದೊಮ್ಮೆ ಯಾವುದೋ ದೇವತೆಗೆ ಬಲಿಕೊಡಲು ಜನರು ಒಂದು ಕುರಿಯಮಂದೆಯನ್ನು ಅಟ್ಟಿಕೊಂಡು ಹೋಗುತ್ತಿರುವಾಗ್ಗೆ ಕಾಲಿನಿಂದ ರಕ್ತವು ಹರಿಯುತ್ತಿದ್ದ ಕುರಿಮರಿಯೊಂದನ್ನು ಎತ್ತಿ ಎದೆಗಪ್ಪಿಕೊಂಡು, ಅದರ ಗಾಯಕ್ಕೆ ಔಷಧಹಾಕಿ ಬಟ್ಟೆಯನ್ನು ಕಟ್ಟಿ, ಅವರೆಲ್ಲರಿಗೂ ಪ್ರಾಣಿದಯೆಯನ್ನು ಬೋಧಿಸಿ ಕುರಿಗಳ ವಧೆಯನ್ನು ತಪ್ಪಿಸಿದ ಕಾರುಣ್ಯ ಮೂರ್ತಿಯು ಬುದ್ಧನು. ಆತನನ್ನು ಕಂಡು ಆನೆಯ ರೋಷವೂ ಶಾಂತವಾಯಿತು. ತನ್ನ ಎರಡನೆಯ ಪ್ರಯತ್ನವೂ ವಿಫಲವಾದುದನ್ನು ಕಂಡು ದೇವದತ್ತನು ಬೆಟ್ಟದ ಮೇಲಿನಿಂದ ಬಂಡೆಯನ್ನುರುಳಿಸಿ ಬುದ್ಧನನ್ನು ಕೊಲ್ಲಲು ಮತ್ತೊಂದು ಪ್ರಯತ್ನಮಾಡಿದನು. ಆತನು ಆಗಲೂ ಕೃತಕಾರ್ಯನಾಗಲಿಲ್ಲ.

ಕೊನೆಗೆ ದೇವದತ್ತನು ಸಂಘದಲ್ಲಿ ಒಡಕು ಹುಟ್ಟಿಸಲು ಅನುವಾದನು. ಆಹಾರ ಮುಂತಾದ ವಿಚಾರಗಳಲ್ಲಿ ಭಿಕ್ಷುಭಿಕ್ಷುಣಿಯರು ಅನುಸರಿಸಬೇಕಾದ ನಿಯಮಗಳನ್ನು ಮತ್ತಷ್ಟು ಕಟ್ಟುನಿಟ್ಟು ಮಾಡಬೇಕೆಂದು ಅವನು ಬುದ್ಧನನ್ನು ಪ್ರಾರ್ಥಿಸಿದನು. ಗೃಹಸ್ಥರು ಕೊಟ್ಟ ಹಳೆಯ ಬಟ್ಟೆಗಳನ್ನು ಮಾತ್ರವೇ ಅವರು ಉಪಯೋಗಿಸಬೇಕೆಂದೂ, ಗೃಹಸ್ಥರಿಂದ ಹೊಸ ಬಟ್ಟೆಗಳನ್ನು ಅವರು ಸ್ವೀಕರಿಸಕೂಡದೆಂದೂ, ಅವರು ಔತಣಗಳಿಗೆ ಹೋಗಕೂಡದೆಂದೂ, ಅವರು ಪಟ್ಟಣಗಳಿಗೂ, ಗ್ರಾಮಗಳಿಗೂ ಕಾಲಿಡದೆ ಮರಗಳ ಕೆಳಗೆ ವಾಸಮಾಡಬೇಕೆಂದೂ ವಿಧಾಯಕ ಮಾಡಬೇಕೆಂಬುದು ದೇವದತ್ತನ ಅರಿಕೆ. ಗೌತಮಬುದ್ಧನು ಅದಕ್ಕೆ ಸಮ್ಮತಿಸಲಿಲ್ಲ. ದೇವದತ್ತನು ಅದಕ್ಕಾಗಿ ಮುನಿದು ತನ್ನ ಅನುಯಾಯಿಗಳಾದ ಐನೂರು ಮಂದಿ ಭಿಕ್ಷುಗಳೊಡನೆ ಗಯಾಶೀರ್ಷ ಪರ್ವತದ ಬಳಿಗೆ ಹೊರಟುಹೋದನು.

ಬುದ್ಧನ ರೀತಿನೀತಿಗಳನ್ನು ಖಂಡಿಸಿ ಭಾಷಣಮಾಡಲು ದೇವದತ್ತನು ಗಯಾಶೀರ್ಷದ ತಪ್ಪಲಿನಲ್ಲೊಂದು ಸ್ಥಳದಲ್ಲಿ, ತನ್ನೊಡನೆ ಬಂದಿದ್ದ ಭಿಕ್ಷುಗಳ ಸಭೆಯನ್ನು ಸೇರಿಸಿದನು. ಹೊಸಪಂಥವನ್ನು ಸ್ಥಾಪಿಸಿ ತಾನು ಅದಕ್ಕೆ ಮುಖಂಡನಾಗಬೇಕೆಂದು ಅವನ ಆಶಯ. ಮಗಧರಾಜನಾದ ಅಜಾತಶತ್ರುವಿನ ಸಹಾಯವು ಒದಗುವ ಭರವಸೆಯೂ ಅವನಿಗಿದ್ದಿತು. ಆದರೆ ಸಭೆಯು ಪ್ರಾರಂಭವಾದ ಸ್ವಲ್ಪ ಹೊತ್ತಿಗೆ ಅವನಿಗೆ ತಡೆಯಲಾರದಷ್ಟು ತೂಕಡಿಕೆ ಬಂದಿತು. ಸಭೆಯಲ್ಲಿ ಸಾರಿಪುತ್ರನೂ ಮೌದ್ಗಲ್ಯಾಯನನೂ ಇದ್ದುದನ್ನು ಕಂಡು ಅವರು ಬುದ್ಧನನ್ನು ಬಿಟ್ಟು ತನ್ನ ಅನುಯಾಯಿಗಳಾಗಿ ಬಂದಿದ್ದರೆಂದು ದೇವದತ್ತನು ಭಾವಿಸಿದನು. ಅವರಂತಹವರೂ ತನ್ನ ಶಿಷ್ಯರಾಗಲು ಬಂದಿದ್ದರೆಂದು ದೇವದತ್ತನು ಹಿಗ್ಗಿದನು. ಅಲ್ಲದೆ ಭಾಷಣಮಾಡುವಂತೆ ಅವನು ಸಾರಿಪುತ್ರನಿಗೆ ಬೆಸಸಿ ತಾನು ನಿದ್ರೆಮಾಡಲು ಹೊರಟು ಹೋದನು. ಸಾರಿಪುತ್ರನ ಭಾಷಣವನ್ನು ಕೇಳಿ ಭಿಕ್ಷುಗಳೆಲ್ಲರೂ ಬುದ್ಧನಲ್ಲಿಗೆ ಹೋಗಿ ಕ್ಷಮೆಯನ್ನು ಬೇಡಿದರು. ದೇವದತ್ತನು ನಿದ್ರೆಯಿಂದೆಚ್ಚೆತ್ತ ಬಳಿಕ ತನ್ನ ಬಲೆಗೆ ಸಿಕ್ಕಿ ತನ್ನೊಡನೆ ಬಂದಿದ್ದ ಐನೂರು ಹಕ್ಕಿಗಳೂ ಹಾರಿಹೋಗಿದ್ದುದನ್ನು ಕಂಡು ಸಂಕಟಪಟ್ಟನು. ಮನೋವ್ಯಥೆಯ ಜೊತೆಗೆ ರೋಗವೂ ಬಂದಿತು. ಅಜಾತಶತ್ರುವಿನ ಸಹಾಯದಿಂದ ರೋಗವು ವಾಸಿಯಾದ ಬಳಿಕ ಅವನು ಬುದ್ಧನಲ್ಲಿಗೆ ಹೋದನು. ಬುದ್ಧನನ್ನು ಕಾಣುವುದಕ್ಕಾಗಿ ಪಲ್ಲಕ್ಕಿಯಿಂದ ಇಳಿದೊಡನೆಯೇ ಅವನಿಗೆ ಬಹುಸಂಕಟವಾಯಿತಂತೆ. ಅವನು, "ಬುದ್ಧ, ಬುದ್ಧ, ನಾನು ನಿನ್ನಲ್ಲಿ ಅಪರಾಧಿ. ನೀನು ನನ್ನ ಬಂಧುವೆಂಬ ಕಾರಣದಿಂದಲಾದರೂ ಕರುಣೆತೋರಿ ಕಾಪಾಡು" ಎಂದು ಚೀರಿಡುತ್ತ ಬುದ್ಧನನ್ನು ಕಾಣುವ ಮೊದಲೇ ಮೃತಪಟ್ಟನಂತೆ.*

---

* ದೇವದತ್ತನು ಪಲ್ಲಕ್ಕಿಯಿಂದಿಳಿದು ನೆಲದಮೇಲೆ ಕಾಲಿಟ್ಟೊಡನೆಯೇ ಭೂಮಿಯು ಬಿರಿದು ಅಗ್ನಿಜ್ವಾಲೆಯು ಪ್ರಜ್ವಲಿಸಿ ಅವನನ್ನು ಕಬಳಿಸಿತೆಂದೂ ಅವನು ನರಕಕ್ಕೆ ಹೋದನೆಂದೂ ಬೌದ್ಧಗ್ರಂಥಗಳಲ್ಲಿ ಹೇಳಿದೆ.

ಅತ್ತ ತಾನು ರೋಷಪರವಶನಾಗಿ ತಂದೆಗೆ ಅನ್ನವಿಲ್ಲದಂತೆ ಮಾಡಿದ ಅಕಾರ್ಯಕ್ಕಾಗಿ ಅಜಾತಶತ್ರುವೂ ಪಶ್ಚಾತ್ತಾಪಪಟ್ಟನು.

**ಅಜಾತ ಶತ್ರುವಿನ ಪಶ್ಚಾತಾಪ**

ಅಷ್ಟರಲ್ಲಿ ಅವನ ಮಗನು ಪ್ರೀತಿಯಿಂದ ಅವನ ಬಳಿಗೆ ಓಡಿಬಂದನು. ಅಜಾತಶತ್ರುವು ಬಾಲಕನನ್ನು ಬಗೆಬಗೆಯಾಗಿ ಮುದ್ದಿಸಿದನು. ಅಜಾತಶತ್ರುವಿನ ತಾಯಿ ಅದನ್ನು ಕಂಡು ಕಂಬನಿದುಂಬಿ, "ಮಗು! ನೀನು ಬಾಲಕನಾಗಿದ್ದಾಗ ನಿಮ್ಮ ತಂದೆ ನಿನ್ನನ್ನು ಹೀಗೆಯೇ ಮುದ್ದಿಸಿ ಲಾಲಿಸುತ್ತಿದ್ದರು. ಈಗ ಅವರು ಅನ್ನವಿಲ್ಲದೆ ಸೆರೆಮನೆಯಲ್ಲಿ ಸಾಯುತ್ತಿದ್ದಾರೆ. ಅಯ್ಯೋ! ಈ ದುಃಖವನ್ನು ನಾನು ಸೈರಿಸಲಾರೆ. ನನಗೆ ಸಾವೂ ಬಾರದು" ಎಂದಳು. ಅಜಾತಶತ್ರುವಿಗೆ ಆಗ ಜ್ಞಾನೋದಯವಾಯಿತು. ಬಿಂಬಿಸಾರನನ್ನು ಸೆರೆಯಿಂದ ಬಿಡಿಸಿ ಅಟ್ಟಹಾಸದಿಂದ ಕರೆದುತರಲು ಅವನು ಸೆರೆಮನೆಗೆ ಹೋದನು. ಅಷ್ಟರಲ್ಲಿ ಬಿಂಬಿಸಾರನಿಗೆ ಸಂಸಾರದ ಸೆರೆಮನೆಯಿಂದಲೇ ಬಿಡುಗಡೆಯಾಗಿದ್ದುದನ್ನು ಕಂಡು, ತಾನು ಕೊಲೆಪಾತಕಿಯೆಂದು ಅಜಾತಶತ್ರುವು ಪಶ್ಚಾತ್ತಾಪಪಟ್ಟನು. ಯಾರ ಉಪದೇಶದಿಂದಲೂ ಅವನು ಶಾಂತಿಯನ್ನು ಕಾಣದೆ, ಕೊನೆಗೆ ರಾಜವೈದ್ಯ ಜೀವಕನ ಸಲಹೆಯಂತೆ ಬುದ್ಧನಲ್ಲಿಗೆ ಹೋಗಿ ಶರಣಾಗತನಾಗಬೇಕೆಂದು ನಿರ್ಧರಿಸಿದನು.

ಪಶ್ಚಾತ್ತಾಪದಗ್ಧನಾದ ಅಜಾತಶತ್ರುವಿಗೆ ಪೂರ್ಣಚಂದ್ರೋದಯದ ರಮ್ಯವಾದ ಬೆಳದಿಂಗಳಿನಲ್ಲಿಯೂ ಹೃದಯದ ಬೇಗೆಯನ್ನು ಸಹಿಸಲಾರದ ಪರಿತಾಪ. ಜೀವಕನೊಡನೆ ಆನೆಯನ್ನೇರಿ ಅವನು ಬುದ್ಧನನ್ನು ಕಾಣಲು ಹೋದನು. ಬುದ್ಧನು ಸಾವಿರದಿನ್ನೂರು ಮಂದಿ ಭಿಕ್ಷುಗಳೊಡನೆ ಆಮ್ರವನದಲ್ಲಿದ್ದುದಾಗಿ ಹೇಳಿ ಜೀವಕನು ತನ್ನನ್ನು ಕರೆತಂದುದನ್ನೂ ವನದ ಬಳಿಯಲ್ಲಿ ಸ್ವಲ್ಪವೂ ಶಬ್ದವಿಲ್ಲದೆ ಸ್ತಬ್ಧವಾಗಿದ್ದುದನ್ನೂ ಕಂಡು ಜೀವಕನು ತನ್ನನ್ನು ಶತ್ರುಗಳಿಗೊಪ್ಪಿಸಲು ವಂಚನೆಮಾಡಿದನೋ ಹೇಗೋ—ಎಂದು ಅಜಾತ

ಶತ್ರುವಿಗೆ ಭಯವಾಯಿತು. ಅವನು ಜೀವಕನನ್ನು ಕುರಿತು, "ಜೀವಕ! ಸಾವಿರದಿನ್ನೂರು ಮಂದಿ ಭಿಕ್ಷುಗಳಿರುವರೆಂದೆ. ನಿಶ್ಶಬ್ದ ವಾಗಿದೆ. ನನ್ನನ್ನು ಶತ್ರುಗಳ ಪಾಲು ಮಾಡುವುದಿಲ್ಲವಷ್ಟೆ?" ಎಂದನು. ಜೀವಕನು ಧೈರ್ಯಹೇಳಿ ಅವನನ್ನು ಬುದ್ಧನ ಬಳಿಗೆ ಕರೆದೊಯ್ದನು. ಬುದ್ಧನು ಹೇಳಿದ್ದ ಪ್ರಶ್ನೆಯೊಂದರ ವಿಚಾರವಾಗಿ ಆತನು ಶಿಷ್ಯರೆಲ್ಲರೂ ಆಲೋಚನಾಮಗ್ನರಾಗಿ ಸದ್ದಿಲ್ಲದೆ ಕುಳಿತಿದ್ದರು. (ಬುದ್ಧನ ಸನ್ನಿಧಿಯಲ್ಲಿ ಅವರು ಹೇಗೆ ವರ್ತಿಸುತ್ತಿದ್ದರೆಂಬುದೂ, ಬುದ್ಧನ ಸಂಘಚಾಲನ ಸಾಮರ್ಥ್ಯವೂ ಇದರಿಂದ ವ್ಯಕ್ತವಾಗುತ್ತವೆ.) ಬುದ್ಧನು ಪ್ರಶಾಂತನಾಗಿ ಮೌನದಿಂದ ಕುಳಿತಿದ್ದ ಬಗೆಯನ್ನು ಕಂಡು ವಿಸ್ಮಿತನಾದ ಅಜಾತಶತ್ರುವು, "ನನ್ನ ಮಗ ಉದಾಯಿಭದ್ರನಾದರೂ ಇಂತಹ ಶಾಂತಿಯನ್ನು ಪಡೆದು ಸುಖಿಯಾಗಬಾರದೆ!" ಎಂದು ಹೇಳಿದನಂತೆ.

ಬುದ್ಧನಿಗೆ ಪಾಪದಲ್ಲಿ ದ್ವೇಷವಾದರೂ ಪಾಪಿಗಳಲ್ಲಿ ಅನುಕಂಪ. ಕೃಪಾಳುವಾದ ಆತನು ಅಜಾತಶತ್ರುವಿನ ಪಶ್ಚಾತ್ತಾಪಕ್ಕಾಗಿ ಮನ ಮರುಗಿ ಆತನಿಗೆ ಧರ್ಮೋಪದೇಶಮಾಡಿದನು ; ಅಲ್ಲದೆ "ಮಹಾರಾಜ! ನಿನ್ನಲ್ಲಿ ಮಹಾಪುರುಷ ಲಕ್ಷಣಗಳಿವೆ. ನೀನು ಮಾತ್ರ ನಿರಪರಾಧಿ ಯಾದ ನಿಮ್ಮ ತಂದೆಯನ್ನು ವಧೆಮಾಡದೆ ಹೋಗಿದ್ದರೆ, ಅವೆಲ್ಲ ಬೆಳಗುತ್ತಿದ್ದುವು" ಎಂದು ತಿಳಿಸಿ, ಆ ಬಳಿಕ ವಿವೇಕ ಬೋಧೆಮಾಡಿದ ನಂತೆ. ಆ ಕಾಲದಲ್ಲಿ ಅಜಾತಶತ್ರುವು "ಭಗವನ್! ಶಿಲ್ಪಿಗಳು, ಚಿತ್ರ ಗಾರರು, ಕುಂಬಾರರು, ಹೂವಾಡಿಗರು ಮುಂತಾಗಿ ಬಗೆಬಗೆಯ ವೃತ್ತಿಯವರಿದ್ದಾರೆ. ಅವರು ಮಾಡುವ ಕೆಲಸದಿಂದ ಹಣಸಂಪಾ ದನೆಯಾಗಿ ಅವರ ಸುಖಕ್ಕೆ ಸಾಧಕವಾಗುತ್ತದೆ. ಆದರೆ ಈ ಶ್ರಮಣ ವೃತ್ತಿಯಿಂದೇನು ಲಾಭ?" ಎಂದನು. ಅನೇಕರಲ್ಲಿ ಈ ಪ್ರಶ್ನೆ ಯನ್ನು ಕೇಳಿದರೂ ಅವನಿಗೆ ಅದಕ್ಕೆ ಸದುತ್ತರವು ದೊರೆತಿರಲಿಲ್ಲ. ಬುದ್ಧನು, "ಮಹಾರಾಜ! ಅದು ಹಾಗಿರಲಿ. ನನ್ನದೊಂದು ಪ್ರಶ್ನೆಗೆ ಉತ್ತರ ಹೇಳು. ನಿನ್ನ ಭೃತ್ಯರಾದ ರಾಜಪುರುಷರ

ಲ್ಲೊಬ್ಬನು ರಾಜಸೇವೆಯಲ್ಲಿ ಬೇಸರಗೊಂಡು ವಿರಕ್ತನಾಗಿ ಸಂನ್ಯಾಸಸ್ವೀಕಾರಮಾಡಿ ಅನ್ನಬಟ್ಟೆಗಳಿಂದ ಮಾತ್ರ ಸಂತುಷ್ಟನಾಗಿ ಕಾಡಿನಲ್ಲಿರುವನೆನ್ನು. ಧ್ಯಾನಮಗ್ನನಾಗಿ ಅವನು ಏಕಾಂತ ಪ್ರಿಯನಾಗಿರುವನೆನ್ನು. ನೀನು ಅವನನ್ನು ಕಂಡಾಗ, ನನ್ನ ಸೇವೆಗೆ ಬಾ—ಎಂದು ಕರೆಯುವೆಯೋ ಹೇಗೆ?" ಎಂದನು. ಅಜಾತಶತ್ರುವು "ಇಲ್ಲ. ಇಲ್ಲ; ಆಗ್ಗೆ ಅವನಿಗೆ ಅಭಿವಾದನ ಮಾಡುವೆನು" ಎಂದನು. ಬುದ್ಧನು ಮುಗುಳುನಗೆಯಿಂದ ಕೂಡಿ, "ಮಹಾರಾಜ! ನಿನಗೆ ನಮಸ್ಕಾರ ಮಾಡುತ್ತಿದ್ದವನು ನಿನ್ನ ನಮಸ್ಕಾರವನ್ನು ಸ್ವೀಕರಿಸುವಂತಾಗುವುದು. ಶ್ರಮಣವೃತ್ತಿಯಿಂದೇನು ಲಾಭವೆಂದೆ. ಇದು ಲಾಭವಲ್ಲವೆ? ಇದಕ್ಕಿಂತ ಕೋಟಿಪಾಲು ಹೆಚ್ಚಿನದಾದ ಲಾಭವೂ ಇದೆ. ಅದೇ ನಿರ್ವಾಣ" ಎಂದನು. ಶಾಂತಿಭಿಕ್ಷವನ್ನು ಬೇಡಿದ ಅಜಾತಶತ್ರುವಿಗೆ ಆ ಬಳಿಕ ಬುದ್ಧನು ವಿವೇಕ ಬೋಧೆಮಾಡಿದನು; ಪಾಪಕ್ಕಾಗಿ ಪಶ್ಚಾತ್ತಾಪ ಪಡುವುದು ಪುಣ್ಯಕ್ಕೆ ಮಾರ್ಗವೆಂದನು.

ಬುದ್ಧನ ವಿರೋಧಿಗಳಲ್ಲಿ ಯಾರ ಪ್ರಯತ್ನವೂ ಸಾಗದೆ ಹೋಯಿತು. ಆತನ ವಿರೋಧಿಗಳೇ ಆತನನ್ನು ಕೊಂಡಾಡುವಂತಾಗಿ, ಆತನ ಪ್ರೇಮ ಮೂರ್ತಿಯು ಅಸಂಖ್ಯಾತ ಜನರ ಹೃದಯದಲ್ಲಿ ಸುಪ್ರತಿಷ್ಠಿತವಾಗಲು ಕಾರಣವಾಯಿತು. ಬುದ್ಧನ ಯಶಶ್ಚಂದ್ರಿಕೆಯು ಆರ್ಯಾವರ್ತದಲ್ಲೆಲ್ಲ ಪಸರಿಸಿತು.

**ಕಾರ್ಯ ಸಿದ್ಧಿಯ ಕಾರಣಗಳು**

ಬೌದ್ಧಮತವು ಬಹುಬೇಗ ಹರಡಿ ಗೌತಮ ಬುದ್ಧನು ಹಿಡಿದ ಕಾರ್ಯಗಳೆಲ್ಲ ಸುಲಭವಾಗಿ ನೆರವೇರಿದುದಕ್ಕೆ ಕಾರಣವೇನೆಂಬುದನ್ನು ಸಂಕ್ಷೇಪವಾಗಿ ವಿಚಾರಮಾಡುವುದು ಯುಕ್ತವಾಗಿದೆ. ಸಿಂಹಾಸನಕ್ಕೆ ಅಧಿಕಾರಿಯಾಗಬಹುದಾಗಿದ್ದವನು ಬೀದಿಯ ಭಿಕ್ಷುಕನಾಗಿ ತತ್ತ್ವಗಳನ್ನು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಚಂಡಾಲರೆಂಬ ಭೇದವಿಲ್ಲದೆ ಸಮಸ್ತ

ರಿಗೂ ಬೋಧಿಸಿ ನಿರ್ವಾಣ ಸುಖದ ಸುವರ್ಣದ್ವಾರವನ್ನು ತೆರೆದಿಟ್ಟ ಲೋಕ ಕಾರುಣ್ಯ; ತಾನು ಬೋಧಿಸಿದುದನ್ನು ತನ್ನ ಆಚರಣೆಯಲ್ಲಿ ತೋರಿಸಿದ ರುಜುತೆ; ಭಿಕ್ಷುಗಳಾಗಿದ್ದವರು ತಮಗೆ ಬೇಕಾದಾಗ ಗೃಹಸ್ಥರಾಗಬಹುದೆಂದೂ, ಗೃಹಸ್ಥರು ಕೂಡ ಸಂನ್ಯಾಸ ಸ್ವೀಕಾರ ಮಾಡದೆಯೇ "ಉಪಾಸಕ" ತರಗತಿಯ ಬೌದ್ಧರಾಗಿರಬಹುದೆಂದೂ ವಿಧಿಸಿ ತೋರಿಸಿದ ಸಹಾನುಭೂತಿ; ರಾಜರಿಂದ ಹಿಡಿದು ಭಿಕಾರಿಗಳ ವರೆಗೂ ಸಮಸ್ತರಲ್ಲಿಯೂ ಪ್ರದರ್ಶಿಸಿದ ಅನುಕಂಪ ಬುದ್ಧಿ; ನಿಸ್ಪೃಹ ಚಕ್ರವರ್ತಿಯಾಗಿ ಲೋಕಕಲ್ಯಾಣವೊಂದನ್ನೇ ಬಯಸಿ ತನ್ನ ಜೀವನವನ್ನೇ ಅದಕ್ಕಾಗಿ ಮೀಸಲಾಗಿ ಸಮರ್ಪಿಸಿದ ಸೌಶೀಲ್ಯ—ಇವೇ ಮುಂತಾದ ಬುದ್ಧನ ಸದ್ಗುಣಗಳೇ ಆತನ ಕಾರ್ಯಸಿದ್ಧಿಯ ಮೂಲಸ್ತಂಭಗಳು. ಮನೋಮೋಹಕವಾದ ಅವನ ಬಾಹ್ಯಸೌಂದರ್ಯವೂ, ಅದಕ್ಕಿಂತಲೂ ಚಿತ್ತಾಕರ್ಷಕವಾಗಿದ್ದ ಸಂಸ್ಕೃತಿಪೂರಿತವಾದ ಅವನ ಆಂತರಿಕ ಸೌಂದರ್ಯವೂ, ಸ್ನಿಗ್ಧ ಗಂಭೀರವಾದ ಅವನ ಮಧುರ ಧ್ವನಿಯೂ, ಎದುರಾಳಿಗಳನ್ನು ಬಾಯಿಕಟ್ಟಿ ಸೋಲಿಸಲು ಸಹಕಾರಿಯಾಗಿದ್ದ ಅವನ ವಾದಸಾಮರ್ಥ್ಯವೂ ಅವನ ಕ್ರಿಯಾಶಕ್ತಿಗೆ ಒಪ್ಪವಿಡುವಂತಿದ್ದುವು.

ದುರ್ಮಾರ್ಗಿಗಳನ್ನು ತಿದ್ದುವ ಪ್ರಯತ್ನದಲ್ಲಿ ಸಾವಿಗೂ ಸಿದ್ಧನಾಗಿ ಬುದ್ಧನು ಪರಹಿತ ಬುದ್ಧಿಯನ್ನು ಪ್ರದರ್ಶಿಸುತ್ತಿದ್ದನು. ಒಮ್ಮೆ ಬೇಡನ ಬಲೆಗೆ ಸಿಕ್ಕಿ ಬೆದರಿದ್ದ ಜಿಂಕೆಯೊಂದನ್ನು ಬಂಧನದಿಂದ ಬಿಡಿಸಿ ಬುದ್ಧನು ಅದಕ್ಕೆ ಸ್ವಾತಂತ್ರ್ಯದಾನಮಾಡಿದನು. ತಾನು ಬೇಡವೆಂದರೂ ಬುದ್ಧನು ಆ ರೀತಿ ಮಾಡಿದುದಕ್ಕಾಗಿ ಅವನು ಬುದ್ಧನನ್ನು ಕೊಲ್ಲುವುದಾಗಿ ಹೇಳಿ ಆಯುಧವನ್ನೆತ್ತಿದನು. ಬುದ್ಧನು ಶಾಂತಿಗೆಡದೆ ಸುಮ್ಮನಿದ್ದುದನ್ನು ಕಂಡು ಬೆರಗಾಗಿ ಅವನು ಬುದ್ಧನ ವಿವೇಕವಾಣಿಗಳಿಂದ ಬುದ್ಧಿ ಕಲಿತನು. ಅಲ್ಲದೆ, ತನ್ನ ಹೆಂಡತಿ ಮಕ್ಕಳಿಗೆ ಕೂಡ ಧರ್ಮಬೋಧೆ ಮಾಡಬೇಕೆಂದು ಅವನು ಬುದ್ಧನನ್ನು ಬೇಡಿದನು. ಕೋಸಲ ದೇಶದಲ್ಲಿದ್ದ ಅಂಗುಲಿಮಾಲನಿಗೆ ಬುದ್ಧನು

ವಿವೇಕಬೋಧೆ ಮಾಡಿದುದು ಮತ್ತೊಂದು ನಿದರ್ಶನ. ಅಂಗುಲಿಮಾಲನೊಬ್ಬ ಕಳ್ಳ. ಅವನ ಕೈಗೆ ಸಿಕ್ಕಿದವರಿಗೆ ಮರಣವು ಸಿದ್ಧ. ಅವನ ಹಾವಳಿಯಿಂದ ನಾಡೇ ಕಂಪಿಸಿಹೋಗಿದ್ದಿತು. ಪ್ರಸೇನಜಿತ್ತೆಂಬ ರಾಜನು ಕೂಡ ಅವನನ್ನು ದಂಡಿಸಲಾರದೆ ಹೋಗಿದ್ದನು. ಅಂಗುಲಿಮಾಲನನ್ನು ಬೋಧನೆಯಿಂದ ಸನ್ಮಾರ್ಗಕ್ಕೆ ತರುವ ಉದ್ದೇಶದಿಂದ ಬುದ್ಧನು (ಅನೇಕರು ಬೇಡವೆಂದು ಬೇಡಿದರೂ ಕೇಳದೆ) ಪ್ರಾಣವನ್ನು ತೃಣವಾಗೆಣಿಸಿ ಕಾಡಿಗೆ ಹೋದನು. ತನ್ನನ್ನು ಕೊಲ್ಲಲು ಕತ್ತಿಯನ್ನೆತ್ತಿದ ಅಂಗುಲಿಮಾಲನೊಡನೆ ತಾಳ್ಮೆಯಿಂದ ಮಾತನಾಡಿ ಅವನ ಮನಸ್ಸನ್ನೂ ಕರಗಿಸಿದನು. ಬುದ್ಧನ ವಿವೇಕವಾಣಿಯಿಂದ ಅಂಗುಲಿಮಾಲನಿಗೆ ತನ್ನ ಕ್ರೂರಕೃತ್ಯಗಳಿಗಾಗಿ ಪಶ್ಚಾತ್ತಾಪ ಹುಟ್ಟಿತು. ಅವನು ಬುದ್ಧನಲ್ಲಿ ಶಿಷ್ಯವೃತ್ತಿಯನ್ನು ಕೈಕೊಂಡುದರಿಂದ ಕೋಸಲ ರಾಜ್ಯದಲ್ಲಿ ಅನೇಕರಿಗೆ ಪ್ರಾಣದಾನವಾದಂತಾಯಿತು. ಬುದ್ಧನು ಶ್ರಾವಸ್ತಿಯಲ್ಲಿದ್ದಾಗ ಒಮ್ಮೆ ರಾಜನು ಬಲಿಕೊಡಬೇಕೆಂದಿದ್ದ ಪ್ರಾಣಿಗಳಿಗಾಗಿ ಮನಮರುಗಿದನು ; ರಾಜನ ಮನಸ್ಸನ್ನು ಪಶುವಧೆಯ ಹೇಯಕಾರ್ಯದಿಂದ ಹಿಂತಿರುಗಿಸುವ ಪ್ರಯತ್ನದಲ್ಲಿ ತನ್ನ ಪ್ರಾಣಕ್ಕೆ ಸಂಚಕಾರ ಬರುವಂತಿದ್ದುದನ್ನೂ ಲಕ್ಷ್ಯಮಾಡದೆ "ಆಮಿಷ ಪೂಜೆಗಿಂತಲೂ ಧರ್ಮ ಪೂಜೆಯು ಶ್ರೇಷ್ಠ" ಎಂದು ವಿವೇಕವನ್ನು ಬೋಧಿಸಿ, ನಿರಪರಾಧಿಗಳಾದ ಆ ಪಶುಗಳಿಗೆ ಪ್ರಾಣದಾನ ಮಾಡಿಸಿದನು.

ಬುದ್ಧನ ಬೋಧನಾವಿಧಾನದಲ್ಲೊಂದು ವೈಶಿಷ್ಟ್ಯವಿದ್ದಿತು. ಅನ್ಯಮತ ಸಹಿಷ್ಣುತೆಯೂ ವಿನೀತಭಾವವೂ ಆತನ ವಾಣಿಗಳಲ್ಲಿ ತುಂಬಿರುತ್ತಿದ್ದುವು. ಆದಕಾರಣ, ಆತನು ಪ್ರತಿಪಾದಿಸುತ್ತಿದ್ದ ತತ್ತ್ವಗಳನ್ನು ಒಪ್ಪಿದ್ದವರೂ, ಒಪ್ಪದಿದ್ದವರೂ, ಉಭಯತ್ರರೂ ಆತನ ಉಪದೇಶವಾಣಿಗಳನ್ನು ಕೇಳಲು ವಿಶೇಷ ಆಸ್ಥೆಯಿಂದ ಬರುತ್ತಿದ್ದರು. ಚಿತ್ತಾಕರ್ಷಕವಾಗಿ ಮಾತನಾಡುತ್ತಿದ್ದ ಆತನ ನುಡಿಗಳನ್ನು ಕೇಳಿ ಆನಂದಿಸಲು ಬಹುಮಂದಿ ಬ್ರಾಹ್ಮಣರೂ ಬರುತ್ತಿದ್ದರು. ಅವರಲ್ಲಿ

ಅನೇಕಮಂದಿ ತಮ್ಮ ತಮ್ಮ ಪ್ರವರಗಳನ್ನು ಹೇಳಿಕೊಂಡು ತೇಜಸ್ವಿಯಾದ ಆತನಿಗೆ ನಮಸ್ಕಾರಮಾಡುತ್ತಿದ್ದರು. ಬುದ್ಧನು ಸ್ವಂತ ಮತವನ್ನು ಹೊಗಳಿಕೊಂಡು ಜನರು ಅದಕ್ಕೆ ಸೇರಬೇಕೆಂದು ಕೇಳಿಕೊಳ್ಳುತ್ತಲೂ ಇರಲಿಲ್ಲ; ಅನ್ಯಮತಗಳನ್ನು ದೂಷಿಸಿ ಅವುಗಳನ್ನು ಬಿಟ್ಟುಬಿಡುವಂತೆ ಜನರಿಗೆ ಬೋಧಿಸುತ್ತಲೂ ಇರಲಿಲ್ಲ. ಇತರ ಮತಗಳ ದೋಷಗಳನ್ನು ಉದ್ಘಾಟಿಸುವಾಗಲೂ ಕುಹಕ ಕುಚೋದ್ಯಗಳಿಗೆ ಆಸ್ಪದವಿಲ್ಲದಂತೆ ಗಾಂಭೀರ್ಯರಕ್ಷಣೆಮಾಡಿಕೊಂಡು ಆ ಕೆಲಸ ಮಾಡುತ್ತಿದ್ದನು. ಉರುವೇಲ ಕಾಶ್ಯಪನು ತನ್ನ ಶಿಷ್ಯನಾಗುವುದಾಗಿ ತಿಳಿಸಿದಾಗ ಅವನನ್ನು ಕುರಿತು, "ನೀನು ಐನೂರು ಜನರಿಗೆ ಅಧಿನಾಯಕನಾಗಿರುವೆ. ಅವರ ಮನಸ್ಸಿಗೆ ಇದರಿಂದ ವ್ಯಥೆಯಾದೀತು. ಹೀಗೆ ಒಮ್ಮಿಂದೊಮ್ಮೆಗೇ ಅವರನ್ನು ಕೈಬಿಡುವ ಯೋಚನೆ ಮಾಡಬೇಡ. ಅವರ ಅನುಮತಿಯನ್ನೂ ಪಡೆದು ಈ ಮತವನ್ನವಲಂಬಿಸು" ಎಂದು ಹೇಳಿದ್ದವನು ಬುದ್ಧನು. ಬೌದ್ಧಮತವನ್ನವಲಂಬಿಸಿದವರಲ್ಲೊಬ್ಬನಾದ ಸಿಂಹನು ಜೈನನು. ಸಿಂಹನು ಬೌದ್ಧಮತವನ್ನವಲಂಬಿಸಿದ ಮೇಲೆ ಕೂಡ ಮೊದಲಿನಂತೆಯೇ ಜೈನಶ್ರಮಣರಿಗೆ ಸನ್ಮಾನಮಾಡಿ ಸತ್ಕರಿಸಿ ಸಹಾಯ ಮಾಡಬಹುದೆಂದು ಬುದ್ಧನು ಅನುಮತಿಕೊಟ್ಟನಂತೆ. ಈ ಬಗೆಯ ಅಮೋಘವಾದ ಪರಸಹಿಷ್ಣುತೆಯಿದ್ದ ಮಹಾನುಭಾವ ಬುದ್ಧನ ಮುಂದೆ ಜನರು ತಲೆಬಾಗಿ ನಿಂತು ಆತನನ್ನು ಓಲೈಸಿದುದರಲ್ಲಿ ಆಶ್ಚರ್ಯವೇನು?

ಗೌತಮ ಬುದ್ಧನು ವಿನಯ ನಮ್ರನಾಗಿಯೂ, ಸ್ವಲ್ಪಮಟ್ಟಿಗೆ ವಿನೋದ ಪ್ರಿಯನಾಗಿಯೂ ಇದ್ದನು. ಅದನ್ನು ಸೂಚಿಸಲು ನಿದರ್ಶನಾರ್ಥವಾಗಿ ಒಂದು ಸಂಗತಿಯನ್ನು ತಿಳಿಸಬಹುದಾಗಿದೆ. ಒಮ್ಮೆ ಆತನು ಧನಿಕನಾದೊಬ್ಬ ಕುಂಬಾರನ ಮನೆಯಲ್ಲಿ ಸ್ಥಳವನ್ನು ಬೇಡಿ, "ಕತ್ತಲಾಗುತ್ತ ಬಂದಿದೆ. ರಾತ್ರಿ ಇಲ್ಲಿ ಮಲಗಿದ್ದು ಬೆಳಗ್ಗೆ ಹೊರಟು ಹೋಗುವೆನು. ಉಪಕರಿಸಬೇಕು" ಎಂದನಂತೆ. ಕುಂಬಾರನು

"ಅದು ಸಾಧ್ಯವಿಲ್ಲ. ಬಹಳ ದೊಡ್ಡ ಶ್ರಮಣರೊಬ್ಬರಿಗೆ ಆಗಲೇ ಸ್ಥಳ ಕೊಟ್ಟಿದ್ದೇನೆ" ಎಂದನು. ಬುದ್ಧನಿಗೆ ಮೊದಲು ಅಲ್ಲಿಗೆ ಬಂದಿದ್ದವನು ನಿಜವಾಗಿಯೂ ಅಭಿಜಾತನು. ಅವನು ತಕ್ಷಶಿಲೆಯ ರಾಜನು. ಬುದ್ಧನ ಉಪದೇಶ ವಾಣಿಗಳನ್ನು ಮಗಧರಾಜನಾದ ಬಿಂಬಿಸಾರನು ಬಂಗಾರದ ಪಟ್ಟಿಕೆಗಳ ಮೇಲೆ ಕೆತ್ತಿಸಿ ಅವನಲ್ಲಿಗೆ ಕಳುಹಿಸಿದ್ದನು. ರಾಜನು ಅವುಗಳನ್ನು ಓದಿ ವಿರಕ್ತನಾಗಿ ರಾಜ್ಯಪರಿತ್ಯಾಗಮಾಡಿ ಶ್ರಮಣನಾದನು. ಅವನಿಗೇ ಕುಂಬಾರನು ಸ್ಥಳಕೊಟ್ಟಿದ್ದುದು. ಬುದ್ಧನು ಆ ಭಿಕ್ಷುವಿನ ಕ್ಷಮೆಯನ್ನೇ ಬೇಡಿ, "ತಮಗೆ ತೊಂದರೆ ಯಾಗದ ಪಕ್ಷಕ್ಕೆ ನಾನೂ ಈ ರಾತ್ರಿ ತಮ್ಮೊಡನೆ ಉಳಿದಿದ್ದು ಬೆಳಗ್ಗೆ ಹೊರಡುವೆನು" ಎಂದನು. ಭಿಕ್ಷುವು ಸಮ್ಮತಿಸಲು ಬುದ್ಧನೂ ಆತನೊಡನೆ ಬಿಡಾರ ಮಾಡಿದನು. ಇಬ್ಬರೂ ಧ್ಯಾನಮಗ್ನರಾಗಿ ಸ್ವಲ್ಪಕಾಲ ಕುಳಿತಿದ್ದರು. ಆ ಬಳಿಕ ಬುದ್ಧನು ತನ್ನ ಸಂಗಡಿಗ ನನ್ನು ಕುರಿತು, "ತಮ್ಮ ಆಭಿಜಾತ್ಯವು ಸ್ಪಷ್ಟವಾಗಿ ಕಾಣುತ್ತಿದೆ. ತಾವು ಶ್ರಮಣರಾದುದಕ್ಕೇನು ಕಾರಣ?" ಎಂದು ಕೇಳಿದನು. ಅವನು, "ಮಹಾನುಭಾವ ಬುದ್ಧಭಗವಾನರ ಧರ್ಮವಾಣಿಗಳಿಂದ ನನ್ನ ಹೃದಯವು ಕರಗಿ ವಿರಕ್ತಿಹುಟ್ಟಿತು" ಎಂದು ತಿಳಿಸಿ ತನ್ನ ಪೂರ್ವೋತ್ತರಗಳನ್ನೂ, ಬಿಂಬಿಸಾರನು ಕಳುಹಿಸಿದ ಪಟ್ಟಿಕೆಗಳ ವಾರ್ತೆಯನ್ನೂ ಬಿನ್ನೈಸಿದನು. ಗೌತಮಬುದ್ಧನು ಆ ಬಳಿಕ ಭಿಕ್ಷು ವನ್ನು ಕುರಿತು, "ಭಿಕ್ಷುಗಳೆ! ಆ ಗೌತಮನು ಈಗೆಲ್ಲಿರುವನು?" ಎಂದು ಕೇಳಿದನು. ಭಿಕ್ಷುವು "ಭಗವಾನ್ ಬುದ್ಧರನ್ನು ಹಾಗೆಲ್ಲ ಗೌತಮನೆಂದು ಮುಂತಾಗಿ ಕರೆಯಬೇಡಿ. ಭಗವಾನರು ಈಗ ಶ್ರಾವಸ್ತಿಯಲ್ಲಿರುವರಂತೆ" ಎಂದನು. ಬುದ್ಧನು, "ತಾವು ಗೌತಮ ನನ್ನು ನೋಡಿದ್ದೀರಾ?" ಎಂದು ಪ್ರಶ್ನೆಮಾಡಿದನು. ಭಿಕ್ಷುವು "ಇಲ್ಲ; ಭಗವಾನರನ್ನು ಇನ್ನೂ ನೋಡಿಲ್ಲ. ಅವರ ಸಂದರ್ಶನ ಭಾಗ್ಯವನ್ನು ಹುಡುಕಿಕೊಂಡು ಬಂದಿದ್ದೇನೆ" ಎಂದನು. ಆ ಬಳಿಕ ಭಿಕ್ಷುವು ಧರ್ಮಸಂಬಂಧವಾದ ವಿಚಾರಗಳಲ್ಲಿ ತನಗಿದ್ದ ಕೆಲವು

ಸಂದೇಹಗಳನ್ನು ಸೂಚಿಸಿ "ತಾವು ಇವುಗಳನ್ನು ನಿವೃತ್ತಿ ಮಾಡ ಬೇಕು" ಎಂದು ಪ್ರಾರ್ಥಿಸಿದನು. ಬುದ್ಧನ ಧರ್ಮೋಪದೇಶದ ವೈಖರಿಯನ್ನು ಕಂಡು ವಿಸ್ಮಿತನಾದ ಭಿಕ್ಷುವಿಗೆ ತನ್ನೆದುರಿಗಿದ್ದವನೇ ಬುದ್ಧನಿರಬಹುದೆ—ಎಂಬ ಸಂಶಯವುಂಟಾಯಿತು. ಆತನೇ ಬುದ್ಧ ನೆಂದು ತಿಳಿದಾಗ, "ತಿಳಿಯದೆ ಮಾಡಿದ ಅಪಚಾರವನ್ನು ಮನ್ನಿಸ ಬೇಕು" ಎಂದು ಬೇಡಿ ಬುದ್ಧನ ಕಾಲಿಗೆರಗಿ, "ಭಗವಾನರ ದರ್ಶನ ದಿಂದ ಧನ್ಯನಾದೆನು" ಎಂದನು.

ಬುದ್ಧನು ಸಮಸ್ತರಿಗೂ ತಿಳಿಯುವಂತೆ ಪಾಳಿಭಾಷೆಯಲ್ಲಿ ಧಾರಾಕಾರವಾಗಿ ಪ್ರವಹಿಸುತ್ತಿದ್ದ ಅಸ್ಖಲಿತವಾಣಿಯಿಂದ ತತ್ತ್ವ ಬೋಧೆ ಮಾಡುತ್ತಿದ್ದನು. ಬುದ್ಧನ ಶೈಲಿಯ ಸೊಬಗನ್ನು ಅರಿತವರಲ್ಲಿ ಪಂಡಿತ ಪಾಮರರೆಂಬ ಭೇದವಿಲ್ಲದೆ ಸಮಸ್ತರೂ ಬೆರಗಾಗಿ ಶಿಲಾ ಪ್ರತಿಮೆಗಳಂತೆ ಸ್ತಬ್ಧವಾಗಿ ಕುಳಿತು ಧರ್ಮಶ್ರವಣ ಮಾಡುತ್ತಿದ್ದರು.

ಬುದ್ಧನು ವಾದಕ್ಕೆ ಕುಳಿತಾಗ, ಪ್ರತಿಪಕ್ಷದವರಿಗೇ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಹಾಕಿ ಉತ್ತರ ಹೇಳಿಸುತ್ತ ಬಂದು ಅವರ ಉತ್ತರಗಳೇ ಅವರ ಪೂರ್ವಪಕ್ಷಗಳಿಗೆಲ್ಲ ಸಮಾಧಾನ ಹೇಳುವಂತೆ ಮಾಡುತ್ತಿದ್ದನು. ಬುದ್ಧನೊಡನೆ ವಾದಕ್ಕಾಗಿ ಬಂದಿದ್ದ ನಿಗ್ರೋಧ ನೆಂಬ ಉದ್ದಾಮ ಪಂಡಿತನು "ಗೌತಮನು ತನ್ನ ಸಿದ್ಧಾಂತವನ್ನು ಪ್ರತಿಪಾದಿಸುವ ರೀತಿಯು ಅದ್ಭುತವಾದುದು. ಆತನೆದುರಿಗೆ ನಾವೆಲ್ಲರೂ ಮೂಕರಾಗುತ್ತೇವೆ" ಎಂದನಂತೆ. ವಾದಕ್ಕಾಗಿ ಬುದ್ಧ ನಲ್ಲಿಗೆ ಬಂದಿದ್ದ ಸತ್ಯಕನೆಂಬವನು, "ಪೂಜ್ಯ ಗೌತಮ! ವಾದದಲ್ಲಿ ಜಯಿಸುವ ಬುದ್ಧಿಯಿಂದ ಬಂದುದು ತಪ್ಪಾಯಿತು. ಅದೊಂದು ಅವಿವೇಕ. ಮದಿಸಿದ ಆನೆಯನ್ನಾದರೂ ಎದುರಿಸಬಹುದು. ಕಾಡುಗಿಚ್ಚನ್ನಾದರೂ ಹಾಯ್ದು ಬರಬಹುದು. ನಿನ್ನೊಡನೆ ವಾದ ಮಾಡಿ ಜಯಿಸುವುದು ಮಾತ್ರ ತೀರ ಅಸಾಧ್ಯಪ್ರಯತ್ನ. ಪೂಜ್ಯನೆ! ಶಿಷ್ಯರೊಡನೆ ನಾಳೆ ನನ್ನ ಮನೆಗೆ ಭಿಕ್ಷೆಗೆ ದಯಮಾಡಿಸಬೇಕು"

ಎಂದನು. ಬುದ್ಧನು ಎದುರಾಳಿಗಳಲ್ಲಿ ಅವಿನಯವನ್ನು ಎಂದೂ ತೋರಿಸಿದವನಲ್ಲ; ವಿನಯಶೀಲತೆಯು ಆತನ ಹುಟ್ಟುಗುಣವಾಗಿದ್ದಿತು. ತನ್ನ ಶಿಷ್ಯರೊಡನೆ ಕೂಡ "ಪ್ರಿಯ ಭಿಕ್ಷುಗಳೇ! ನನ್ನ ಯಾವುದಾದರೂ ವರ್ತನೆಯು ತಪ್ಪೆಂದು ತೋರಿದ್ದರೆ ತಿಳಿಸಿರಿ. ಅದು ತಪ್ಪಾಗಿದ್ದರೆ ತಿದ್ದಿಕೊಳ್ಳುವೆನು" ಎಂದು ಹೇಳುತ್ತಿದ್ದ ವಿನಯಶೀಲನು ಆತನು. ಬುದ್ಧನು ವಿನೀತಭಾವದಿಂದ ವರ್ತಿಸುತ್ತಿದ್ದನಾದರೂ, ದುರಹಂಕಾರಿಗಳಲ್ಲಿ ಅವರಿಗೆ ತಕ್ಕಂತೆ—ಆದರೆ ತನ್ನ ವಿನಯಶೀಲತೆಗೆ ಭಂಗಬರದಂತೆ—ಮಾತನಾಡಿ ಅವರಿಗೆ ಬುದ್ಧಿ ಕಲಿಸಲು ಹಿಂತೆಗೆಯುತ್ತಿರಲಿಲ್ಲ.

ಹೊಗಳಿಕೆಯ ಮಾತುಗಳು ಬುದ್ಧನಿಗೆ ಸರಿಬೀಳುತ್ತಿರಲಿಲ್ಲ. ಒಮ್ಮೆ ಸಾರಿಪುತ್ರನು, "ಭಗವನ್! ಹಿಂದೆ ನಿನ್ನಂತಹ ಮಹಾನುಭಾವರಿರಲಿಲ್ಲ. ಮುಂದೆ ನಿನ್ನಂತಹವರು ಹುಟ್ಟುವುದಿಲ್ಲ" ಎಂದನು. ಆಗ ಬುದ್ಧನು, "ಸಾರಿಪುತ್ರ! ಹಿಂದಿನ ಬುದ್ಧರುಗಳು ಎಂತಹ ಶೀಲವಂತರು, ಎಂತಹ ಪ್ರಜ್ಞಾವಂತರು, ಎಂತಹ ವಿಮುಕ್ತಿವಂತರು—ಎಂಬೀ ವಿಚಾರಗಳನ್ನೂ, ಮುಂದಿನ ಬುದ್ಧರುಗಳ ಶೀಲಪ್ರಜ್ಞಾದಿಗಳನ್ನೂ ನೀನು ಸಂಪೂರ್ಣವಾಗಿ ಬಲ್ಲೆ; ಅಲ್ಲವೆ?" ಎಂದು ಕೇಳಿದನು. ಸಾರಿಪುತ್ರನು 'ಇಲ್ಲ' ಎಂದನು. ಆಗ ಬುದ್ಧನು "ನನ್ನ ಶೀಲ ಪ್ರಜ್ಞೆಗಳ ಪೂರ್ಣಪರಿಚಯವು ನಿನಗಿದೆ; ಅಲ್ಲವೆ?" ಎಂದನು. ಸಾರಿಪುತ್ರನು, "ಇಲ್ಲ, ಭಗವನ್, ಇಲ್ಲ" ಎಂದು ಉತ್ತರ ಹೇಳಿದನು. ಆ ಬಳಿಕ ಬುದ್ಧನು, ಹಾಗಾದರೆ, ಅತೀತ—ಅನಾಗತ—ಪ್ರತ್ಯುತ್ಪನ್ನ ಬುದ್ಧರುಗಳ ವಿಚಾರವನ್ನು ತಿಳಿಯದೆಯೇ ನೀನು ಇಷ್ಟು ಧೈರ್ಯದಿಂದ ಇಷ್ಟು ಸ್ತೈಖರಿಯ ಮಾತುಗಳನ್ನಾಡಿದ ಬಗೆ ಹೇಗೆ?" ಎಂದು ಕೇಳಿದನು. ಮತ್ತೊಬ್ಬನು ತನ್ನನ್ನು ಸರ್ವಜ್ಞನೆಂದು ಸಂಬೋಧಿಸಿ ಹೊಗಳಿದಾಗ ಬುದ್ಧನು, "ನನ್ನನ್ನು ಕೆಲವರು ಸರ್ವಜ್ಞನೆಂದು ಕರೆಯುತ್ತಾರೆ. ಇದರಿಂದ ಅವರು ಅಸತ್ಯವನ್ನು ಹೇಳಿ ನನ್ನನ್ನು ನಿಂದಿಸಿದಂತಾಗುತ್ತದೆ.

ಅಂತಹವರಲ್ಲಿ ನೀನೂ ಒಬ್ಬನಾದೆ. ಸರ್ವಜ್ಞನೆಂದು ಕರೆದರೆ ನನ್ನ ಮನಸ್ಸಿಗೆ ಹಿಂಸೆಯಾಗುತ್ತದೆ" ಎಂದನು.

ತಾನು ವಿವೇಕ ಬೋಧೆಮಾಡಿದವರ ಸಂಸ್ಕೃತಿಯ ಮಟ್ಟವನ್ನರಿತು, ಅವರ ಮನಸ್ಸಿಗೆ ಹಿಡಿಯುವಂತೆ ಹೃದಯಂಗಮವಾಗಿ ಮಾತನಾಡುತ್ತಿದ್ದುದರಿಂದ ಬುದ್ಧನಲ್ಲಿ ಜನರೆಲ್ಲರಿಗೂ ಪ್ರೀತ್ಯಾದರಗಳುಂಟಾದುವು. ಒಮ್ಮೆ ಕೃಶಾ ಗೌತಮಿಯೆಂಬೊಬ್ಬಳ ಮಗುವಿಗೆ ರೋಗಬಂದಿತು. ಅವಳು ಮಗುವಿಗೆ ಅನೇಕ ವೈದ್ಯರಿಂದ ಚಿಕಿತ್ಸೆ ಮಾಡಿಸಿದರೂ ರೋಗವು ಗುಣವಾಗಲಿಲ್ಲ. ಕೊನೆಗೆ ಅವಳ ಮಗುವು ಮೃತಪಟ್ಟಿತು. ಮಗುವು ಸತ್ತಿದ್ದುದನ್ನೇ ಅವಳರಿಯಳು. ಸತ್ತಮಗುವನ್ನೇ ಎದೆಗಪ್ಪಿಕೊಂಡು ಅದಕ್ಕೆ ಚಿಕಿತ್ಸೆಮಾಡಿ ಬದುಕಿಸಬೇಕೆಂದು ಅವಳು ಬುದ್ಧನನ್ನು ಬೇಡಿದಳು. ಬುದ್ಧನು ನಿಜಸ್ಥಿತಿಯನ್ನರಿತು ಆಗಿನ ಸ್ಥಿತಿಯಲ್ಲಿ ಅವಳಿಗೆ ಧರ್ಮಬೋಧೆಮಾಡಿ ಫಲವಿಲ್ಲವೆಂದುಕೊಂಡು. "ತಾಯೀ, ಬಂಧುಗಳೊಬ್ಬರೂ ಮೃತಪಟ್ಟಿಲ್ಲದವರ ಮನೆಯಿಂದ ಸಾಸಿವೆಯನ್ನು ತೆಗೆದುಕೊಂಡು ಬಾ. ನಿನ್ನ ಮಗುವಿಗೆ ಚಿಕಿತ್ಸೆ ಮಾಡಿ ಬದುಕಿಸುವೆನು" ಎಂದನು. ಕೃಶಾಗೌತಮಿಯು ಸಾಸಿವೆಗಾಗಿ ವಿಚಾರಿಸಿಕೊಂಡು ಹೋದಳು; ಬಂಧುಗಳು ಮೃತಪಟ್ಟಿಲ್ಲದ ಒಂದು ಕುಟುಂಬವೂ ಇಲ್ಲವೆಂಬುದನ್ನರಿತು ಹಿಂತಿರುಗಿದಳು. ಸಾವು ಸಂಭವಿಸದ ಕುಟುಂಬವೇ ಇಲ್ಲವೆಂದು ಬುದ್ಧನು ಅವಳಿಗೆ ಸಮಾಧಾನ ಹೇಳಿ ಅವಳ ದುಃಖವನ್ನು ಶಮನಮಾಡಿದನು. ವಿಶಾಖೆಯೆಂಬವಳೊಬ್ಬಳ ಮೊಮ್ಮಗುವು ಮೃತಪಟ್ಟಿತು. ಅವಳು ರೋದಿಸುವುದನ್ನು ನೋಡಿ ಬುದ್ಧನು, "ತಾಯೆ! ಶ್ರಾವಸ್ತಿಯ ಮಕ್ಕಳೆಲ್ಲರೂ ನಿನ್ನ ಮೊಮ್ಮಕ್ಕಳೇ ಆಗಿದ್ದರೆ ನೀನು ಅವರೆಲ್ಲರನ್ನೂ ಪ್ರೀತಿಸುತ್ತಿದ್ದೆಯಲ್ಲವೆ?" ಎಂದು ಕೇಳಿದನು. ಅವಳು, "ಹೌದು, ಪ್ರೀತಿಸುತ್ತಿದ್ದೆ" ಎಂದು ಉತ್ತರ ಹೇಳಿದಳು. ಆಗ ಬುದ್ಧನು "ಈ ಊರಿನಲ್ಲಿ ಎಷ್ಟು ಮಕ್ಕಳು ಮೃತಪಡುತ್ತವೆ"? ಎಂದನು. ಆಕೆಯು "ವರ್ಷದಲ್ಲೆಲ್ಲ ಅನೇಕ ಮಕ್ಕಳು ಮೃತಪಡುತ್ತವೆ" ಎಂದಳು. ಬುದ್ಧನು

"ಹಾಗಾದರೆ ಅವೆಲ್ಲ ನಿನ್ನ ಮೊಮ್ಮಕ್ಕಳಾಗಿದ್ದರೆ ವರುಷವೆಲ್ಲ ನೀನು ಅಳುವುದೇ ನಿನ್ನ ಕೆಲಸವಾಗುತ್ತಿದ್ದಿತು. ಪ್ರತಿವರ್ಷವೂ ಮಕ್ಕಳು ಸಾಯುವಕಾರಣ, ನೀನು ಅಳುವುದರಲ್ಲಿಯೇ ಜೀವಮಾನವನ್ನೆಲ್ಲ ಕಳೆಯುತ್ತಿದ್ದೆ. ಅಲ್ಲವೆ, ತಾಯಿ?" ಎಂದು ಕರುಣೆಯಿಂದ ಕೇಳಿದನು. ವಿಶಾಖೆಯು, "ತಿಳಿಯಿತು, ಗುರುವೆ, ತಿಳಿಯಿತು. ಇನ್ನು ಅಳುವುದಿಲ್ಲ" ಎಂದು ಉತ್ತರ ಹೇಳಿದಳು.

**ಧರ್ಮ ಸಾಮ್ರಾಜ್ಯ**

ಗೌತಮ ಬುದ್ಧನು ತತ್ತ್ವಸಾಕ್ಷಾತ್ಕಾರವನ್ನು ಪಡೆದಮೇಲೆ ನಾಲ್ವತ್ತೈದು ವರುಷಗಳಕಾಲ ಪರಹಿತಕ್ಕಾಗಿ ಶ್ರಮಿಸಿದುದರ ಫಲವಾಗಿ ಬೌದ್ಧಮತದ ಧರ್ಮಸಾಮ್ರಾಜ್ಯವು ಸುಪ್ರತಿಷ್ಠಿತವಾಗಿ ನೆಲೆಗೊಂಡಿತು. ರಾಜಗೃಹದಿಂದ ಹಿಡಿದು ಶ್ರಾವಸ್ತಿಯವರೆಗೂ ರಾಜ್ಯರಾಜ್ಯಗಳಲ್ಲಿಯೂ ಬುದ್ಧನ ಗುಣಗಾನವು ಮೊಳಗಿ ಅನೇಕ ರಾಜ್ಯಗಳ ರಾಜರುಗಳೂ, ಪ್ರಜೆಗಳೂ, ಬುದ್ಧನಿಂದ ಸ್ಥಾಪಿತವಾದ ಧರ್ಮಸಾಮ್ರಾಜ್ಯಕ್ಕೆ ಸೇರಿ ತಲೆಬಾಗಿದರು. ಗೌತಮಬುದ್ಧನು ಧಾರ್ಮಿಕ ವಿಚಾರಗಳಲ್ಲಿ ಮಾತ್ರವೇ ಅಲ್ಲದೆ ಸಾಮಾಜಿಕ ವಿಚಾರಗಳಲ್ಲಿಯೂ ಜನರಿಗೆ ಸಹಾಯಕನಾದನು. ರಾಜನೀತಿಯನ್ನೂ ಪ್ರಭುಗಳ ಕರ್ತವ್ಯವನ್ನೂ ಅವನು ಉಪದೇಶಿಸಬೇಕಾಗುತ್ತಿದ್ದಿತು. ಹೊಸ ರಾಜನು ಪಟ್ಟಕ್ಕೆ ಬಂದರೆ ಬುದ್ಧನ ಬುದ್ಧಿವಾದವು ಬೇಕು. ಒಬ್ಬ ರಾಜನಿಗೆ ಯುದ್ಧಕ್ಕೆ ಹೊರಡಬೇಕೆಂದು ತೋರಿದರೆ ಒಡನೆಯೇ ಬುದ್ಧನ ಆಲೋಚನೆಯನ್ನು ಕೇಳಬೇಕು. ಹೀಗೆ ಅನೇಕ ರಾಜರುಗಳು ತಾವಾಗಿಯೇ ಆತನ ಸಲಹೆಗಳನ್ನು ಕೇಳಿ ಪ್ರಜೆಗಳಿಗೆ ಅನುಕೂಲವಾಗುವಂತೆ ಆಡಳಿತ ನಡೆಯಿಸುತ್ತಿದ್ದರು. ಒಂದೆರಡು ಸಂದರ್ಭಗಳಲ್ಲಿ ಯುದ್ಧವಾಗುವುದನ್ನು ಕೂಡ ಬುದ್ಧನು ತಪ್ಪಿಸಿದನು. ಉಭಯ ಪಕ್ಷಗಳವರೂ ಆದರ ಗೌರವಗಳಿಂದ ಅವನ ಬುದ್ಧಿವಾದಕ್ಕೆ ತಲೆಬಾಗಿದರು.

# ಹತ್ತನೆಯ ಅಧ್ಯಾಯ

—+—

## ಮಹಾ ಪರಿನಿರ್ವಾಣ

ಒಮ್ಮೆ ಗೃಧ್ರಕೂಟ ಪರ್ವತದಮೇಲೆ ಬುದ್ಧನು ಇಳಿದಿದ್ದಾಗ, ಅಜಾತಶತ್ರುವು ತಾನು ವಜ್ಜಿಯರ ಮೇಲೆ ಯುದ್ಧವನ್ನು ಹೂಡಿ ವೈಶಾಲೀ ನಗರಕ್ಕೆ ಮುತ್ತಿಗೆ ಹಾಕಬೇಕೆಂದಿದ್ದುದನ್ನು ಆತನಿಗೆ ಅರಿಕೆಮಾಡಿ ತನಗೆ ಜಯವಾಗುವ ವಿಚಾರದಲ್ಲಿ ಆತನ ಅಭಿಪ್ರಾಯವನ್ನು ತಿಳಿದುಕೊಂಡು ಬರಲು ಮಹಾಮಂತ್ರಿಯಾದ ವರ್ಷಕಾರ ಬ್ರಾಹ್ಮಣನನ್ನು ಕಳುಹಿಸಿದನು.

**ಯುದ್ಧ ನಿರೋಧ ಸಂದೇಶ**

ಆಗ ಬುದ್ಧನು "ಈಗಿರುವಂತೆ, ಎಲ್ಲಿಯವರೆಗೆ ವಜ್ಜಿಯರು ಧರ್ಮಶೀಲರಾಗಿರುವರೋ, ಎಲ್ಲಿಯವರೆಗೆ ಅವರು ಒಕ್ಕಟ್ಟನಿಂದಿದ್ದು ರಾಜ್ಯಾಡಳಿತದ ಕಟ್ಟುಪಾಡಿನ ವ್ಯವಸ್ಥೆಯನ್ನು ಈಗಿರುವಂತೆ ಉಳಿಸಿಕೊಂಡಿರುವರೋ, ಎಲ್ಲಿಯವರೆಗೆ ಅವರು ಈಗಿನಂತೆ 'ಸನ್ನಿಪಾತ' ಭೇರಿರವವನ್ನು ಕೇಳಿದೊಡನೆಯೇ ಎಲ್ಲ ಕೆಲಸಗಳನ್ನೂ ಬಿಟ್ಟು ಯುದ್ಧಸನ್ನದ್ಧರಾಗಿ ಪೌರುಷದಿಂದ ಓಡಿಬರುವರೋ, ಎಲ್ಲಿಯವರೆಗೆ ಅವರು ಸ್ತ್ರೀಯರನ್ನೆಂದೂ ಗದರಿಸದೆ ಈಗಿನಂತೆ ವಿನಯಸಂಪನ್ನರೂ ಸುಸಂಸ್ಕೃತರೂ ಆಗಿರುವರೋ, ಎಲ್ಲಿಯವರೆಗೆ ಅವರು ಅತಿಥಿಸತ್ಕಾರ ಮುಂತಾದ ಸತ್ಕಾರ್ಯಗಳಲ್ಲಿ ನಿರತರಾಗಿರುವರೋ ಅಲ್ಲಿಯವರೆಗೂ ಅವರನ್ನು ಯುದ್ಧದಲ್ಲಿ ಜಯಿಸುವುದು ಅಸಾಧ್ಯವೇ ಸರಿ" ಎಂದು ಆತನಿಗೆ ತಿಳಿಸಿ ಬೀಳ್ಕೊಂಡನು. ಆ ಬಳಿಕ ಸ್ವಲ್ಪ ಕಾಲದಲ್ಲಿಯೇ ಬುದ್ಧನು ತನ್ನ ಕೊನೆಯಸಲದ ಸಂಚಾರವನ್ನು ಕೈಕೊಂಡನು.

ಬುದ್ಧನು ತನ್ನ ಶಿಷ್ಯರೊಡನೆ ಅಂಬಲಟ್ಠಿಕಾ ಗ್ರಾಮಕ್ಕೂ ನಾಲಂದಕ್ಕೂ ಹೋಗಿ ಅಲ್ಲಿಂದ ಪಾಟಲೀ ಗ್ರಾಮವನ್ನು ಸೇರಿದನು.

**ಪಾಟಲೀ ಗ್ರಾಮದ ಅತಿಥಿಶಾಲೆಯ ಸ್ವೀಕಾರ**

(ಅದೇ ಮುಂದಿನ ಪಾಟಲೀಪುತ್ರ ನಗರ) ಅಲ್ಲಿದ್ದ ಉಪಾಸಕನೊಬ್ಬನು ಬುದ್ಧನನ್ನೂ ಆತನ ಶಿಷ್ಯರನ್ನೂ ಭಿಕ್ಷಕ್ಕೆ ಕರೆದು ಅತಿಥಿಶಾಲೆಯೊಂದನ್ನು ಸಂಘಕ್ಕೆ ಸಮರ್ಪಿಸಿದನು. ಬುದ್ಧನು ಅದನ್ನು ಸ್ವೀಕರಿಸಿ, ಧಾರ್ಮಿಕ ಕಥಾಬೋಧೆಯಿಂದ ಅವನ ಮನಸ್ಸನ್ನು ಸಂತೋಷಪಡಿಸಿ, ಆ ಬಳಿಕ ಎಂದಿನಂತೆ ಪಾದಚಾರಿಯಾಗಿಯೇ ಪ್ರಯಾಣಮಾಡುತ್ತ ಮುಂದೆ ಹೊರಟನು. ಬುದ್ಧನೂ, ಆತನ ಶಿಷ್ಯರೂ ಕೋಟಿಗ್ರಾಮ, ನಂದಿಕಾಗ್ರಾಮ, ಮುಂತಾದವುಗಳ ಮಾರ್ಗವಾಗಿ ವೈಶಾಲೀ ನಗರದ ಸಮೀಪಕ್ಕೆ ಹೋಗಿ ಅಲ್ಲಿದ್ದ ಆಶ್ರಮದಲ್ಲಿಳಿದರು. ಆಗ ಬುದ್ಧನಿಗೆ ಎಪ್ಪತ್ತೊಂಬತ್ತು ವರುಷ ವಯಸ್ಸು. ಆ ಮಹಾನುಭಾವನ ಧರ್ಮಶ್ರದ್ಧೆಯು ಎಷ್ಟು ಉದಾತ್ತವಾದುದೆಂಬುದಕ್ಕೆ ವೃದ್ಧಾಪ್ಯದಲ್ಲಿ ಕೂಡ ಆತನು ಧರ್ಮೋದ್ಧಾರಕ್ಕಾಗಿ ಆ ರೀತಿ ಶ್ರಮಿಸುತ್ತಿದ್ದುದೇ ಸಾಕ್ಷಿ.

**ಅಂಬಾ ಪಾಲಿಯಿಂದ ಪಡೆದ ಸತ್ಕಾರ**

ವೈಶಾಲೀ ನಗರದ ಸಮೀಪದಲ್ಲಿ ಬುದ್ಧನು ಬಂದಿಳಿದ ಆಮ್ರವನವು ಅಂಬಾಪಾಲಿಯೆಂಬ ವೇಶ್ಯೆಗೆ ಸೇರಿದ್ದಿತು. ಅವಳು ಅಪಾರವಾದ ಸಂಪತ್ತಿಗೆ ಒಡತಿಯಾಗಿದ್ದಳು; ಬುದ್ಧನು ತನ್ನ ಆಮ್ರವನಕ್ಕೆ ಬಂದಿಳಿದುದರಿಂದ ತನ್ನ ಜನ್ಮವು ಸಾರ್ಥಕವಾಯಿತೆಂದು ಭಾವಿಸಿ, ಅತಿ ವೇಗವಾಗಿ ರಥವನ್ನು ಬಿಡಿಸಿಕೊಂಡು ಆಕೆಯು ಗುರುದರ್ಶನಕ್ಕಾಗಿ ಓಡಿಬಂದಳು. ಗುರುವಾದರೋ ಪಾವನಸ್ವರೂಪನಾದ ಕೃಪಾಳು. ಅಸ್ಪೃಶ್ಯನೆಂದು ಸಮಾಜವು ಹೊರದೂಡಿದ್ದ ಸುನೀತನಿಗೆ ಆಶ್ರಯಕೊಟ್ಟು ಉದ್ಧರಿಸಿದಂತೆಯೇ ಆತನು ಅಂಬಾಪಾಲಿಯನ್ನೂ ಆದರದಿಂದ ಕಂಡು ಧರ್ಮಬೋಧೆ ಮಾಡಿದನು. ಮಾರನೆಯದಿನ ತನ್ನ ಆತಿಥ್ಯವನ್ನು ಸ್ವೀಕರಿಸಿ ತನ್ನ ಮನೆಯನ್ನು ಪಾದಧೂಳಿಯಿಂದ ಪಾವನಗೊಳಿಸಬೇಕೆಂದು ಆಕೆಯು

ಬೇಡಿದಳು. ಗೌತಮ ಬುದ್ಧನು ಮೌನದಿಂದಿದ್ದು ತನ್ನ ಒಪ್ಪಿಗೆಯನ್ನು ಸೂಚಿಸಿದನು.

ತನಗೆ ಅಲಭ್ಯಲಾಭವು ದೊರೆಯಿತೆಂಬ ಸಂತೋಷದಿಂದ ಕೂಡಿ ರಥವನ್ನು ಬಹು ವೇಗವಾಗಿ ಬಿಡಿಸಿಕೊಂಡು ಆಕೆಯು ಹೊರಟಳು. ವೇಗದ ರಭಸದಲ್ಲಿ ರಥದ ಚಕ್ರವು ವೈಶಾಲಿಯಿಂದ ಬರುತ್ತಿದ್ದ ಲಿಚ್ಛವಿಯ ರಾಜಕುಮಾರರ ರಥದ ಚಕ್ರಕ್ಕೆ ತಗುಲಿತು. ಎರಡು ರಥಗಳೂ ನಿಂತುವು. ರಥವೇಗಕ್ಕೆ ಕಾರಣವನ್ನು ಅವರು ಕೇಳಿ, "ನಮ್ಮ ರಥಕ್ಕೆ ಹೀಗೇಕೆ ಅಡಚಣೆ ಮಾಡಿದೆ?" ಎಂದರು. ಅಂಬಾಪಾಲಿಯು "ಬುದ್ಧಗುರುವು ಶಿಷ್ಯ ಸಮೇತರಾಗಿ ನಾಳೆ ನಮ್ಮ ಮನೆಗೆ ಭೋಜನಕ್ಕೆ ಬರುತ್ತಾರೆ. ಅನೇಕ ಕಾರ್ಯಗಳು ನಡೆಯಬೇಕಾಗಿವೆ. ಆತುರದಿಂದ ಹೋಗುತ್ತಿದ್ದೆ" ಎಂದಳು.

ರಾಜಕುಮಾರರು ಬಂದಿದ್ದುದೂ ಮಾರನೆಯದಿನ ಬುದ್ಧನನ್ನು ಭಿಕ್ಷಕ್ಕೆ ಕರೆಯುವುದಕ್ಕಾಗಿಯೇ. ಅವರು "ಅಂಬಾಪಾಲಿ! ನಾಳೆ ಗುರುವನ್ನು ನಮ್ಮಲ್ಲಿಗೆ ಬಿಟ್ಟುಕೊಡು. ಅದಕ್ಕಾಗಿ ನಿನಗೆ ಒಂದು ಲಕ್ಷ ನಾಣ್ಯಗಳನ್ನಾದರೂ ಸಂತೋಷದಿಂದ ಕೊಡುತ್ತೇವೆ" ಎಂದರು. ಅದಕ್ಕೆ ಅಂಬಾಪಾಲಿಯು "ಆರ್ಯರೆ! ನೀವು ನಿಮ್ಮ ರಾಜ್ಯವನ್ನೇ ನನಗೆ ಕೊಟ್ಟರೂ ನಾಳಿನ ಭಾಗ್ಯವನ್ನು ಬಿಟ್ಟು ಕೊಡಲಾರೆ" ಎಂದು ಉತ್ತರ ಹೇಳಿ ಅವರಿಗೆ ಕೈಮುಗಿದು ಹೊರಟುಹೋದಳು. ಅವರು, "ಮೋಸವಾಯಿತು; ಮೋಸವಾಯಿತು" ಎಂದುಕೊಂಡು ಬುದ್ಧನ ಬಳಿಗೆ ಹೋಗಿ ಪ್ರಾರ್ಥಿಸಿದರು. ಬುದ್ಧನು, "ಅಂಬಾಪಾಲಿಯ ಆಹ್ವಾನವನ್ನು ಸ್ವೀಕರಿಸಿ ವಾಗ್ದಾನ ಮಾಡಿದ್ದೇನೆ" ಎಂದನು. ಅವರು ಸುಮ್ಮನಾಗಬೇಕಾಯಿತು.

ಮಾರನೆಯ ದಿನ ಅಂಬಾಪಾಲಿಯು ತನ್ನ ಸಂಪತ್ತಿಗನುರೂಪವಾದ ವೈಭವ ವಿತರಣೆಗಳಿಂದ ಸತ್ಕಾರಕೂಟವನ್ನೇರ್ಪಡಿಸಿದಳು. ನೂರಾರು ಮಂದಿ ದಾಸಿಯರಿಂದ ಪರಿವೃತಳಾಗಿ ಸೇವೆಯನ್ನೊಪ್ಪಿಸಿ

ಕೊಳ್ಳುತ್ತಿದ್ದವಳು, ಅಂಬಾಪಾಲಿ. ಅಂತಹವಳು ಶ್ರಮವನ್ನು ಪರಿಗಣಿಸದೆ ಬುದ್ಧನಿಗೂ, ಆತನ ಶಿಷ್ಯರಿಗೂ ಇತರ ಅತಿಥಿಗಳಿಗೂ ನಡೆದ ಸತ್ಕಾರದಲ್ಲಿ ಸೇವೆಗೆ ಸಿದ್ಧಳಾಗಿ ಶ್ರಮಿಸಿ ಆ ಸೇವೆಯಿಂದ ತನ್ನ ಜನ್ಮವೇ ಸಾರ್ಥಕವಾಯಿತೆಂದು ಭಾವಿಸಿದಳು. ಶ್ರದ್ಧಾಪ್ರಿಯನಾದ ಬುದ್ಧ ಗುರುವು ಧರ್ಮೋಪದೇಶದಿಂದ ಆಕೆಯನ್ನೂ ಇತರರನ್ನೂ ಸಂತೋಷ ಪಡಿಸಿದನು. ಅಂಬಾಪಾಲಿಯು ತನ್ನ ಆಮ್ರವನವನ್ನು ಭಿಕ್ಷು ಸಂಘಕ್ಕಾಗಿ ಬುದ್ಧನಿಗೆ ಸಮರ್ಪಿಸಿದಳು.

ಗೌತಮ ಬುದ್ಧನು ವೈಶಾಲೀ ನಗರದಿಂದ ವೇಲುವ ಗ್ರಾಮಕ್ಕೆ ಹೋದನು. ಆತನು ಅಲ್ಲಿ ರೋಗಗ್ರಸ್ತನಾಗಿ ಹಾಸಿಗೆ ಹಿಡಿದನು.

**ಬುದ್ಧ ಹೃದಯದ ಅಮೃತಲಹರಿ**

ರೋಗವು ಗುಣವಾಗುವುದು ಅಸಂಭವವೆನ್ನುವಷ್ಟು ಉಲ್ಬಣವಾಗಿದ್ದು ಕೊನೆಗೆ ಗುಣವಾಯಿತು. ಗುರುವು ಬದುಕಿದರೆ ಸಾಕೆಂದು ಕೋರುತ್ತ ಸತತವೂ ಪ್ರೀತ್ಯಾದರಗಳಿಂದ ಉಪಚರಿಸಿದ್ದ ಆನಂದನು ಸಂತೋಷಾಧಿಕ್ಯದಿಂದ, "ಭಗವನ್! ಕೊನೆಗೆ ಈ ಸುಖವನ್ನು ಕಂಡೆನು. ನನಗೆ ದಿಕ್ಕೇ ತೋರದಂತಾಗಿ ಶರೀರವು ಶೂನ್ಯವಾಗಿದ್ದಿತು. ಭಿಕ್ಷುಸಂಘಕ್ಕೆ ಸಂದೇಶ ಹೇಳದೆ ಪರಿನಿರ್ವಾಣ ವಾಗುವಂತಿಲ್ಲವೆಂಬುದು ನನಗಿದ್ದ ನಂಬಿಕೆ. ತಾವು ಸಂದೇಶ ಹೇಳದಿದ್ದುದನ್ನು ನೋಡಿದೆನು. ರೋಗವು ಗುಣವಾಗುವುದನ್ನು ತಾವು ಅರಿತಿದ್ದಿರೆಂದು ಅದರಿಂದ ಭಾವಿಸಿ ಸ್ವಲ್ಪ ಧೈರ್ಯದಿಂದಿದ್ದೆನು" ಎಂದನು. ಬುದ್ಧನು ಆನಂದನ ಮಾತುಗಳನ್ನು ಕೇಳಿ, "ಆನಂದ! ಭಿಕ್ಷುಸಂಘಕ್ಕೆ ನಾನು ಹೇಳಬೇಕಾದುದೇನಿದೆ? ಯಾವುದೊಂದನ್ನೂ ಮರೆಮಾಚದೆ ನಾನು ಧರ್ಮೋಪದೇಶ ಮಾಡಿದ್ದೇನೆ. ಆಚಾರ್ಯ ಮುಷ್ಟಿಯೆಂದು ರಹಸ್ಯವಾಗಿ ನಾನೇನನ್ನೂ ಉಳಿಸಿಟ್ಟುಕೊಂಡಿಲ್ಲ. 'ನಾನು ಭಿಕ್ಷುಸಂಘವನ್ನು ಧರಿಸಿ ಭರಿಸುತ್ತಿದ್ದೇನೆ. ಭಿಕ್ಷುಸಂಘವು ನನ್ನಿಂದ ನಿಂತಿದೆ' ಎಂದು ಭಾವಿಸಿರುವವನಾದರೆ ಸಂದೇಶವನ್ನು ಸಾರಬಲ್ಲನು. ಆನಂದ! ನಾನು ಆ ಬಗೆಯ ಭಾವನೆಯನ್ನೇ ಇಟ್ಟು

ಕೊಂಡಿಲ್ಲ. ಹೀಗಿರುವಲ್ಲಿ ಭಿಕ್ಷುಸಂಘಕ್ಕೆ ನಾನು ಯಾವ ಸಂದೇಶವನ್ನು ಕೊಡಲು ಸಮರ್ಥನು? ಆನಂದ! ನನಗೂ ವಯಸ್ಸಾಯಿತು. ಎಂಬತ್ತು ವರುಷ ವಯಸ್ಸಾಗುವುದರಲ್ಲಿರುವ ಜೀರ್ಣ ವೃದ್ಧನು ನಾನು. ನನ್ನ ಪ್ರಯಾಣವು ಮುಗಿಯುವ ಕಾಲವೂ ಸಮೀಪಿಸುತ್ತಿದೆ. ಹಗ್ಗದ ಬಿಗಿತದಿಂದ ನಿಂತಿರುವ ಹಳೆಯ ಮುರುಕಲು ಬಂಡಿಯಂತೆ ನನ್ನ ದೇಹವು ನಿಂತಿದೆ. ಆನಂದ! ವೇದನೆಗಳಿಗೆ ನಿರೋಧವುಂಟಾಗುವಂತೆ ನಿಮಿತ್ತರಹಿತ ಚಿತ್ತನಾಗಿ ಸಮಾಧಿಯನ್ನು ಪಡೆದು ನಾನು ವಿಹರಿಸುತ್ತಿರುವಾಗ ಮಾತ್ರ–ಆಗ ಮಾತ್ರ–ತಥಾಗತನ ಈ ಶರೀರವು ವೇದನಾರಹಿತವಾಗಿರುತ್ತದೆ; ಸುಖಮಯವಾಗಿರುತ್ತದೆ.* ಆದ ಕಾರಣ, ಆನಂದ! ನೀವೆಲ್ಲರೂ ಇದನ್ನು ಮನಸ್ಸಿನಲ್ಲಿಟ್ಟು ಆತ್ಮದೀಪಗಳಾಗಿರಿ! ಆತ್ಮಶರಣರಾಗಿರಿ! ಅನನ್ಯ ಶರಣರಾಗಿರಿ! ಧರ್ಮದೀಪಗಳಾಗಿ, ಧರ್ಮಶರಣರಾಗಿ ವಿಹರಿಸಿರಿ" ಎಂದು ತಿಳಿಸಿದನು. ಬುದ್ಧ ಹೃದಯದ ಅಮೃತಲಹರಿಯನ್ನು ಈ ವಾಕ್ಯಗಳು ಸ್ವಲ್ಪಮಟ್ಟಿಗೆ ಅನುಭವ ಮಾಡಿಕೊಡುತ್ತವೆ.

ಬುದ್ಧನು ಶಿಷ್ಯರೊಡನೆ ವೇಲುವ ಗ್ರಾಮದಿಂದ ಮಹಾವನ ಮಧ್ಯದಲ್ಲಿಪ್ಪ ಕೂಟಾಗಾರಕ್ಕೆ ಹೋದನು. ಅಲ್ಲಿ ನೆರೆದ ಭಿಕ್ಷುವೃಂದವನ್ನು ನೋಡಿ ಗುರುವಿಗೆ ಅತ್ಯಾನಂದವಾಯಿತು.

**ದೇಹಪಾತದ ಶಂಕೆ**

ಆಗ ಆತನು ಅವರನ್ನು ಕುರಿತು "ಭಿಕ್ಷುಗಳಿರಾ, ನಾನು ಉಪದೇಶಿಸಿರುವ ಧರ್ಮವನ್ನು ನೀವುಗಳೆಲ್ಲರೂ ನೆನಪಿಟ್ಟು ಶೀಲಸಂಪನ್ನರಾಗಿ ವಿಹರಿಸಿರಿ. ಭಾವನೆಗಳನ್ನು ಸರಿಯಾಗಿಟ್ಟುಕೊಳ್ಳಿರಿ. ಧರ್ಮೋನ್ನತಿಯನ್ನು ಸಾಧಿಸಿ ಧರ್ಮಪ್ರಚಾರ ಮಾಡಿರಿ. ಬ್ರಹ್ಮಚರ್ಯವನ್ನು

---

* ಬುದ್ಧನು ಕೇವಲ ತರ್ಕಮಯವಾದ ಆಲೋಚನಾ ಮಾತ್ರದಿಂದಲೇ ತತ್ತ್ವಸಾಕ್ಷಾತ್ಕಾರವನ್ನು ಪಡೆಯಲಿಲ್ಲವೆಂಬುದನ್ನೂ ಯೋಗಸಾಧನೆಗಳ ಸಹಾಯವನ್ನೂ ಪಡೆದು ಆತನು ತತ್ತ್ವಸಾಕ್ಷಾತ್ಕಾರ ಮಾಡಿಕೊಂಡನೆಂಬುದನ್ನೂ ಈ ವಾಕ್ಯವು ಚೆನ್ನಾಗಿ ಸೂಚಿಸುತ್ತದೆ.

ಕಾಪಾಡಿಕೊಂಡು ಆರ್ಯಾಷ್ಟಾಂಗಿಕ ಮಾರ್ಗವನ್ನಾಶ್ರಯಿಸಿರಿ. ಬಹು ಜನ ಹಿತಾರ್ಥವಾಗಿ ಬಹು ಜನ ಸುಖಾರ್ಥವಾಗಿ, ಲೋಕಾನು ಕಂಪಾರ್ಥವಾಗಿ ಕೆಲಸ ಮಾಡಿರಿ. ನಾನು ಇನ್ನು ಸ್ವಲ್ಪ ಕಾಲದಲ್ಲಿಯೇ ಪರಿನಿರ್ವಾಣ ಹೊಂದುತ್ತೇನೆ" ಎಂದು ಹೇಳಿದನು. ಕೂಟಾಗಾರ ದಿಂದ ಬುದ್ಧನು ಭಣ್ಡಗ್ರಾಮಕ್ಕೆ ಹೋಗಿ ಅಲ್ಲಿಂದ ಭೋಗನಗರವನ್ನು ಸೇರಿದನು. ಅಲ್ಲಿ ಭಿಕ್ಷುಗಳನ್ನು ಕುರಿತು, "ಪ್ರಿಯ ಭಿಕ್ಷುಗಳಿರಾ! ನಾನು ನಿಮಗೆ ಕೂಟಾಗಾರದಲ್ಲಿ ತಿಳಿಸಿದಂತೆ ಇನ್ನು ಸ್ವಲ್ಪ ಕಾಲ ದಲ್ಲಿಯೇ ಪರಿನಿರ್ವಾಣ ಹೊಂದುತ್ತೇನೆ. ಆ ಬಳಿಕ, 'ಬುದ್ಧನನ್ನು ಕೇಳಿ ಸಂಶಯ ನಿವೃತ್ತಿ ಮಾಡಿಕೊಳ್ಳಲಿಲ್ಲ' ಎಂದು ಯೋಚನೆ ಬಂದೀತು. ಸಂಶಯಗಳೇನಿದ್ದರೂ ಅವಶ್ಯವಾಗಿ ಕೇಳಿ ಪರಿಹಾರ ಮಾಡಿಕೊಳ್ಳಿರಿ" ಎಂದನು. ಯಾರೂ ಮಾತನಾಡಲಿಲ್ಲ. ಆ ಬಳಿಕ ಆನಂದನು, "ಯಾರಿಗೂ ಯಾವ ಸಂಶಯವೂ ಉಳಿದಿಲ್ಲವೆಂದು ತೋರುವುದು, "ಭಗವರ್ನ!" ಎಂದನು.

ಬುದ್ಧನು ಭಣ್ಡಗ್ರಾಮದಿಂದ ಪಾವಾ ಎಂಬ ಗ್ರಾಮಕ್ಕೆ ಹೋಗಿ ಅಲ್ಲಿಯ ಕಮ್ಮಾರ ಚುಂದನೆಂಬವನಿಗೆ ಸೇರಿದ ಮಾವಿನ ತೋಪಿನಲ್ಲಿಳಿದನು. ಬುದ್ಧನು ಬಂದಿದ್ದ ವಾರ್ತೆ ಯನ್ನು ಕೇಳಿ ಚುಂದನು ಆತನ ದರ್ಶನಕ್ಕಾಗಿ ತನ್ನ ಮಾವಿನ ತೋಪಿಗೆ ಹೋದನು. ಬುದ್ಧನು ಸಭಿಕರಿಗೆ ಉಪದೇಶಿಸುತ್ತಿದ್ದ ಧರ್ಮಕಥಾವಾಣಿ ಗಳನ್ನು ಅವನೂ ಆಲಿಸಿ ಆನಂದಿಸಿದನು. ಮಾರ ನೆಯ ದಿನದ ಭೋಜನಕ್ಕೆ ಶಿಷ್ಯರೊಡನೆ ತನ್ನ ಮನೆಗೆ ಬರಬೇಕೆಂದು ಚುಂದನು ಬುದ್ಧನನ್ನು ಪ್ರಾರ್ಥಿಸಿದನು. ಅವನ ಮನೆಯಲ್ಲಿ "ಸೂಕರ ಮದ್ದವ"* ಎಂಬ ಜಾತಿಯ ಅಣಬೆಯಿಂದ ಅಡಿಗೆ ಮಾಡಿ

**ಬುದ್ಧನ ಕೊನೆಯ ಊಟ**

---

* ಕೆಲವರು ಸೂಕರ ಮದ್ದವವೆಂದರೆ ಹಂದಿಯ ಮಾಂಸವೆಂದೂ ಅದನ್ನು ತಿಂದು ಬುದ್ಧನು ಮೃತನಾದನೆಂದೂ ಅಭಿಪ್ರಾಯಪಡುತ್ತಾರೆ. ಇದು ತಪ್ಪು ಅಭಿ ಪ್ರಾಯ. ಈ ವಿಚಾರವನ್ನು ಕುರಿತು ಮುನ್ನುಡಿಯಲ್ಲಿ ಚರ್ಚಿಸಿದೆ. ಅದನ್ನು

ಷ್ಟರು. ಆ ಅಣಬೆಯಲ್ಲಿ ಅನಾರೋಗ್ಯಕರವಾದ ವಿಷವುಳ್ಳ ಜಾತಿಯೂ ಒಂದುಂಟು. ಪ್ರಮಾದವಶದಿಂದ ಚುಂದನ ಮನೆಯ ಅಡಿಗೆಗೆ ಆ ವಿಷದ ಜಾತಿಯ ಅಣಬೆಯೇ ಸೇರಿದ್ದಿತು. ಬುದ್ಧನೇ ಮೊಟ್ಟ ಮೊದಲು ಊಟಕ್ಕೆ ಪ್ರಾರಂಭ ಮಾಡಿದವನು. ಒಂದೆರಡು ಕಬಳಗಳನ್ನು ಸ್ವೀಕರಿಸುವಷ್ಟರಲ್ಲಿ ಬುದ್ಧನಿಗೆ ನಿಜಸ್ಥಿತಿಯು ಗೋಚರಿಸಿತು. ಉಳಿದವರು ಆ ಅಣಬೆ ಸೇರಿದ್ದ ವಸ್ತುವನ್ನು ತಿನ್ನದಂತೆ ಒಡನೆಯೇ ಬುದ್ಧನು ಎಚ್ಚರಿಸಿದನು. ಅಂದಿನದೇ ಬುದ್ಧನಿಗೆ ಕೊನೆಯ ಭೋಜನ. ಆ ಅಣಬೆಯ ವಿಷದಿಂದ ಬಹಳ ಉಲ್ಬಣವಾದ ಅತಿಸಾರ ರೋಗವು ಸಂಭವಿಸಿತು.

**ಚರಮದಶೆ**

ಬುದ್ಧನು ಪಾವಾಗ್ರಾಮದಿಂದ ಕುಸೀನಾರಾ ಗ್ರಾಮಕ್ಕೆ ಹೊರಟನು. ಆತನು ರೋಗಗ್ರಸ್ತನಾಗಿದ್ದುದರಿಂದ ಮಾರ್ಗಮಧ್ಯದಲ್ಲಿ ವಿಶ್ರಮಿಸಿಕೊಳ್ಳಲು ಒಂದು ಮರದ ಕೆಳಗೆ ಕುಳಿತನು. ಆರಾಡ ಕಾಲಾಮನ ಶಿಷ್ಯನಾಗಿದ್ದವನೊಬ್ಬನು ಅದೇ ಮಾರ್ಗವಾಗಿ ಹೋಗುತ್ತಿದ್ದು ಬುದ್ಧನನ್ನು ಕಂಡು ಆಶ್ಚರ್ಯಚಕಿತನಾಗಿ ಬುದ್ಧನಿಗೆ ನಮಸ್ಕಾರ ಮಾಡಿ ಧರ್ಮೋಪದೇಶವನ್ನು ಪಡೆದನು.

---

ದಯೆಯಿಟ್ಟು ನೋಡಿ. ದಾಸವಿಕ್ರಯ ಮಾಡುವವರೂ ಕಟುಕರೂ ಹೀನವೃತ್ತಿಯವರೆಂದೂ, ಆರ್ಯಾಷ್ಟಾಂಗಿಕ ಮಾರ್ಗದಲ್ಲಿ ಈ ವೃತ್ತಿಗಳು ನಿಷಿದ್ಧವೆಂದೂ ಬುದ್ಧನು ಹೇಳಿದ್ದಾನೆ. ತಿಳಿಯದೆ ಮಾಂಸವನ್ನು ತಿಂದರೆ ತಪ್ಪಿಲ್ಲವೆಂದು ಮಾತ್ರವೇ ದೇವದತ್ತ ಸುತ್ತದಲ್ಲಿ ಹೇಳಿದೆ. ಹೀಗಿದ್ದೂ ಆತನು ತಾನೇ ತಿಳಿದು ತಿಳಿದೂ ಹಂದಿಯ ಮಾಂಸವನ್ನು ತಿಂದನೆಂಬುದು ವಿಲಕ್ಷಣ ವಾದವೇ ಸರಿ. ಆತನು ಹಾಗೆ ಹಂದಿಯ ಮಾಂಸವನ್ನು ತಿನ್ನಲು ಸಮ್ಮತಿಸಿದ್ದರೆ, ಕಟುಕನ ವೃತ್ತಿಯು ಹೀನವೆನ್ನಲು ಕಾರಣವೇ ಇರುತ್ತಿರಲಿಲ್ಲ. ಸೂಕರ ಮದ್ದವ (ಸೂಕರ ಮಾರ್ದವ) ಎಂಬುದಕ್ಕೆ ಅನಯುವಾರ್ಥಮಾಡಿ ಹಂದಿಯ ಮಾಂಸವೆಂದು ಸೂಚಿಸುವುದು ತಪ್ಪು.

ಬುದ್ಧನು ದಾರಿಯಲ್ಲಿ ದಣಿವಾರಿಸಿಕೊಂಡು ಆ ಬಳಿಕ ಕಕುಸ್ಥಾ ನದಿಗೆ ಹೋಗಿ ಸ್ನಾನಮಾಡಿ, ತೀರದಲ್ಲಿದ್ದ ಮಾವಿನ ತೋಪಿನಲ್ಲಿ ತನಗೆ ಹಾಸಿಕೊಡಬೇಕೆಂದು ಚುಂದನನ್ನು ಕೇಳಿದನು; ಅಲ್ಲಿ ಸ್ವಲ್ಪ ಕಾಲ ವಿಶ್ರಮಿಸಿಕೊಂಡು, ಮುಂದೆ ಹೊರಡಲನುವಾದನು. ಗುರುವಿಗೆ ರೋಗ ಬಂದುದಕ್ಕೆ ತನ್ನ ಮನೆಯ ಭೋಜನವೇ ಕಾರಣವಾಯಿತೆಂದು ಚುಂದನು ಸಂಕಟಪಡುತ್ತಿದ್ದನು. ಬುದ್ಧನು ಕರುಣಾ ದೃಷ್ಟಿಯಿಂದ ಕೂಡಿ, "ಚುಂದ! ಈ ನಿನ್ನ ಚಿಂತೆಯನ್ನು ದೂರ ಮಾಡು. ತಥಾಗತನು ಬುದ್ಧತ್ವವನ್ನು ಪಡೆಯುವುದಕ್ಕೆ ಪೂರ್ವಭಾವಿಯಾದ ಊಟವೂ, ತಥಾಗತನು ದುಃಖಕಾರಣರಹಿತವಾದ ಪರಿನಿರ್ವಾಣವನ್ನು ಹೊಂದುವುದಕ್ಕೆ ಪೂರ್ವಭಾವಿಯಾದ ಕೊನೆಯ ಊಟವೂ ಬಹು ಮುಖ್ಯವಾದವುಗಳು. ಆದಕಾರಣ, ಕೊನೆಯ ಊಟವನ್ನೊದಗಿಸಿದ ನೀನು ಪುಣ್ಯಾತ್ಮನೇ ಆಗಿರುವೆ" ಎಂದು ಚುಂದನಿಗೆ ಸಮಾಧಾನ ಹೇಳಿದನಂತೆ. ಬುದ್ಧಗುರುವಿನ ಕಾರುಣ್ಯಕ್ಕೂ, ಸೌಹಾರ್ದಕ್ಕೂ ಪಾರವುಂಟೆ?

ಬುದ್ಧನು ಕಕುಸ್ಥಾ ತೀರದ ಮಾವಿನ ತೋಪಿನಿಂದ ಹೊರಟು ಶಿಷ್ಯರೊಡನೆ ಮಲ್ಲರ ಊರಾದ ಕುಸೀನಾರಾ ಗ್ರಾಮಕ್ಕೆ ಸಮೀಪದಲ್ಲಿ ಹಿರಣ್ಯವತೀ ತೀರದಲ್ಲಿದ್ದ ಸಾಲವನಕ್ಕೆ ಹೋದನು. ಆ ವೇಳೆಗೆ ಆತನಿಗೆ ಬಹಳ ನಿತ್ರಾಣವಾಯಿತು. ಎರಡು ಸಾಲವೃಕ್ಷಗಳ ಮಧ್ಯದಲ್ಲೊಂದು ಮಂಚವನ್ನು ಹಾಕಿ ಆನಂದನು ಹಾಸಿಗೆಯನ್ನು ಸಿದ್ಧಮಾಡಿದನು. ಗುರುವು ಅದರ ಮೇಲೆ ಮಲಗಿದನು. ಅಂದು ರಾತ್ರಿಯೇ ಬುದ್ಧನು ಮಹಾಪರಿನಿರ್ವಾಣ ಹೊಂದುವವನಾಗಿದ್ದನು.

**ಆನಂದನಿಗೆ ಸಮಾಧಾನ**

ಬುದ್ಧನು ಇನ್ನು ಬದುಕಿರುವುದಿಲ್ಲವೆಂಬುದನ್ನರಿತು ಆನಂದನಿಗೆ ಬಹಳ ದುಃಖವಾಯಿತು. ತಾನು ಧನ್ಯನಾಗಬೇಕೆಂಬ ಉದ್ದೇಶದಿಂದ ಮಾತ್ರವೇ ಬುದ್ಧನ ಸೇವೆಯನ್ನು ಕೈಕೊಂಡವನು ಆನಂದ. ಆಹಾರ ವಿಹಾರಗಳಲ್ಲಾಗಲಿ, ವಸ್ತ್ರದಲ್ಲಾಗಲಿ, ವಾಸ

ಸ್ಥಾನದ ವಿಚಾರದಲ್ಲಾಗಲಿ, ಅಥವಾ ಬುದ್ಧನೊಡನೆ ಭೋಜನಕ್ಕೆ ಕರೆದುಕೊಂಡು ಹೋಗುವುದರಲ್ಲಾಗಲಿ, ಇತರ ಶಿಷ್ಯರಿಗಿಂತ ಹೆಚ್ಚಿನ ಪ್ರಾಶಸ್ತ್ಯವಾವುದನ್ನೂ ತನಗೆ ತೋರಿಸಕೂಡದೆಂದು ಪ್ರಾರ್ಥಿಸಿ ಬುದ್ಧನ ಸೇವೆಗೆ ಬಂದ ಸ್ವಾರ್ಥರಹಿತನಾದ ಸಾತ್ವಿಕ ಪ್ರೇಮಿಯು ವನು. ಆದಕಾರಣ, ತಾನು ನಾಲ್ವತ್ತೈದು ವರುಷಗಳಿಂದ ಸಾಮಾನ್ಯವಾಗಿಯೂ, ಇಪ್ಪತ್ತೆಂಟು ವರುಷಗಳಿಂದ ವಿಶೇಷ ವಾಗಿಯೂ, ನೆರವೇರಿಸಿದ್ದ ಸೇವೆಯು ಇನ್ನು ತನಗಿಲ್ಲದೆ ಹೋಗುವು ದೆಂದು ಸಂಕಟಪಡುತ್ತ ದೂರವಾಗಿ ಹೋಗಿ ಬಿಕ್ಕಿಬಿಕ್ಕಿ ಅಳತೊಡಗಿ ದನು. ಬುದ್ಧನು "ಭಿಕ್ಷುಗಳೇ! ಆನಂದನೆಲ್ಲಿ?" ಎಂದು ಕೇಳಿದನು. ಆನಂದನು ಅಳುತ್ತಿರುವ ಸಂಗತಿಯನ್ನು ಕೇಳಿ ಅವನನ್ನು ತನ್ನ ಬಳಿಗೆ ಬರಮಾಡಿಕೊಂಡು ಆದರದಿಂದ ತಲೆದಡವಿ, "ಬೇಡ ಆನಂದ ರೋದಿಸಬೇಡ. ಪ್ರಿಯರಾದವರನ್ನೂ ಅಗಲಲೇಬೇಕು, ಆನಂದ. ಇದಕ್ಕೇಕೆ ಶೋಕ? ಜನಿಸಿದ ಮೇಲೆ ನಾಶವು ಕಾದಿರುತ್ತದೆ. ಅದು ತಪ್ಪುವಂತಿಲ್ಲಪ್ಪ. ಆನಂದ! ನೀನು ಚಿರಕಾಲ ಶ್ರದ್ಧೆಯಿಂದಲೂ, ಮೈತ್ರಿಯಿಂದಲೂ ನನ್ನ ಸೇವೆಮಾಡಿರುವೆ. ತ್ರಿಕರಣಶುದ್ಧಿಯಾಗಿ ಪ್ರೇಮದಿಂದ ದುಡಿದಿರುವೆ. ದುಃಖಿಸಬೇಡ, ಆನಂದ" ಎಂದು ಬುದ್ಧನು ಸಮಾಧಾನ ಹೇಳಿದನು.

**ಸುಭದ್ರನ ಸಂಶಯ ನಿವೃತ್ತಿ**

ಕುಸೀನಾರಾ ಗ್ರಾಮದಲ್ಲಿ ಆಗ್ಗೆ ವಾಸವಾಗಿದ್ದ ಸುಭದ್ರನೆಂಬ ಪರಿವ್ರಾಜಕನು ಬುದ್ಧನ ನಿರ್ವಾಣವಾದಮೇಲೆ ತನ್ನ ಸಂಶಯನಿವೃತ್ತಿ ಮಾಡುವವರಾರೂ ದೊರೆಯರೆಂದು ಯೋಚಿಸಿ ಆನಂದನಲ್ಲಿಗೆ ಬಂದು ತನ್ನ ಆಶಯವನ್ನು ತಿಳಿಸಿದನು. ಆನಂದನು "ಗುರುವಿಗೆ ಬಹಳ ನಿತ್ರಾಣವಾಗಿದೆ. ಮಾತನಾಡುವುದು ಬಹಳ ತೊಂದರೆಯಾಗುತ್ತದೆ" ಎಂದನು. ಸುಭದ್ರನು, "ನನಗೆ ಕೆಲವು ಸಂಶಯಗಳುಂಟಾಗಿವೆ. ಅವುಗಳನ್ನು ಪರಿಹರಿಸಿ

ಕೊಳ್ಳುವುದಕ್ಕಾಗಿ ಬುದ್ಧದರ್ಶನಕ್ಕೆ ಬಂದೆನು" ಎಂದನು. ಆನಂದ ಸುಭದ್ರರ ಸಂಭಾಷಣೆಯು ಅಲ್ಲಿಗೆ ಸಮೀಪದಲ್ಲಿಯೇ ಮಲಗಿದ್ದ ಬುದ್ಧನಿಗೆ ಕೇಳಿಸಿತು. ಆಗಿನ ಸ್ಥಿತಿಯಲ್ಲಿಯೂ ಆತನು ಬೋಧನೆಗೆ ಸಿದ್ಧವಾಗಿ "ಬೇಡ, ಆನಂದ, ಸುಭದ್ರನನ್ನು ತಡೆಯಬೇಡ. ಅವನು ಜ್ಞಾನಾರ್ಜನೆಗಾಗಿ ಬಂದಿದ್ದಾನೆ. ನನಗೆ ತೊಂದರೆ ಕೊಡಬೇಕೆಂದು ಅವನು ಬಂದಿಲ್ಲ" ಎಂದನು. ಧರ್ಮಪ್ರಚಾರದ ವಿಷಯದಲ್ಲಿ ಬುದ್ಧನಿಗಿದ್ದ ತೀವ್ರಾಸಕ್ತಿಯೂ ಆತನ ಕೃಪಾಬುದ್ಧಿಯೂ ಇದರಿಂದ ಚೆನ್ನಾಗಿ ವ್ಯಕ್ತವಾಗುತ್ತವೆ. ಬುದ್ಧನು ಆಗಿನ ತನ್ನ ಸ್ಥಿತಿಯಲ್ಲಿಯೂ ಕಷ್ಟದಿಂದ ಮಾತನಾಡಿ ಸುಭದ್ರನ ಸಂಶಯಗಳನ್ನೆಲ್ಲ ನಿವೃತ್ತಿಮಾಡಿ ಅವನಿಗೆ ಜ್ಞಾನದಾನ ಮಾಡಿದನು. ಆ ಬಳಿಕ ಭಿಕ್ಷುಗಳನ್ನು ಕುರಿತು, "ಪ್ರಿಯಭಿಕ್ಷುಗಳಿರಾ! ಯಾರೊಬ್ಬರಿಗೆ ಯಾವ ಸಂಶಯವಿದ್ದರೂ ಈಗಲೇ ತಿಳಿಸಿಬಿಡಿ. ಅದನ್ನು ನಿವೃತ್ತಿಮಾಡಿಕೊಳ್ಳಿ. 'ಬುದ್ಧ ಸಮ್ಮುಖದಲ್ಲಿದ್ದಾಗ ಕೇಳದೆ ಹೋದೆವು' ಎಂದು ಆಮೇಲೆ ಪೇಚಾಡಬೇಡಿ. ಏನಿದ್ದರೂ ಈಗಲೇ ಕೇಳಿ" ಎಂದನು. ಭಿಕ್ಷುಗಳೆಲ್ಲರೂ ಏನನ್ನೂ ಪ್ರಶ್ನೆಮಾಡಲಿಲ್ಲ. ಅವರೆಲ್ಲರಿಗೂ ಸಂಶಯವಾವುದೂ ಉಳಿದಿರಲಿಲ್ಲವೆಂದರಿತು ಬುದ್ಧನು ಸುಮ್ಮನಾದನು.

ಅಂದು ರಾತ್ರಿಯೇ ಬುದ್ಧನ ಮಹಾಪರಿನಿರ್ವಾಣದ ರಾತ್ರಿ. ತತ್ತ್ವವಿಚಾರಗಳಲ್ಲಿ ಭಿಕ್ಷುಗಳೆಲ್ಲರಿಗೂ ಸಂದೇಹಗಳಿಲ್ಲದಿದ್ದುದನ್ನು ಕಂಡು ಆತನ ಮನಸ್ಸಿಗೆ ಸಂತೋಷವಾಯಿತು.

**ಮಹಾಪರಿ ನಿರ್ವಾಣ**

ಆತನು ಭಿಕ್ಷುಗಳನ್ನು ಕುರಿತು, "ಪ್ರಿಯ ಭಿಕ್ಷುಗಳಿರಾ! ಈಗ ಮತ್ತೊಮ್ಮೆ ನಿಮಗೆ ಹೇಳುತ್ತೇನೆ. ಜನಿಸಿದುದೆಲ್ಲವೂ ನಾಶವಾಗತಕ್ಕುದೇ ಸರಿ. 'ವ್ಯಯಧರ್ಮವು' ಅದರ ಸಂಗಡಲೇ ಸಿದ್ಧವಾಗಿದೆ. ಆದಕಾರಣ, ನೀವೆಲ್ಲರೂ ಪ್ರಮಾದರಹಿತರಾಗಿ ವರ್ತಿಸಿ ನಿರ್ವಾಣವನ್ನು ಸಾಧಿಸಿಕೊಳ್ಳಿರಿ" ಎಂದನು. ಅದೇ ಬುದ್ಧನಾಡಿದ ಕೊನೆಯ ಮಾತು

ಗಳು. ಬುದ್ಧನು ಆ ಬಳಿಕ ಧ್ಯಾನಮಗ್ನನಾದನು. *ಸಾಲವೃಕ್ಷಗಳಿಂದ ಆತನ ಮೇಲೆ ಹೂಗಳುದುರಿದುವು. ಬುದ್ಧನು ಪರಿನಿರ್ವಾಣ ಹೊಂದಿದ ಬಳಿಕ ತಮಗೆ ಗುರುಸೇವೆಯ ಭಾಗ್ಯವು ಇನ್ನು ದೊರೆಯದೆಂದೂ, ಜಗಚ್ಚಕ್ಷುವಾಗಿದ್ದವನು ಹೊರಟುಹೋದನೆಂದೂ ವೀತರಾಗಿಗಳಲ್ಲದ ಭಿಕ್ಷುಗಳೆಲ್ಲರೂ ದುಃಖಿಸಿದರು. ವೀತರಾಗವುಳ್ಳವರಾಗಿ ಪೂರ್ಣವೈರಾಗ್ಯದಿಂದ ಶೋಭಿಸುತ್ತ ಅರ್ಹತದಶೆಯಲ್ಲಿದ್ದ ಭಿಕ್ಷುಗಳು ಅವರನ್ನು ಸಂತೈಸಿ, ಬುದ್ಧನ ಉಪದೇಶಗಳನ್ನು ಅವರ ನೆನಪಿಗೆ ತಂದರು.

**ಶವಸಂಸ್ಕಾರ**

ಬುದ್ಧನು ಪರಿನಿರ್ವಾಣ ಹೊಂದಿದ ವಾರ್ತೆಯು ಆನಂದನಿಂದ ಮಾರನೆಯ ದಿನ ಬೆಳಗ್ಗೆ ಕುಸೀನಾರದ ಮಲ್ಲರಿಗೆ ತಿಳಿಯಿತು. ಬುದ್ಧನಿಗೆ ಕೊನೆಯ ಸಲ ತಮ್ಮ ಭಕ್ತಿ ಗೌರವಗಳನ್ನು ಸಮರ್ಪಿಸುವುದಕ್ಕಾಗಿ ಅವರೆಲ್ಲರೂ ಗಂಧ ಪುಷ್ಪ ವಾದ್ಯಾದಿಗಳೊಡನೆ ಆತನ ಶವವಿದ್ದೆಡೆಗೆ ಬಂದರು. ಶಿಷ್ಯರೆಲ್ಲರೂ ಸೇರಿ (ಮಲ್ಲರಿಗೆ ಸೇರಿದ್ದ) ಮುಕುಟ ಬಂಧನವೆಂಬ ಹೆಸರಿನ ಚೈತ್ಯಕ್ಕೆ ಶವವನ್ನು ತೆಗೆದುಕೊಂಡು ಹೋದರು.† ಬುದ್ಧನ ಶವಕ್ಕೆ ಮೃದುವಾದ ಹೊಸ ಬಟ್ಟೆ

---

* ಬುದ್ಧನಿಗೆ ಪ್ರಥಮಧ್ಯಾನವೂ, ಪ್ರಥಮ ಧ್ಯಾನದಿಂದ ದ್ವಿತೀಯ ಧ್ಯಾನವೂ, ದ್ವಿತೀಯ ಧ್ಯಾನದಿಂದ ತೃತೀಯಧ್ಯಾನವೂ, ಕೊನೆಗೆ ಚತುರ್ಥ ಧ್ಯಾನವೂ ಪ್ರಾಪ್ತವಾದುವು. ಆಕಾಶಾನನ್ತ್ಯಾಯತನ ಪ್ರಾಪ್ತಿಯೂ ವಿಜ್ಞಾನಾನನ್ತ್ಯಾಯತನ ಪ್ರಾಪ್ತಿಯೂ, ಆಕಿಂಚಿನ್ಯಾಯತನ ಪ್ರಾಪ್ತಿಯೂ, ನೈವಸಂಜ್ಞಾನಸಂಜ್ಞಾಯತನಪ್ರಾಪ್ತಿಯೂ, ಸಂಜ್ಞಾವೇದಯಿತನಿರೋಧ ಪ್ರಾಪ್ತಿಯೂ ಉಂಟಾಗಿ ಪರಿನಿರ್ವಾಣವು ಸಿದ್ಧಿಸಿತು.—ಮಹಾಪರಿನಿಬ್ಬಾಣಸುತ್ತ.

† ಬುದ್ಧನು ಪರಿನಿರ್ವಾಣ ಹೊಂದಿದ ಏಳನೆಯ ದಿನದವರೆಗೂ ಶವದ ಸುತ್ತಲೂ ಗಾನ ನೃತ್ಯಾದಿಗಳನ್ನು ನಡೆಯಿಸುತ್ತಿದ್ದು ಆ ಬಳಿಕ ಅವರು ಶವಸಂಸ್ಕಾರ ಮಾಡಿದರೆಂದು ಮಹಾಪರಿನಿಬ್ಬಾಣ ಸುತ್ತದಲ್ಲಿ ಹೇಳಿದೆ.

See page 173.

ಗಳನ್ನು ಸುತ್ತಿ ಅದನ್ನು ದೊಡ್ಡದೊಂದು ಕಬ್ಬಿಣದ ಕಟಾಹದಲ್ಲಿಟ್ಟು ಶಿಷ್ಯರು ಆ ಕಟಾಹವನ್ನು ಚಿತೆಯ ಮೇಲಕ್ಕೆ ಸಾಗಿಸಿ ಚಿತೆಗೆ ಬೆಂಕಿಯನ್ನು ಹೊತ್ತಿಸಿದರು.*

**ಸ್ತೂಪನಿರ್ಮಾಣ**

ಮಲ್ಲರು, ಮಗಧ ದೇಶದವರು, ಕಪಿಲವಸ್ತು ನಗರದವರು ಮುಂತಾದವರೆಲ್ಲರೂ ಬುದ್ಧನ ಮೂಳೆಗಳನ್ನು ತಮ್ಮ ತಮ್ಮ ನಾಡಿನಲ್ಲಿ ಭೂಸ್ಥಾಪನೆ ಮಾಡಿ ಸ್ತೂಪವನ್ನು ಕಟ್ಟಿಸಬೇಕೆಂದು ಬಯಸಿದರು. ಪವಿತ್ರ ಸ್ಮಾರಕಗಳೆಂದು ಅವರು ಭಾವಿಸಿದ್ದ ಬುದ್ಧನ ಅಸ್ಥಿಗಳು ನಮಗೆ ತಮಗೆಂದು ಅವರಲ್ಲಿ ಹೋರಾಟವು ಪ್ರಾರಂಭವಾಯಿತು. ಬುದ್ಧನು ತಮ್ಮ ನಾಡಿನಲ್ಲಿ ಪರಿನಿರ್ವಾಣ ಹೊಂದಿದ ಕಾರಣ, ಅಸ್ಥಿಗಳು ತಮಗೆ ಸೇರಬೇಕೆಂದು ಮಲ್ಲರೆಂದರು. ಬುದ್ಧನು ತಮ್ಮ ಜ್ಞಾತಿಯಾದುದರಿಂದ ಅವು ತಮಗೆ ಸೇರಬೇಕೆಂದು ಶಾಕ್ಯರು ಸೂಚಿಸಿದರು. ಬುದ್ಧನು ತನ್ನಲ್ಲಿ ಪರಮಾನುಗ್ರಹಮಾಡಿ ತನ್ನ ನಾಡಿನ ವೇಣುವನವನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದನೆಂದು ತಿಳಿಸಿ ಅಸ್ಥಿಗಳು ತನಗೆ ಸೇರಬೇಕೆಂದು ಅಜಾತಶತ್ರುವು ಹೇಳಿಕಳುಹಿಸಿದನು. ಕೊನೆಗೆ, ಅವರೆಲ್ಲರ ಗೌರವಕ್ಕೂ ಪಾತ್ರನಾಗಿದ್ದ ದ್ರೋಣನೆಂಬ ಬ್ರಾಹ್ಮಣನು "ತಾವೆಲ್ಲರೂ ಶಾಂತರಾಗಬೇಕು. ನನ್ನ ಮಾತುಗಳನ್ನು ಲಾಲಿಸಬೇಕು. ನಮ್ಮ ಬುದ್ಧಗುರುವು ಕ್ಷಮಾಮೂರ್ತಿ. ಆತನ ಶಿಷ್ಯರಾದ ನಾವು ವಿವಾದಮಾಡುವುದು ಯುಕ್ತವಲ್ಲ.

---

* ಬುದ್ಧನ ಶಿಷ್ಯರಲ್ಲೊಬ್ಬನಾದ ಕಾಶ್ಯಪನು ಗುರುವಿನ ದರ್ಶನಕ್ಕಾಗಿ ಪಾವಾದಿಂದ ಕುಶೀನಾರಾಗ್ರಾಮಕ್ಕೆ ಐನೂರು ಮಂದಿ ಭಿಕ್ಷುಗಳೊಡನೆ ಹೊರಟಿದ್ದ ಕಾರಣ, ಆತನೂ, ಭಿಕ್ಷುಗಳೂ ಬಂದು ವಂದನೆಗಳನ್ನು ಸಮರ್ಪಿಸುವವರೆಗೂ ಚಿಂತೆಗೆ ಬೆಂಕಿಯನ್ನು ಹೊತ್ತಿಸುವುದು ಸಾಧ್ಯವಾಗಲಿಲ್ಲವೆಂದೂ, ಆ ಬಳಿಕ ಚಿತೆಯು ತನ್ನಷ್ಟಕ್ಕೆ ತಾನೆ ಹೊತ್ತಿಕೊಂಡು ಉರಿಯಿತೆಂದೂ ಮಹಾಪರಿನಿಬ್ಬಾಣ ಸುತ್ತದಲ್ಲಿ ಹೇಳಿದೆ.

ತಾವೆಲ್ಲರೂ ಸಮ್ಮತಿಸುವುದಾದರೆ ಅಸ್ಥಿಗಳನ್ನು ಎಂಟು ಭಾಗಗಳಾಗಿ ಹಂಚುವೆನು" ಎಂದನು. ಇದು ಎಲ್ಲರಿಗೂ ಸಮರ್ಪಕವಾಗಿ ತೋರಿ, ವಿವಾದವು ತಪ್ಪಿತು. ದ್ರೋಣನು ಮೂಳೆಗಳನ್ನು ಎಂಟು ಭಾಗಗಳಾಗಿ ಹಂಚಿಕೆಮಾಡಿದನು. ಮಗಧರಾಜ್ಯದ ಅಜಾತಶತ್ರು, ಕಪಿಲವಸ್ತುವಿನ ಶಾಕ್ಯರು, ವೈಶಾಲೀ ನಗರದ ಲಿಚ್ಛವಿಯರು, ರಾಮಗ್ರಾಮದ ಕೋಲಿಯರು, ಪಾವಾಗ್ರಾಮದ ಮಲ್ಲರು, ಕುಸೀನಾರಾ ಗ್ರಾಮದ ಮಲ್ಲರು, ಮುಂತಾದವರಿಗೆ ಆ ಭಾಗಗಳು ದೊರೆತುವು. ಮೂಳೆಗಳು ಹಂಚಿಕೆಯಾದ ಮೇಲೆ ಪಿಪ್ಪಲೀ ವನದ ಮೋರಿಯರು ಪಾಲಿಗೆ ಬಂದರು. ದ್ರೋಣನು ಅವರಿಗೆ ಚಿತೆಯ ಬೂದಿಯನ್ನು ಕೊಟ್ಟು, ತಾನು ಕಟಾಹವನ್ನು ಭೂಸ್ಥಾಪನೆ ಮಾಡಿ ಸ್ತೂಪವನ್ನು ಕಟ್ಟಿಸಲು ಅದನ್ನಿಟ್ಟುಕೊಂಡನು. ಹೀಗೆ ಲಭಿಸಿದ ಪವಿತ್ರ ಸ್ಮಾರಕವಸ್ತುಗಳನ್ನು ಅವರೆಲ್ಲರೂ ರಾಜಮನ್ನಣೆಯಿಂದ ಸಾಗಿಸಿಕೊಂಡು ಹೋಗಿ ತಮ್ಮ ತಮ್ಮ ನಾಡಿನಲ್ಲಿ ಸ್ತೂಪವನ್ನು ಕಟ್ಟಿಸಿ ಗುರುಭಕ್ತಿಯನ್ನು ಪ್ರದರ್ಶಿಸಿ ಧನ್ಯರಾದರು. ಆ ಬಳಿಕ ಭಿಕ್ಷುಗಳೆಲ್ಲರೂ ಬುದ್ಧನು ಕರುಣಿಸಿದ್ದ ಬೌದ್ಧಧರ್ಮದ ಬೆಳುದೀವಿಗೆಯನ್ನು ಹಿಡಿದು ದೇಶ ವಿದೇಶಗಳಲ್ಲಿಯೂ ಧರ್ಮಪ್ರಸಾರಣೆಮಾಡುವ ಕಾರ್ಯಕ್ಕೆ ಉತ್ಸಾಹದಿಂದ ಹೊರಟರು. ಅವರೆಲ್ಲರೂ ತಮ್ಮ ಗುರುವಿನ ಉಪದೇಶವನ್ನೂ ಮೇಲ್ಪಙ್ಕ್ತಿಯನ್ನೂ ನೆನಪಿನಲ್ಲಿಟ್ಟುಕೊಂಡು ಆತನು ಸ್ಥಾಪಿಸಿದ ಧರ್ಮಸಾಮ್ರಾಜ್ಯವು ಮತ್ತಷ್ಟು ರೂಢಮೂಲವಾಗುವಂತೆ ಮಾಡಲು ಯಾವಜ್ಜೀವವೂ ಯಥಾಶಕ್ತಿಯಾಗಿ ಶ್ರಮಿಸಿ ಕೃತಾರ್ಥರಾದರು.

---

ಕ್ರಿ.ಪೂ. 546 April [illegible] ಬುಧವಾರ ವೈಶಾಖ [illegible]

ಬುದ್ಧ [illegible] ಕ್ರಿ. [illegible] 17 [illegible] ವೈಶಾಖ [illegible]

ಕ್ರಿ. [illegible] April 15 [illegible] ವೈಶಾಖ [illegible]

---

ವಿವಿಧ [illegible]

[illegible] :- 1. [illegible]

[illegible]

# ಹನ್ನೊಂದನೆಯ ಅಧ್ಯಾಯ

## ಅಂದಿನ ವಾತಾವರಣ

ಒಟ್ಟು ಜಗತ್ತಿನಲ್ಲಿಯೇ ಮೊಟ್ಟಮೊದಲನೆಯ ತತ್ತ್ವ ಸಂಶೋಧಕನಾದ ಅಘಮರ್ಷಣ ಮಹರ್ಷಿಯ ಕಾಲದಿಂದಲೂ ಜಿಜ್ಞಾಸುಗಳಿಗೂ, ದರ್ಶನಕಾರರಿಗೂ ಮತ ಸಿದ್ಧಾಂತ ಪ್ರತಿಪಾದಕರಿಗೂ ಭರತಖಂಡದಲ್ಲಿ ದೊರೆತಿರುವಷ್ಟು ಮಟ್ಟಿನ ಆಲೋಚನಾಸ್ವಾತಂತ್ರ್ಯವು ಮತ್ತೆಲ್ಲಿಯೂ ದೊರೆತಿಲ್ಲ. ಅಘಮರ್ಷಣ ಮಹರ್ಷಿಯು ವೇದಗಳ ಕಾಲದ ಮೊಟ್ಟಮೊದಲನೆಯ ತತ್ತ್ವವೇತ್ತನಾದ ಜಿಜ್ಞಾಸು. ಜಗತ್ತಿನ ಮತ್ತು ಜೀವನದ ರಹಸ್ಯವೇನೆಂಬ ವಿಚಾರಶೀಲತೆಯು ಪ್ರಾರಂಭವಾದುದು ಆತನಿಂದಲೇ. ಆತನ ತರುವಾಯ ದೀರ್ಘತಮಸ್ಸು, ವಿಶ್ವಕರ್ಮ, ಮಹಿದಾಸ, ಐತರೇಯ, ಯಾಜ್ಞವಲ್ಕ್ಯ, ಮುಂತಾದ ಅಸಂಖ್ಯಾತ ಮಂದಿ ತತ್ತ್ವವಿದರೂ ಮಹರ್ಷಿಗಳೂ ತಮ್ಮತಮ್ಮ ಸಾಧನಾ ಸಾಕ್ಷಾತ್ಕಾರಗಳಿಗನುಸಾರವಾಗಿ ವಿವಿಧ ರೀತಿಗಳಲ್ಲಿ ನಾನಾ ಸಿದ್ಧಾಂತಗಳನ್ನೂ ಏರ್ಪಡಿಸಿದರು. ಮುಂದೆ ಯಥಾಕಾಲದಲ್ಲಿ ಕರ್ಮಕಾಂಡವು ಶ್ರೇಷ್ಠವೆಂದೂ, ಜ್ಞಾನ ಕಾಂಡವು ಶ್ರೇಷ್ಠವೆಂದೂ ವಾದಗಳು ನಡೆಯಲುಪಕ್ರಮವಾದುವು. ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸಾ, ಉತ್ತರಮೀಮಾಂಸಾ, ಎಂಬ ವೈದಿಕ ದರ್ಶನಗಳೂ ಚಾರ್ವಾಕ ಮುಂತಾದ ಅವೈದಿಕ ದರ್ಶನಗಳೂ ಹುಟ್ಟಿ ಪ್ರಚುರವಾದುವು.

ಭಾರತೀಯ ದರ್ಶನಕಾರರ ಆಲೋಚನಾ ಸ್ವಾತಂತ್ರ್ಯ

ಯಜ್ಞಾದಿಗಳೇ ಮುಂತಾದ ಕರ್ಮಗಳಿಂದ ಫಲವಿಲ್ಲವೆಂದು ಬುದ್ಧನು ವಾದಿಸಿ ಹೊಸಮತವನ್ನು ಸ್ಥಾಪಿಸಿದನೆಂಬುದು ನಿಜವಾದರೂ ವೈದಿಕವಿದ್ಯೆಯಲ್ಲಿ ಆತನಿಗೆ ವಿಶೇಷ ಪರಿಶ್ರಮವಿದ್ದಿತೆಂಬು

ವೈದಿಕವಿದ್ಯೆಯಲ್ಲಿ ಬುದ್ಧನಿಗಿದ್ದ ಪರಿಶ್ರಮ

ದನ್ನೂ ಬೌದ್ಧಮತದ ಅನೇಕ ತತ್ತ್ವಗಳು ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ತತ್ತ್ವಗಳಿಗೆ ವಿರುದ್ಧವಾಗಿಲ್ಲವೆಂಬುದನ್ನೂ ಸಮಸ್ತರೂ ಒಪ್ಪಲೇಬೇಕು. ಬುದ್ಧನು ವೇದಕಾಲದ ಋಷಿಗಳ ವಿಚಾರಗಳನ್ನೆಲ್ಲ ಸಮಾಲೋಚಿಸಿ ವಿಮರ್ಶೆ ಮಾಡಿ ಅಷ್ಟಕ, ವಾಮಕ, ವಾಮದೇವ, ವಿಶ್ವಾಮಿತ್ರ, ಜಮದಗ್ನಿ, ಆಂಗಿರಸ, ಭರದ್ವಾಜ, ವಸಿಷ್ಠ, ಕಶ್ಯಪ, ಭೃಗು—ಈ ಹತ್ತುಮಂದಿಗಳೇ ಮಂತ್ರವಿದರಾದ ಪ್ರಾಚೀನಕಾಲದ ಮಹರ್ಷಿಗಳೆಂದು ತನ್ನ ಅಭಿಪ್ರಾಯವನ್ನು ಸೂಚಿಸಿದ್ದಾನೆ. (ತೇವಿಜ್ಜ ಸುತ್ತವನ್ನು ನೋಡಿ) ಸೃಷ್ಟಿಯ ವಿಷಯವಾಗಿ ಕೆಲವು ಋಕ್ಕುಗಳಲ್ಲಿ ಹೇಳಿರುವುದರ ಪ್ರಸ್ತಾವದ ಸಂಬಂಧದಲ್ಲಿ ಬುದ್ಧನು ಭಾರ್ಗವನೆಂಬವನನ್ನು ಕುರಿತು, “ಭಾರ್ಗವ! ಜಗತ್ತು ಈಶ್ವರ ನಿರ್ಮಿತವಾದುದೆಂದೂ, ಬ್ರಹ್ಮನಿರ್ಮಿತವಾದುದೆಂದೂ ತರ್ಕಿಸುವ ಆಚಾರ್ಯರೇ ಜಿಜ್ಞಾಸುಗಳಲ್ಲಿ ಅಗ್ರಗಣ್ಯರೆಂದು ಭಾವಿಸಿರುವ ಬ್ರಾಹ್ಮಣರೂ ಶ್ರಮಣರೂ ಇದ್ದಾರೆ. ಅಗ್ರಗಣ್ಯತೆಗೆ ಕಾರಣವಾದ ಈ ಬಗೆಯ ವಾದಗಳನ್ನೆಲ್ಲ ನಾನೂ ಬಲ್ಲೆನು. ಅದಕ್ಕಿಂತಲೂ ಹೆಚ್ಚಿನದನ್ನೂ ಬಲ್ಲೆನು”* ಎಂದು ಹೇಳಿದನಂತೆ.

ಭರತಖಂಡದ ಅಂದಿನ ಧಾರ್ಮಿಕ ಪರಿಸ್ಥಿತಿ

ಗೌತಮ ಬುದ್ಧನು ಅವತರಿಸುವ ವೇಳೆಗೆ ಅನೇಕ ವಿಚಾರಗಳಲ್ಲಿ ಅವ್ಯವಸ್ಥೆಯುಂಟಾಗಿದ್ದಿತು. ಹಲವು ವಿಷಯಗಳಲ್ಲಿ ವೈದಿಕ ಧರ್ಮವು ಜಿಲವಾಗಿ ಜನರು ತಿರುಳನ್ನು ಬಿಸುಟು ಸಿಪ್ಪೆಯಲ್ಲಿ ಆದರವನ್ನು ತೋರಿಸುತ್ತಿದ್ದರೆನ್ನಬಹುದು. ಉಪನಿಷತ್ತುಗಳಲ್ಲಿಯೂ, ಭಗವದ್ಗೀತೆ ಮುಂತಾದ

---

* “ಸನ್ತಿ ಭಗ್ಗವ ಸಮಣ ಬ್ರಾಹ್ಮಣಾ ಇಸ್ಸರ ಕುತ್ತಂ ಬ್ರಹ್ಮ ಕುತ್ತಂ ಆಚರಿಯಕಂ ಅಗ್ಗಣ್ಣಂ ಪಣ್ಣಪೆನ್ತಿ। ಅಗ್ಗಣ್ಣಂ ಚಾಹಂ ಭಗ್ಗವ ಪಜಾನಾಮಿ। ತತೋ ಚ ಉತ್ತರಿತರಂ ಪಜಾನಾಮಿ।”

—ದೀರ್ಘನಿಕಾಯ.

ಧಾರ್ಮಿಕ ಗ್ರಂಥಗಳಲ್ಲಿಯೂ ಹೇಳಿದ್ದ ಉದಾತ್ತ ತತ್ತ್ವಗಳನ್ನರಿತು ಅನುಸಂಧಾನ ಮಾಡುತ್ತಿದ್ದವರು ಅಲ್ಲಲ್ಲಿ ಕೆಲವರಿದ್ದುದು ನಿಜ ವಾದರೂ, ಜ್ಞಾನವಿಹೀನರ ಬಹಿರಾಡಂಬರದ ಪ್ರಭಾವದಿಂದ ಆ ಉದಾತ್ತ ತತ್ತ್ವಗಳ ಅಮೃತಲಹರಿಯು ಜನಸಾಮಾನ್ಯಕ್ಕೆ ಲಭಿಸ ದಂತೆ ಅಡಚಣೆಯುಂಟಾಗಿ ವಿಲಕ್ಷಣ ಸಿದ್ಧಾಂತಗಳೇರ್ಪಟ್ಟಿದ್ದುವು. ಜೀವಾತ್ಮನು ಶಾಶ್ವತನಾದ ಕಾರಣ, ಪ್ರಾಣಿವಧೆಯೇನೂ ದೋಷಾ ವಹವಲ್ಲವೆಂದೂ, ಜಗತ್ತಿನ ಸಮಸ್ತ ಮಾನವರನ್ನೂ ಕೊಂದು ಅವರ ದೇಹಗಳನ್ನು ಮಾಂಸದ ಮುದ್ದೆಯಾಗಿ ಪರಿಣಾಮಗೊಳಿಸಿದರೂ ಬಾಧಕವಿಲ್ಲವೆಂದೂ, ಜೀವನು ನಿಷ್ಕ್ರಿಯನಾದುದರಿಂದ ಪುಣ್ಯ ಪಾಪಗಳ ಫಲವೇ ಅವನಿಗಿಲ್ಲವೆಂದೂ ಪೂರ್ಣಕಶ್ಯಪನೆಂಬ ಪರಿ ವ್ರಾಜಕನು ಸಿದ್ಧಾಂತವನ್ನೇರ್ಪಡಿಸಿ ಹಲವರು ಅನುಯಾಯಿಗಳನ್ನು ಸಂಪಾದಿಸಿದ್ದುದನ್ನು ನಿದರ್ಶನಕ್ಕಾಗಿ ಇಲ್ಲಿ ಸೂಚಿಸಬಹುದಾಗಿದೆ. ಪಾಪ ಪುಣ್ಯಗಳ ಫಲವೇ ಮಾನವನನ್ನು ಸೋಂಕುವ ಹಾಗಿಲ್ಲವೆಂಬ ಅಹೇತು ವಾದವನ್ನು ಹೂಡಿದ ಪೂರ್ಣಕಶ್ಯಪನಿಗೆ ಪೂರ್ಣಜ್ಞಾನಿ ಯೆಂಬ ಬಿರುದಂತೆ. ಅವನಿಗೆ ಆ ಬಿರುದು ಇದ್ದುದರಿಂದ, ಅವನನ್ನು ಪೂರ್ಣಕಶ್ಯಪನೆಂದು ಜನರು ಕರೆಯುತ್ತಿದ್ದರು. ಅವನಿಗೆ ಪೂರಣ ಕಶ್ಯಪನೆಂದೂ ಹೆಸರು. ಜ್ಞಾನಿಯು ವಧೆಮಾಡಿದರೂ ಕರ್ಮಫಲವು ಆತನನ್ನು ಸೋಂಕದೆಂಬ ಅಂಶವನ್ನು ಗೀತಾಚಾರ್ಯನೇ ಮುಂತಾದ ವರು ಪ್ರತಿಪಾದಿಸಿದ್ದುದರ ಆಶಯವೇನೆಂಬುದನ್ನೂ, ಭೋಗವಿರಾಗ ವನ್ನೂ ಶಮದಮಾದಿ ಸಂಪತ್ತಿಯನ್ನೂ ಪಡೆದಲ್ಲದೆ ಜ್ಞಾನಸಾಧನೆಗೆ ಅಧಿಕಾರ ಸಿದ್ಧಿಯಿಲ್ಲವಾದಕಾರಣ ಜ್ಞಾನಿಯು ಪಾಪಕಾರ್ಯಗಳಲ್ಲಿಯ ಪ್ರವೃತ್ತಿಯನ್ನೇ ಕಳೆದುಕೊಂಡಿರುವನೆಂಬುದನ್ನೂ, ಮರೆತು ಪೂರ್ಣ ಕಶ್ಯಪನೇ ಮುಂತಾದವರು ಭಯಂಕರವಾದ ಸಿದ್ಧಾಂತಗಳನ್ನೇ ರ್ಪಡಿಸಿದ್ದರು. ಜ್ಞಾನಸಾಧನೆಯ ವಿಚಾರದಲ್ಲಿ ಈ ಬಗೆಯ ಅವ್ಯವಸ್ಥೆಯುಂಟಾಗಿದ್ದಿತು.

ಕರ್ಮಾಚರಣೆಯ ವಿಚಾರದಲ್ಲಿ ಇನ್ನೂ ವೈಪರೀತ್ಯಕ್ಕೆ ಪ್ರಾರಂಭವಾಯಿತು. ಕರ್ಮಗಳಿಗೆ ಜೀವಕಳೆಯನ್ನಿತ್ತು ಬೆಳಗಿ ಸುತ್ತಿದ್ದ ಮನೋಜ್ಞವಾದ ಭಾವನೆಗಳು ಮಾಯವಾಗಿ ಕರ್ಮಾ ಚರಣೆಯ ಬಾಹ್ಯಾಡಂಬರಗಳೇ ವಿಜೃಂಭಿಸುತ್ತಿದ್ದುವು. ಬುದ್ಧನು ಆಗಿನ ಜನರ ಸ್ಥಿತಿಯನ್ನು ನೋಡಿ ಮನಸ್ಸೊಂದು ಅವರಿಗಾಗಿ ಮರುಗಿದನು. ನಾನಾ ಬಗೆಗಳ ಕಾಯಕ್ಲೇಶಗಳೇ ತಪಸ್ಸೆಂದು ಭಾವಿಸಿ ಮೂಢರು ಅವುಗಳಿಂದ ಕಾಯಶುದ್ಧಿಯನ್ನು ಬಯಸುತ್ತಿದ್ದು ದನ್ನೂ, ಗೋವ್ರತ, ಮೃಗವ್ರತ, ಅಶ್ವವ್ರತ, ವರಾಹವ್ರತ, ವಾನರ ವ್ರತ, ಹಸ್ತಿವ್ರತ ಮುಂತಾದವುಗಳನ್ನಾಚರಿಸುತ್ತಿದ್ದುದನ್ನೂ, ಕೆಲ ವರು ವೀರಾಸನ ಹಾಕಿ ಮೌನದಿಂದ ಕುಳಿತಿರುವುದೇ ಮುಂತಾದ ವರ್ತನೆಗಳಿಂದ ಶ್ರೇಷ್ಠತ್ವವನ್ನು ಬಯಸುತ್ತಿದ್ದುದನ್ನೂ, ಅನೇಕರು ಮಿಥ್ಯಾಮಾರ್ಗವನ್ನನುಸರಿಸಿ ಅಶರಣ ಪದಾರ್ಥಗಳಲ್ಲಿ ಶರಣ್ಯ ಬುದ್ಧಿಯನ್ನಿಟ್ಟುಕೊಂಡು, ಅಮಂಗಳದಲ್ಲಿ ಮಂಗಳ ಭಾವನೆಯಿಂದ ಕೂಡಿ ಕೇವಲ ಅಶುದ್ಧರಾಗಿದ್ದೂ ಶುದ್ಧರೆಂದು ಭಾವಿಸಿಕೊಂಡಿದ್ದು ದನ್ನೂ, ಆತನು ಸೂಚಿಸಿದುದಾಗಿ ಲಲಿತವಿಸ್ತರದಲ್ಲಿ ಹೇಳಿದೆ.*

ಅನೇಕಮಂದಿ ಪಂಡಿತರು ಹೇಳಿರುವಂತೆ, ಸಾಮಾಜಿಕ ಸ್ಥಿತಿಯು ಹಲವು ವಿಚಾರಗಳಲ್ಲಿ ಆಗ್ಗೆ ಹೀನದಶೆಗೆ ಗುರಿಯಾಗಿದ್ದಿತು. ಹಿಂದೆ ತತ್ತ್ವಾನುಸಂಧಾನದ ತನಿಬೆಳಕಿನಲ್ಲಿ ಓಲಾಡುತ್ತ ಮಾರ್ಗದರ್ಶಕ ರಾಗಿದ್ದವರ ವಂಶೀಯರೇ ತಮ್ಮ ಪೂರ್ವಿಕರಿಗಿದ್ದ ಸಂಯಮ ಸಜ್ಞಾ

---

* "..........................ನಾನಾವಿಧೈಶ್ಚ ತಾಪನ ಪರಿತಾಪನೈಃ ಕಾಯ ಶುದ್ಧಿಂ ಪರ್ಯೇಷನ್ತೇ ಪ್ರಜ್ಞಾಪಯನ್ತಿ ಚ ಸಂಮೂಢಾಃ।...................... ...............ಗೋವ್ರತ ಮೃಗಾಶ್ವ ವರಾಹ ವಾನರ ಹಸ್ತಿವ್ರತೈಶ್ಚ ಸ್ಥಾನ ಮೌನ ವೀರಾಸನೈಶ್ಚ ಏಕಾಲಾಪಕೈರ್ಯಾವತ್ಸಪ್ತಾಲಾಪಕೈಃ।...................... ಮಿಥ್ಯಾಮಾರ್ಗಪ್ರಯಾತಾ ಅಶರಣೇ ಶರಣಸಂಜ್ಞಿನೋಽಮಂಗಲ್ಯೇಮಂಗಲ ಸಂಜ್ಞಿನೋಽಶುದ್ಧಾಃ ಶುದ್ಧಿಂ ಮನ್ಯನ್ತೇ।" ಲಲಿತವಿಸ್ತರ. ೧೭ನೆಯ ಅಧ್ಯಾಯ.

ರಿತ್ರಗಳ ಅವಲಂಬನವನ್ನು ಕಳೆದುಕೊಂಡು ಸಂಪ್ರದಾಯ ಶರಣ ರಾದರು. ಸತ್ಯಶೋಧನೆಯ ದೂರದೃಷ್ಟಿಯು ಕಳಕಳಿಸುತ್ತಿದ್ದ ಕಣ್ಣುಗಳಲ್ಲಿ ವಿಲಕ್ಷಣವಾದ ಪೂರ್ವಾಚಾರ ಪ್ರೇಮದ ಪರೆಯು ಹುಟ್ಟಿತು. ಕೆಲವು ಮಂತ್ರಗಳನ್ನುಚ್ಚರಿಸಿ, ಕೆಲವು ಕರ್ಮಗಳನ್ನಾಚರಿಸಿದ ಮಾತ್ರಕ್ಕೇ ಪಾತಕಿಗಳಿಗೂ ಸಚ್ಚಾರಿತ್ರವಿಹೀನರಿಗೂ ಪರಮಪದವು ಲಭಿಸುವುದೆಂಬ ನಂಬಿಕೆಯೊಂದು ಕಡೆ; ಯೋಗಸಾಧನೆಯ ಶ್ರೇಷ್ಠ ಮಾರ್ಗವನ್ನು ಮರೆತು ಹಠಯೋಗದ ಇಂದ್ರಜಾಲಗಳನ್ನು ಹೂಡಿ, ಉಪವಾಸ ಮಾಡುವುದು, ಕಾಯ್ದ ಮರಳಿನ ಮೇಲೆ ಮಲಗುವುದು, ಮುಳ್ಳಿನ ಮೇಲೆ ಮಲಗುವುದು ಮುಂತಾದ ಕಾಯಕ್ಲೇಶಗಳೇ ತಪಸ್ಸೆಂದು ಭಾವಿಸಿದ್ದ ಆಶ್ರಮವಾಸಿಗಳ ಹಾರಾಟವೊಂದು ಕಡೆ; ಐಹಿಕ ಭೋಗವೇ ಜೀವನಸರ್ವಸ್ವವೆಂದು ಬೋಧಿಸತೊಡಗಿದ ಲೋಕಾಯತರು, ವಾದಶೀಲರು, ವೈತಂಡಿಕರು ಮುಂತಾದ ನಾಸ್ತಿಕ ಪಂಥಗಳವರ ಮರುಳು ನುಡಿಗಳೊಂದು ಕಡೆ; ಸಮಾಜವನ್ನುದ್ಧರಿಸಿ ಜನರಿಗೆ ಜ್ಞಾನಬೋಧೆ ಮಾಡಬೇಕೆಂಬ ಸದುದ್ದೇಶದಿಂದ ಕೂಡಿದ್ದರೂ ತಪ್ಪು ದಾರಿಗೆ ಬಿದ್ದು ವಿಲಕ್ಷಣವಾದ ಶುಷ್ಕಸಿದ್ಧಾಂತಗಳನ್ನೇರ್ಪಡಿಸಿ ತಾವು ನೂತನದರ್ಶನಕಾರರೆಂದು ಉದ್ಘೋಷಿಸುತ್ತ ದೇಶದೇಶಗಳಲ್ಲಿಯೂ ಸಂಚರಿಸುತ್ತಿದ್ದ ಪರಿವ್ರಾಜಕರ ಆರ್ಭಟವೊಂದು ಕಡೆ;† ಇವುಗಳ ದೆಸೆಯಿಂದ ಒಟ್ಟಿನಲ್ಲಿ ಬಹಳ ಅವ್ಯವಸ್ಥೆಯುಂಟಾಯಿತು. ಉಪನಿಷತ್ತುಗಳ ಕಾಲದಲ್ಲಿಯೂ, ಆ ತರುವಾಯವೂ, ಮಂತ್ರವಿದರಾದ ಋಷಿಪುಂಗವರನೇಕರು ತಮ್ಮ ಬುದ್ಧಿಸಿದ್ಧಿಗಳ ಪ್ರಭಾವದಿಂದ

---

† ತಾನು ವಾದಕ್ಕೆ ಕುಳಿತರೆ ಎಂತಹವರೂ ನಡುಗಿಹೋಗುವರೆಂದೂ, ತನ್ನ ವಾದವೆದುರಿಗೆ ನಿರ್ಜೀವವಸ್ತುಗಳಾದ ಶಿಲಾಸ್ತಂಭಗಳು ಕೂಡ ಸಿಡಿದು ಹೋಗುವಲ್ಲಿ ಮನುಷ್ಯರ ಪಾಡೇನೆಂದೂ, ಬುದ್ಧನು ಮುಂತಾದವರಾರೂ ತನಗೆ ಲಕ್ಷ್ಯವಿಲ್ಲವೆಂದೂ ಸತ್ಯಕನೆಂಬವನೊಬ್ಬನು ಹೇಳಿಕೊಂಡು ತಿರುಗುತ್ತಿದ್ದುದನ್ನು ಇದಕ್ಕೊಂದು ನಿದರ್ಶನವಾಗಿ ಹೇಳಬಹುದು. ಸತ್ಯಕನು ಬುದ್ಧನೊಡನೆ ವಾದಮಾಡಿ ಸೋತುದನ್ನು ಹಿಂದೆಯೇ ತಿಳಿಸಿದ್ದೇವೆ.

ದಾನಮಾಡಿದ್ದ ಉದಾತ್ತ ತತ್ತ್ವಗಳನ್ನಾಶ್ರಯಿಸಿ ನಡೆಯುತ್ತಿದ್ದ ಮಹಾತ್ಮರು ಕೆಲವರಿದ್ದರಾದರೂ ಆ ಉದಾತ್ತತತ್ತ್ವಗಳು ಸಾಮಾನ್ಯ ಜನರ ಜೀವನಗಳನ್ನು ಬೆಳಗುವುದು ತಪ್ಪಿಹೋಗಿದ್ದಿತು. ಅಂಧಶ್ರದ್ಧೆ, ಪಶುಬಲಿ, ಅರ್ಥವಿಲ್ಲದ ವಿಲಕ್ಷಣ ಕರ್ಮಾಚರಣೆ, ಮುಂತಾದವು ಪ್ರಬಲವಾಗಿದ್ದುವು.

**ಬುದ್ಧನು ಖಂಡಿಸ ಬೇಕಾಗಿದ್ದ ಕೆಲವು ಪಂಥಗಳು**

ಬುದ್ಧನ ಸಮಕಾಲೀನರಾಗಿ ವಯಸ್ಸಿನಲ್ಲಿ ಅವನಿಗಿಂತಲೂ ಹಿರಿಯರಾಗಿದ್ದ ಕೆಲವರು ಸ್ಥಾಪಿಸಿದ್ದ ನೂತನ ಪಂಥಗಳೂ ಸಿದ್ಧಾಂತಗಳೂ ಇದ್ದುವು. ಅವರಿಂದಲೂ ಅವರ ಅನುಯಾಯಿಗಳಿಂದಲೂ ಬೌದ್ಧಮತ ಪ್ರಚಾರಕ್ಕೆ ಸ್ವಲ್ಪಮಟ್ಟಿಗೆ ಕುಂದಕವುಂಟಾಯಿತು. ಆದ ಕಾರಣ, ಆ ಹಿರಿಯ ಸಮಕಾಲೀನರಲ್ಲಿ ಪ್ರಬಲರಾಗಿದ್ದ ಕೆಲವರ ವಿಚಾರವನ್ನು ಇಲ್ಲಿ ಸಂಕ್ಷೇಪವಾಗಿ ಪ್ರಸ್ತಾವಿಸುವುದು ಆವಶ್ಯಕ. ನಾವು ಹಿಂದೆ ಸೂಚಿಸಿರುವ ಪೂರ್ಣಕಶ್ಯಪನು ಅವರಲ್ಲೊಬ್ಬನು. ಬುದ್ಧನು ಮತಸ್ಥಾಪನೆ ಮಾಡಿದ ಬಳಿಕ ಹದಿನೈದು ವರುಷಗಳ ಕಾಲ ಅವನು ಜೀವಿಸಿದ್ದನಂತೆ. ಬೌದ್ಧಮತ ವಿರೋಧಿಗಳೆಂದು ಬೌದ್ಧ ಗ್ರಂಥಗಳಲ್ಲಿ ಹೇಳಿರುವವರಲ್ಲಿ ಪೂರ್ಣಕಶ್ಯಪನೂ ಕಕುದ ಕಾತ್ಯಾಯನನೂ, ಅಜಿತನೂ, ಗೋಶಾಲನೂ, ಸಂಜಯನೂ, ನಿರ್ಗ್ರಂಥಜ್ಞಾತೃಪುತ್ರನೂ, ಅತ್ಯಂತ ಮುಖ್ಯರು. (ನಿಗಂಠ ನಾತಪುತ್ತನೆಂಬುದು ಪಾಳಿಯ ರೂಪ. ಸಂಸ್ಕೃತ ಭಾಷೆಯ ರೂಪವು ನಿರ್ಗ್ರಂಥಜ್ಞಾತೃಪುತ್ರನೆಂದು.) ಪೂರ್ಣಕಶ್ಯಪನು ಅಚೇಲಕ ಪಂಗಡಗಳಲ್ಲೊಂದಕ್ಕೆ ಸೇರಿದವನು. ಅವನು ಸ್ಥಾಪಿಸಿದ ಸಿದ್ಧಾಂತಕ್ಕೆ ತೀರ್ಥಕರ ಸಿದ್ಧಾಂತವೆಂದೂ ಅಹೇತುವಾದವೆಂದೂ ಹೆಸರು.

ಕಕುದ ಕಾತ್ಯಾಯನನೂ ಬುದ್ಧನಿಗಿಂತ ಹಿರಿಯನು.* ಜೈನ

* "It is quite sufficient for our present purpose to know that he was a younger contemporary of Pippalada and an elder contemporary of the Buddha."—

ಮತಸ್ಥಾಪಕನಾದ ಮಹಾವೀರನೂ ಬುದ್ಧನೂ ಅವನನ್ನು ಅಕ್ರಿಯಾವಾದಿಯೆಂದು ಕರೆದಿದ್ದಾರೆ. ಕಾತ್ಯಾಯನನ ಸಿದ್ಧಾಂತದ ಪ್ರಕಾರ, ಪುಣ್ಯಪಾಪಗಳಿಗೇ ಆಗಲಿ, ಜ್ಞಾನಾಜ್ಞಾನಗಳಿಗೇ ಆಗಲಿ ಭೇದವಿಲ್ಲ. ನೋಡುವುದು, ಕೇಳುವುದು, ಗ್ರಹಿಸುವುದು, ಬೋಧಿಸುವುದು ಮುಂತಾದವುಗಳಿಗೆ ಅರ್ಥವಿಲ್ಲ; ಒಬ್ಬ ಮನುಷ್ಯನು ಮತ್ತೊಬ್ಬನ ತಲೆಯನ್ನು ಎರಡು ಹೋಳುಗಳಾಗಿ ಸೀಳಿದರೂ ಸಪ್ತಧಾತು ವಿಕಾರಗಳಾದ ನಾನಾ ಭಾಗಗಳ ಅಂತರಕ್ಕೆ ಕತ್ತಿಯನ್ನು ಚುಚ್ಚಿದಂತಾಯಿತೇ ಹೊರತು ಯಾವ ಜೀವನವನ್ನೂ ಕೊನೆಗಾಣಿಸಿದಂತಾಗಲಿಲ್ಲವೆಂಬುದು ಕಾತ್ಯಾಯನನ ವಾದ.

ಅಜಿತನೂ ಅವನ ಅನುಯಾಯಿಗಳೂ ಕೂದಲಿನಿಂದ ನೆಯ್ದ ಬಟ್ಟೆಗಳನ್ನು ಧರಿಸುತ್ತಿದ್ದ ಕಾರಣ, ಅವರಿಗೆ ಕೇಶಕಂಬಳಧಾರಿಗಳೆಂದು ಹೆಸರಾಯಿತು. ಐಹಿಕ ಭೋಗವೊಂದೇ ಜೀವನದ ಮುಖ್ಯ ಕಾರ್ಯವೆಂಬುದು ಅವರ ಸಿದ್ಧಾಂತ. ಆದರೂ ಅವರು ದುಷ್ಟರೇನೂ ಅಲ್ಲ. ಜನರಲ್ಲಿ ಪ್ರೀತಿ ಕರುಣೆಗಳನ್ನು ತೋರಿಸುತ್ತಿದ್ದರು. ಚಾರ್ವಾಕರಂತೆಯೇ ಅವರಿಗೂ ಭೋಗಲಾಲಸೆ. ಪರಲೋಕವಿಲ್ಲವೆಂದೂ, ಮನುಷ್ಯನ ಕಥೆಯು ಮರಣಕ್ಕೇ ಮುಗಿಯುವುದೆಂದೂ ಅಜಿತನು ಬೋಧಿಸಿದನು. ಶ್ರಾದ್ಧಾದಿಕರ್ಮಗಳಿಗೆ ಅರ್ಥವಿಲ್ಲವೆಂದು ಅವನು ವಾದಿಸಿದನಾದರೂ, ಮೃತರಾದ ಮೇಲೆ ಶ್ರಾದ್ಧದಿಂದ ಬಂಧುಗಳಿಗೆ ಪ್ರೀತ್ಯಾದರಗಳನ್ನು ತೋರಿಸುವುದನ್ನು ಬಿಟ್ಟು, ಅವರು ಬದುಕಿರುವಾಗಲೇ ಕರುಣೆತೋರಿ ಅವರನ್ನು ಆದರದಿಂದ ಉಪಚರಿಸಬೇಕೆಂದೂ ಅವನು ಬೋಧಿಸಿದನು.

ಗೋಶಾಲಪಂಥದವರಿಗೆ ಆಜೀವಕರೆಂದು ಹೆಸರು. ತಮಗಾಗಿಯೇ ವಿಶೇಷ ರೀತಿಯಲ್ಲಿ ಔತಣ ಮುಂತಾದವುಗಳನ್ನೇರ್ಪಡಿಸಿ

---

*Pre-Buddhistic Indian Philosophy* By Benimadhav Barua, M.A., (Cal) ; D,Litt., (Lond)

ಅಡಿಗೆ ಮಾಡಿದರೆ ಈ ಪಂಥದವರು ಊಟಮಾಡುತ್ತಿರಲಿಲ್ಲ. ಅಡಿಗೆಯು ಕೆಲಸವು ಮುಗಿದುಹೋಗಿ ಭೋಜನವು ಉಪಕ್ರಮವಾಗಿದ್ದ ಮನೆಗಳಲ್ಲಿ (ಮನೆಯುವರಿಗೆಲ್ಲಿ ಆಹಾರವು ಕಡಮೆಯಾದೀತೋ— ಎಂಬ ಶಂಕೆಯಿಂದ) ಅವರು ಊಟಮಾಡುತ್ತಿರಲಿಲ್ಲ. ದುರ್ಭಿಕ್ಷ ಕಾಲದಲ್ಲಿ ಇತರರಿಗೆ ತೊಂದರೆಯಾಗುವಂತಿದ್ದರೆ ಭೋಜನಕ್ಕೇ ಅವರು ಹೋಗುತ್ತಿರಲಿಲ್ಲ. ನಾಯಿ ಮುಂತಾದ ಪ್ರಾಣಿಗಳಿಗೆ ಆಹಾರವನ್ನು ಹಾಕದೆ ಅವು ಹಸಿದಿರುವಲ್ಲಿ ತಮಗೆ ಬಡಿಸಿದರೆ ಅವರು ಊಟ ಮಾಡುತ್ತಿರಲಿಲ್ಲ. ಮೀನುಮಾಂಸಗಳ ಸೇವನೆಯೂ, ಮಾದಕವಸ್ತುಗಳ ಸೇವನೆಯೂ ಆಜೀವಕರಲ್ಲಿ ನಿಷಿದ್ಧವಾಗಿದ್ದಿತು. ಮಹಾವೀರನೂ ಬುದ್ಧನೂ ಆಹಾರ ಮುಂತಾದ ವಿಚಾರಗಳಲ್ಲಿ ಆಜೀವಕರ ಮಾದರಿಯನ್ನನುಸರಿಸಿ ನಿಯಮಗಳನ್ನೇರ್ಪಡಿಸಿದರೆಂಬುದು ಕೆಲವರ ಅಭಿಪ್ರಾಯ. ಆಜೀವಕರ ಸಿದ್ಧಾಂತದಲ್ಲಿದ್ದ ಪ್ರಬಲ ದೋಷವು ನಿಯತಿವಾದ. ಅದೃಷ್ಟವೇ (ನಿಯತಿಯೇ) ಎಲ್ಲಕ್ಕೂ ಕಾರಣವೆಂಬುದೂ, ಮನುಷ್ಯನ ಆಯುಸ್ಸು, ಅವನ ಸುಖದುಃಖಗಳು, ಅವನ ವಿದ್ಯಾಸಂಪತ್ತಿಗಳು, ಮುಂತಾದ ಸಮಸ್ತ ವಿಚಾರಗಳೂ ಜನನ ಕಾಲಕ್ಕೆ ಮೊದಲೇ ನಿಗದಿಯಾಗಿರುತ್ತವೆಂಬುದೂ, ಮನುಷ್ಯಪ್ರಯತ್ನದಿಂದೇನೂ ಸಾಗುವುದಿಲ್ಲವಾದ ಕಾರಣ ಮನುಷ್ಯರು ಯಾವ ಕಾರ್ಯವನ್ನೂ ನೆರವೇರಿಸಬೇಕಾದುದಿಲ್ಲವೆಂಬುದೂ ಅವರ ಸಿದ್ಧಾಂತದ ಮುಖ್ಯ ತತ್ತ್ವಗಳು.

ಇನ್ನು ಸಂಜಯನ ವಿಚಾರ. ಸಂಜಯನನ್ನೂ ಅವನ ಪಂಥದವರನ್ನೂ ಎದುರಾಳಿಗಳು ಅಜ್ಞಾನವಾದಿಗಳೆಂದು ಕರೆದರು. ಬುದ್ಧನ ಪ್ರಿಯಶಿಷ್ಯರಲ್ಲೊಬ್ಬನಾದ ಸಾರಿಪುತ್ರನೂ ಸಂಜಯನ ಶಿಷ್ಯನಾಗಿದ್ದವನೇ. ಅಂತಹ ಮೇಧಾವಿಯ ಗುರುವಾಗಿದ್ದವನನ್ನು (ಅವನ ವಾದವನ್ನೊಪ್ಪದ ಮಾತ್ರಕ್ಕೇ) ವಿರೋಧಪಕ್ಷದವರು ಅಜ್ಞಾನವಾದಿಯೆಂದು ಕರೆದುದು ಅಸಂಗತ. ಸಂಜಯನು ಬಹಳ ಪ್ರಬಲ

ನಾಗಿದ್ದನು. ಅವನ ಪಂಥವು ಅಶೋಕನ ಕಾಲದವರೆಗೂ ಊರ್ಜಿತ ಸ್ಥಿತಿಯಲ್ಲಿದ್ದಿತು. ಸಂಜಯನು ಬುದ್ಧನಿಗಿಂತ ವಯಸ್ಸಿನಲ್ಲಿ ಹಿರಿಯನು. ಸಂಜಯನೂ, ಅವನ ಶಿಷ್ಯರಾದ ಇತರ ಪರಿವ್ರಾಜಕರೂ ಊರಿನಿಂದ ಊರಿಗೆ ಸುತ್ತಿ ಬೋಧೆಮಾಡುತ್ತ ಬಹುಜನರ ಆದರಕ್ಕೆ ಪಾತ್ರರಾಗಿದ್ದರು. ಅವರು ಪ್ರತ್ಯಕ್ಷ ಪ್ರಮಾಣವನ್ನು ಮಾತ್ರ ಅಂಗೀಕರಿಸುವ "ದೃಷ್ಟಿವಾದಿ"ಗಳಾಗಿದ್ದರು. ಅವರ ವಾದ ಸರಣಿಯು ಸ್ವಲ್ಪಮಟ್ಟಿಗೆ ಈ ರೀತಿಯಲ್ಲಿದ್ದಿತು: "ಕುಶಲವೋ ಅಕುಶಲವೋ ಒಂದೂ ನಮಗೆ ಬೇಡ. ಇದು 'ಕುಶಲ', ಅದು 'ಅಕುಶಲ'—ಎಂದು ವಾದಕ್ಕೆ ಹೊರಟರೆ ರಾಗದ್ವೇಷಾದಿಗಳಿಗೂ ದುರಹಂಕಾರಕ್ಕೂ ಕಾರಣವಾಗಬಹುದು. ಶಾಂತಿಗೆ ಭಂಗಬರುವಂತೆ ನಾವು ಜೀವನದ ಭಾರಿಭಾರಿ ಸಮಸ್ಯೆಗಳ ವಿಚಾರದಲ್ಲಿ ಅಭಿಪ್ರಾಯವನ್ನೇ ಹೇಳೆವು. ಮಾನವರು ಭೇದಿಸಲಶಕ್ಯವಾದ ಆ ಸಮಸ್ಯೆಗಳ ವಿಚಾರದಲ್ಲಿ ನಮ್ಮ ಅಭಿಪ್ರಾಯವು ತಪ್ಪಾಗಿದ್ದು ಶಾಂತಿಗೆ ಭಂಗ ಬರುವ ಪ್ರಸಕ್ತಿಯೇ ನಮಗೆ ಬೇಡ. ಚಿತ್ತಶುದ್ಧಿಯಿಲ್ಲದೆ ಭ್ರಾಂತಿಯಿಂದ ಏನೊಂದು ತತ್ತ್ವವನ್ನೂ ಪ್ರತಿಪಾದಿಸಬಾರದು. ಸರ್ವಗತಾತ್ಮನಾದ ಜೀವಾತ್ಮನೊಬ್ಬನುಂಟೆಂದು ಕೆಲವರು ಹೇಳುತ್ತಾರೆ. ಕೆಲವರು ಇದನ್ನೊಪ್ಪದೆ ದೇಹವುಂಟೇ ಹೊರತು ಜೀವವಿಲ್ಲವೆನ್ನುತ್ತಾರೆ. ಕೆಲವರು ಜೀವನಿಗೆ ಮೂರ್ತಸ್ವರೂಪವನ್ನು ಕಲ್ಪಿಸುತ್ತಾರೆ. ಕೆಲವರು ಜೀವನ ಅಮೂರ್ತಸ್ವರೂಪವನ್ನು ಪ್ರತಿಪಾದಿಸುತ್ತಾರೆ. ಹೀಗೆ ಪರಸ್ಪರವಿರುದ್ಧ ತತ್ತ್ವಗಳು ಪ್ರಚಾರವಾಗುತ್ತಿವೆ." ಸಂಜಯನ ಉಪದೇಶವು ಹಲವರ ಮನಸ್ಸಿಗೆ ಹಿಡಿದು ಅವನಿಗೆ ಬಹಳ ಹೆಚ್ಚಿನ ಪ್ರಾಬಲ್ಯವು ದೊರೆಯಿತು. ಜೈನಮತಸ್ಥಾಪಕನಾದ ಮಹಾವೀರನೂ, ಬೌದ್ಧಮತಸ್ಥಾಪಕನಾದ ಬುದ್ಧನೂ ಸಂಜಯನ ಸಿದ್ಧಾಂತವನ್ನೂ ಮೇಲೆ ಹೇಳಿದ ಪೂರ್ಣಕಶ್ಯಪ ಮುಂತಾದವರ ಸಿದ್ಧಾಂತಗಳನ್ನೂ ಖಂಡಿಸಿದರು. ಆದಾಗ್ಗೂ, ಮಹಾವೀರನ ಸ್ಯಾದ್ವಾದಕ್ಕೂ, ಬುದ್ಧನ ವಾದಸರಣಿಗೂ ಸಂಜಯನ ವಾದವೇ

ಜೈನಧರ್ಮ.

ಅಲ್ಪಸ್ವಲ್ಪ ಚೋದಕವಾಯಿತೆಂದೂ ಕೆಲವರು ಪಂಡಿತರು ಅಭಿಪ್ರಾಯ ಪಡುತ್ತಾರೆ.

ಇನ್ನುಳಿದುದು, ನಿರ್ಗ್ರಂಥ ಜ್ಞಾತೃಪುತ್ರನ ವಿಚಾರ. ಜೈನಮತವನ್ನು ಸ್ಥಾಪಿಸಿದ್ದ ಮಹಾವೀರನೇ ಈ ನಿರ್ಗ್ರಂಥಜ್ಞಾತೃಪುತ್ರನೆಂದೂ, ಬುದ್ಧನು ಅವನನ್ನು ವಾದದಲ್ಲಿ ಸೋಲಿಸಿದನೆಂದೂ ಕೆಲವರು ಪಂಡಿತರು ಅಭಿಪ್ರಾಯಪಡುತ್ತಾರೆ. ಆದರೆ ನಿರ್ಗ್ರಂಥಜ್ಞಾತೃಪುತ್ರನ ಸಿದ್ಧಾಂತವೆಂದು ಬುದ್ಧನು ಉದಾಹರಿಸಿ ಖಂಡಿಸಿರುವುದಕ್ಕೂ ಜೈನ ಮತಕ್ಕೂ ಪರಸ್ಪರ ವಿರೋಧಗಳು ಕಂಡುಬರುವ ಕಾರಣ, ಬುದ್ಧನು ಖಂಡನೆ ಮಾಡಿದಂತೆ ಉದಾಹೃತವಾಗಿರುವುದು, ಮಹಾವೀರನು ಸ್ಥಾಪಿಸಿದ ಜೈನಮತವೆಂದು ನಿರ್ಧರವಾಗಿ ಹೇಳುವಂತಿಲ್ಲ. ಆದ ಕಾರಣ, ಬುದ್ಧನು ವಾದದಲ್ಲಿ ಸೋಲಿಸಿದ ನಿರ್ಗ್ರಂಥಜ್ಞಾತೃಪುತ ನೆಂಬವನು ಮತ್ತಾವನೋ ಆಗಿರಬೇಕೇ ಹೊರತು ಮಹಾವೀರನಲ್ಲ ವೆಂದು ಹೇಳಬೇಕಾಗಿದೆ. ಮೇಲೆ ಸೂಚಿಸಿರುವ ಪಂಥಗಳಲ್ಲದೆ ಮತ್ತೆ ಕೆಲವು ಪಂಥಗಳೂ ಇದ್ದುವು. ಯದೃಚ್ಛಾವಾದಿಗಳು, ಪರಲೋಕವು ಲಭಿಸಲು ಸದ್ವರ್ತನೆಯೊಂದೇ ಸಾಕೆಂಬ ವಿನಯವಾದಿಗಳು, ಮುಂತಾದ ಹಲವು ಪಂಥಗಳವರಿದ್ದರು. ಅವರೆಲ್ಲರೂ ವಾದವಿವಾದಗಳನ್ನು ಹೂಡಿ ಹೋರಾಡುತ್ತಿದ್ದರು. ಸ್ವೇಚ್ಛಾವಾದಿಗಳು.

ಮೇಲೆ ಹೇಳಿದಂತೆ ಬಗೆಬಗೆಯ ಸಿದ್ಧಾಂತಗಳಿಂದ ಕೂಡಿದ್ದ ಹಲವು ಪಂಥಗಳಿಗೂ ವಾದವಿವಾದಗಳು ನಡೆಯುತ್ತಿದ್ದ ಕಾಲದಲ್ಲಿ

**ಬುದ್ಧನ ಕಾರ್ಯ ನಿರ್ವಹಣ**

ಗೌತಮ ಬುದ್ಧನು ಕಾರ್ಯರಂಗಕ್ಕಿಳಿದನು. ಪರಸ್ಪರ ವಿರುದ್ಧವಾದ ಬಗೆಬಗೆಯ ವಾದಗಳು ಆಗ ನಡೆಯುತ್ತಿದ್ದುವು. ಕೆಲವು ಪಂಥಗಳವರು ಸಮಸ್ತವೂ ಶಾಶ್ವತವೆಂದು ವಾದಿಸುತ್ತಿದ್ದರು; ಕೆಲವು ಪಂಥಗಳವರು ಸಮಸ್ತವೂ ನಶ್ವರವೆಂದು

ವಾದಿಸುತ್ತಿದ್ದರು. ಕೆಲವು ಪಂಥಗಳವರು ಭೋಗವುಗ್ನತೆಯೇ ಅವಶ್ಯಕಾರ್ಯವೆಂದು ವಾದಿಸುತ್ತಿದ್ದರು; ಕೆಲವು ಪಂಥಗಳವರು ಉಪವಾಸಾದಿ ಕಾಯಕ್ಲೇಶಗಳಿಂದಲೇ ಶ್ರೇಯಸ್ಸೆಂದು ವಾದಿಸುತ್ತಿದ್ದರು. ನಿಯತಿಯೇ ಸಮಸ್ತ ವಿಚಾರಗಳನ್ನೂ ನಿರ್ಧರಿಸಿರುವುದೆಂದು ಕೆಲವು ಪಂಥಗಳವರು ವಾದಿಸಿದರೆ, ಹೇತುರಹಿತವಾಗಿಯೂ, ಆಕಸ್ಮಿಕವಾಗಿಯೂ ಸಮಸ್ತ ವ್ಯಾಪಾರಗಳೂ ನಡೆಯುವುವೆಂದು ಕೆಲವು ಪಂಗಡಗಳವರು ಹೇಳುತ್ತಿದ್ದರು. ಸುಖದುಃಖಗಳು ಸ್ವಯಂಕೃತವೆಂದು ಕೆಲವು ಪಂಗಡಗಳವರು ಸೂಚಿಸಿದರೆ, ಸುಖದುಃಖಗಳೆಲ್ಲ ಪರಾಯತ್ತವೆಂದೇ ಕೆಲವು ಪಂಗಡಗಳವರು ವಾದಿಸುತ್ತಿದ್ದರು. ಇಂತಹ ವಿಷಮಾವಸ್ಥೆಯ ಕೋಲಾಹಲವು ನಡೆಯುತ್ತಿದ್ದಾಗ ಗೌತಮ ಬುದ್ಧನು ವಿಸ್ಮಯಜನಕವಾದ ತನ್ನ ಕ್ರಿಯಾಶಕ್ತಿಯನ್ನು ಪ್ರದರ್ಶಿಸಿ, ಯಾವ ಬಗೆಯ ಅತಿರೇಕಕ್ಕೂ ಅವಕಾಶವಿಲ್ಲದ ಮಧ್ಯಮ ಮಾರ್ಗವೊಂದನ್ನು ತನ್ನ ಸಾಧನಾಸಾಕ್ಷಾತ್ಕಾರಗಳ ಬಲದಿಂದ ಕಂಡುಹಿಡಿದು ನೂತನ ಮತವನ್ನು ಸ್ಥಾಪಿಸಿ ಅದ್ಭುತ ರೀತಿಯಲ್ಲಿ ಕಾರ್ಯನಿರ್ವಾಹಣ ಮಾಡಿದನು.

**ರಾಜಕೀಯ ವಿದ್ಯಮಾನಗಳು ಅನುಕೂಲ್ಯ**

ರಾಜಕೀಯ ವಿದ್ಯಮಾನಗಳೂ ಬುದ್ಧನ ಕಾರ್ಯಸಾಧನೆಗೆ ಅನುಕೂಲವಾಗಿದ್ದುವು. ಕಾಶೀರಾಜ್ಯಕ್ಕೂ ಕೋಸಲರಾಜ್ಯಕ್ಕೂ ಬಹು ಕಾಲದಿಂದ ನಡೆಯುತ್ತಿದ್ದ ಯುದ್ಧವೂ, ಇತರ ರಾಜ್ಯಗಳಿಗೆ ಪರಸ್ಪರವಾಗಿ ನಡೆಯುತ್ತಿದ್ದ ಬಹು ಕಾಲದ ಯುದ್ಧಗಳೂ ಕೊನೆಗಂಡು ಆರ್ಯಾವರ್ತದಲ್ಲೆಲ್ಲ ಶಾಂತಿಯು ನೆಲೆಗೊಂಡಿದ್ದಿತು. ಮುಖ್ಯಮುಖ್ಯ ರಾಜ್ಯಗಳ ರಾಜಮನೆತನಗಳವರಲ್ಲಿ ಪರಸ್ಪರವಾಗಿ ವಿವಾಹ ಸಂಬಂಧಗಳು ನಡೆದು ಮೈತ್ರಿಯುಂಟಾದುದರಿಂದ ಯುದ್ಧದ ಪ್ರಸಕ್ತಿಗೆ ಸದ್ಯದಲ್ಲಿ ಅವಕಾಶವಿರಲಿಲ್ಲ. ಬುದ್ಧನ ಮತಪ್ರಚಾರ ಕಾರ್ಯಕ್ಕೆ ಈ ಬಗೆಯ ಶಾಂತಿಮಯವಾದ

ಪರಿಸ್ಥಿತಿಯಿಂದ ಬಹಳ ಸಹಾಯವಾಯಿತು. ಮಗಧರಾಜ್ಯವು ವಿಶೇಷ ಪ್ರವರ್ಧಮಾನಕ್ಕೆ ಬಂದು ಪ್ರಾಬಲ್ಯಹೊಂದಿತು. ಬುದ್ಧನು ಮತ ಪ್ರಚಾರ ಕಾರ್ಯವನ್ನಾರಂಭಿಸುವ ವೇಳೆಗೆ ಮಗಧರಾಜನಾದ ಬಿಂಬಿಸಾರನ ಸಹಾಯ ಸನ್ಮಾನಗಳೂ ದೊರೆತುದರಿಂದ ಆತನು ಕೈಕೊಂಡಿದ್ದ ಕಾರ್ಯವು ಮತ್ತಷ್ಟು ಶೀಘ್ರವಾಗಿಯೂ ಸುಲಲಿತ ವಾಗಿಯೂ ನೆರವೇರಲು ಸೌಕರ್ಯವುಂಟಾಯಿತು. ಬೌದ್ಧಮತವು ಬಹುಶೀಘ್ರವಾಗಿ ಪ್ರಚಾರಕ್ಕೆ ಬಂದಿತು.

# ಹನ್ನೆರಡನೆಯ ಅಧ್ಯಾಯ

## ಬೌದ್ಧ ಸಿದ್ಧಾಂತ

ಇತರ ದೊಡ್ಡದೊಡ್ಡ ಮತಗಳ ಸಿದ್ಧಾಂತಗಳಂತೆಯೇ ಬೌದ್ಧ ಮತ ಸಿದ್ಧಾಂತವೂ ಅತಿಗಹನವಾದುದು. ಬುದ್ಧನ ಕಾಲಾನಂತರ ಬೌದ್ಧಮತವು ಹೀನಯಾನವೆಂದೂ, ಮಹಾಯಾನವೆಂದೂ ಎರಡು ಶಾಖೆಗಳಾಗಿ ವಿಭಾಗವಾಯಿತು. ಹೀನಯಾನ ಮಹಾಯಾನಗಳೆರಡರಲ್ಲಿಯೂ ಅನೇಕ ಉಪಶಾಖೆಗಳೂ ಏರ್ಪಟ್ಟುವು.* ಹೀಗೆ ಶಾಖೋಪಶಾಖೆಗಳಿಂದ ಕೂಡಿದ ಬೌದ್ಧಮತದ ಸಿದ್ಧಾಂತವನ್ನೂ, ಆ ಶಾಖೋಪಶಾಖೆಗಳ ಮುಖ್ಯ ಲಕ್ಷಣಗಳಂತಿರುವ ತತ್ತ್ವಗಳನ್ನೂ ಇಲ್ಲಿ ವಿಚಾರ ಮಾಡುವುದು ಅಸಾಧ್ಯ. ಅಗಾಧವಾದ ಅಂತಹ ಪ್ರಯತ್ನಕ್ಕೆ ಕೈಹಾಕದೆ, ಬುದ್ಧನು ಬೋಧಿಸಿದ ಸಿದ್ಧಾಂತದ ಮುಖ್ಯ ಲಕ್ಷಣಗಳಂತಿರುವ ತತ್ತ್ವಗಳನ್ನು ಸಿಂಹಾವಲೋಕನ ಕ್ರಮದಿಂದ ತೀರ ಸಂಕ್ಷೇಪವಾಗಿ ಸೂಚಿಸುವುದು ಮಾತ್ರವೇ ನಮ್ಮ ಉದ್ದೇಶ.

---

* ಹೀನಯಾನವು ಸ್ಥವಿರ ಪಂಥವೆಂದೂ ಮಹಾಸಾಂಘಿಕ ಪಂಥವೆಂದೂ ಒಡೆಯಿತು. ಅವೆರಡರಲ್ಲಿಯೂ ಹಲವು ಪಂಗಡಗಳು ಏರ್ಪಟ್ಟುವು. ಸರ್ವಾಸ್ತಿವಾದಿಗಳು, ಸೌತ್ರಾಂತಿಕರು, ವಾತ್ಸೀ ಪುತ್ರೀಯರು, ಮುಂತಾದ ಹತ್ತೊಂಬತ್ತು ಪಂಗಡಗಳವರು ಹೀನಯಾನದಲ್ಲುಂಟು. ಸತ್ಯಶುದ್ಧಿ ಎಂಬ ಹೆಸರಿನ ಚಿಕ್ಕಪಂಗಡವನ್ನೂ ಸೇರಿಸಿದರೆ ಹೀನಯಾನ ಪಂಗಡಗಳ ಒಟ್ಟು ಸಂಖ್ಯೆಯು ಇಪ್ಪತ್ತು. ಮಹಾಯಾನದವರಲ್ಲಿ ಮಾಧ್ಯಮಿಕರು, ವಿಜ್ಞಾನವಾದಿಗಳು, ಅವತಂಸಕರು ಮುಂತಾದ ಪಂಗಡಗಳಿವೆ. ಸರ್ವದರ್ಶನಸಂಗ್ರಹ, ಬ್ರಹ್ಮವಿದ್ಯಾಭರಣ, ಮುಂತಾದ ಗ್ರಂಥಗಳಲ್ಲಿ ಹೇಳಿರುವಂತೆ ಮಾಧ್ಯಮಿಕ, ಯೋಗಾಚಾರ, ಸೌತ್ರಾಂತಿಕ, ವೈಭಾಷಿಕ—ಎಂದು ಬೌದ್ಧರಲ್ಲಿ ನಾಲ್ಕೇ ನಾಲ್ಕು ಪಂಗಡಗಳೆಂಬ ವಿಭಾಗಕ್ರಮವನ್ನು ಬೌದ್ಧರು ಒಪ್ಪುವುದಿಲ್ಲ.

**ಬುದ್ಧ**

ಬುದ್ಧನು ತನ್ನ ಸಾಧನಾಸಾಕ್ಷಾತ್ಕಾರಗಳ ಸಹಾಯದಿಂದಲೂ ತನ್ನ ಪ್ರತಿಭೆಯ ಸಹಾಯದಿಂದಲೂ ಕಂಡುಹಿಡಿದು ಜನರಿಗೆ ಬೋಧಿಸಿದ ತತ್ತ್ವಗಳಿಗೆ ಧರ್ಮವೆಂದು ಹೆಸರು ಬಂದಿತು. ಧರ್ಮವು ಚಿತ್ತಾಧೀನವೆಂಬುದೂ, ಪ್ರಜ್ಞೆಯು ಧರ್ಮಾಧೀನವೆಂಬುದೂ* ಉದಾತ್ತ ಭಾವನೆಗಳು. ಭೂಲೋಕದ ವ್ಯಾಪಾರಗಳೂ, ಬ್ರಹ್ಮಲೋಕ ಮುಂತಾದ (ತಾವು ನಂಬಿರುವ) ಸಮಸ್ತ ಲೋಕಗಳ ವ್ಯಾಪಾರಗಳೂ ಧರ್ಮಾಧಿಷ್ಠಿತವಾಗಿ ನಿಯಮಬದ್ಧವಾಗಿ ನಡೆಯುವುವೆಂಬುದು ಬೌದ್ಧರ ನಂಬಿಕೆ. ಬುದ್ಧನು ಬೋಧಿಸಿದ ಧರ್ಮವನ್ನು ಅರ್ಹತರುಗಳು ಕಾಪಾಡಿಕೊಂಡು ಬಂದಿರುವರೆಂಬುದು ಅವರ ಭಾವನೆ. ಬುದ್ಧನು ಧರ್ಮವನ್ನು ಕಂಡುಹಿಡಿದವನೇ ಹೊರತು ಕಲ್ಪಿಸಿದವನಲ್ಲವೆಂದೂ, ಹಿಂದಿನ ಅನೇಕ ಬುದ್ಧರುಗಳು ಉದ್ಘೋಷಿಸಿದ ಅನಾದಿಯಾದ ಧರ್ಮವನ್ನು ಮಾತ್ರವೇ ಆತನು ಕಂಡುಹಿಡಿದು ತಿಳಿಸಿದನೆಂದೂ ಬೌದ್ಧರ ಅಭಿಪ್ರಾಯ. ಬುದ್ಧನೇ ಈ ಅಭಿಪ್ರಾಯವನ್ನು ಸೂಚಿಸಿದ್ದನು. ಆತನ ಮಾತುಗಳಿವು: "ಪ್ರಿಯಭಿಕ್ಷುಗಳೇ! ಕಾಡಿನಲ್ಲಿ ಸಂಚರಿಸುತ್ತಿರುವ ಮನುಷ್ಯನು ತನಗಿಂತ ಹಿಂದೆ ಅಲ್ಲಿಗೆ ಬಂದಿದ್ದವರು ನಡೆದುಹೋಗಿದ್ದ ಹಾದಿಯೊಂದನ್ನು ಕಂಡು ಅದರಲ್ಲಿ ತಾನೂ ನಡೆದುಹೋಗಿ ಪ್ರಾಚೀನ ನಗರವನ್ನೂ, ಪ್ರಾಸಾದವನ್ನೂ ನಿರ್ಮಲ ಜಲದಿಂದಲೂ ಕಮಲಗಳಿಂದಲೂ ತುಂಬಿದ ಕಾಸಾರವನ್ನೂ ಕಂಡುಬರಬಹುದು, ನೋಡಿ. ಆ ಬಳಿಕ ಅವನು ತಮ್ಮ ರಾಜನ ಬಳಿಗೋ ಅಥವಾ ಮಂತ್ರಿಯ ಬಳಿಗೋ ಹೋಗಿ, 'ಮಹಾಸ್ವಾಮಿ, ನಾನು ನೋಡಿಬಂದಿರುವುದನ್ನರುಹುವೆನು ಕೇಳಿ' ಎಂದು ತಿಳಿಸಬಹುದು, ನೋಡಿ. ರಾಜನು ಆ ನಗರವನ್ನು ರಾಜಧಾನಿ ಮಾಡಿಕೊಂಡು ಅದು ಮತ್ತೆ ಅಭ್ಯುದಯ ಹೊಂದಬಹುದು, ನೋಡಿ.

* "ಚಿತ್ತಾಧೀನೋ ಧರ್ಮೋ ಧರ್ಮಾಧೀನೋ ಬೋಧಿಃ"

ನಾನು ಮಾಡಿರುವ ಕೆಲಸವೂ ಇದೇ ರೀತಿಯದೇ. ಹಿಂದಿನ ಪ್ರಾಜ್ಞರು ನಡೆದುಹೋದ ಆರ್ಯಮಾರ್ಗವನ್ನೇ ನಾನೂ ಹಿಡಿದು ಮುಂದುವರಿದು, ಬಾಳಿನ ಸ್ವಭಾವವನ್ನರಿತು ಬಂದು, ಭಿಕ್ಷುಗಳಿಗೂ, ಉಪಾಸಕರಿಗೂ ನಾನು ಕಂಡುದನ್ನು ಹೇಳುತ್ತಿದ್ದೇನೆ. ಆರ್ಯ ಮಾರ್ಗದ ಸೌಶೀಲ್ಯವು ಮತ್ತೊಮ್ಮೆ ವೃದ್ಧಿಹೊಂದಿ ಪ್ರಚಾರಕ್ಕೆ ಬರಲನುಕೂಲಿಸಲೆಂದು ಹೀಗೆ ಮಾಡಿದ್ದೇನೆ."

ಬುದ್ಧನು ಬೋಧಿಸಿದ ತತ್ತ್ವಗಳನ್ನು ಮೂರು ಭಾಗಗಳಾಗಿ ವಿಂಗಡಿಸಿ ಉಲ್ಲೇಖಿಸಿರುವ ಬೌದ್ಧರ ಧರ್ಮಗ್ರಂಥಗಳಿಗೆ ತ್ರಿಪಿಟಕಗಳೆಂದು ಹೆಸರು.

**ತ್ರಿಪಿಟಕಗಳು**

ಬೌದ್ಧಧರ್ಮವನ್ನನುಸರಿಸುವ ಗೃಹಸ್ಥರ ಮತ್ತು ಭಿಕ್ಷುಗಳ ಸಹಾಯಕ್ಕಾಗಿ ಬುದ್ಧನು ಬೋಧಿಸಿರುವ ತತ್ತ್ವಗಳೂ, ಆತನ ನಿರೂಪಣೆಗಳೂ, ವಾದಗಳೂ, ಲಿಖಿತವಾಗಿರುವುದಕ್ಕೆ ಸೂತ್ರ ಪಿಟಕವೆಂದು ಹೆಸರು. (ಪಾಳಿಭಾಷೆಯಲ್ಲಿ ಸುತ್ತಪಿಟಕವೆಂದು ಇದನ್ನು ಕರೆಯುತ್ತಾರೆ.) ಎರಡನೆಯದು ವಿನಯಪಿಟಕ. ಭಿಕ್ಷುಗಳಿಗೆ ಅವರ ಕರ್ತವ್ಯಗಳನ್ನು ತಿಳಿಸಿ ಅವರನ್ನು ಪ್ರಬೋಧಗೊಳಿಸುವುದಕ್ಕಾಗಿ ಹುಟ್ಟಿದ ನಿಯಮಗಳು ಇದರಲ್ಲಿವೆ. ಬೌದ್ಧ ಸಿದ್ಧಾಂತದ ಸಂಬಂಧದಲ್ಲಿ ಅತಿಗಹನವಾದ ದಾರ್ಶನಿಕ ತತ್ತ್ವಗಳೂ ರಹಸ್ಯಗಳೂ ಲಿಖಿತವಾಗಿರುವ ಮೂರನೆಯ ಪಿಟಕಕ್ಕೆ ಅಭಿಧರ್ಮ ಪಿಟಕವೆಂದು ಹೆಸರು. (ಪಾಳಿಯಲ್ಲಿ ಇದನ್ನು ಅಭಿಧಮ್ಮ ಪಿಟಕವೆಂದು ಕರೆಯುತ್ತಾರೆ.) ಮಾನವರನ್ನು ಅಜ್ಞಾನದಿಂದಲೂ, ದುಃಖದಿಂದಲೂ ಪಾರುಮಾಡುವುದಕ್ಕಾಗಿ ಬುದ್ಧರುಗಳ ಬೋಧನೆಯು ಅತ್ಯಾವಶ್ಯಕವೆಂಬುದು ಬೌದ್ಧರ ನಂಬಿಕೆ.

ಬೌದ್ಧಮತದ ಮೂಲಸ್ತಂಭಗಳಂತಿರುವ ನಾಲ್ಕು ತತ್ತ್ವಗಳನ್ನು ಬುದ್ಧನು ಬೋಧಿಸಿ ಇವುಗಳನ್ನು ಆರ್ಯಸತ್ಯಗಳೆಂದು ಕರೆದನು. ಜೀವನವು ದುಃಖಮಯವೆಂಬುದು ಅವುಗಳಲ್ಲಿ ಮೊದಲ

**ಆರ್ಯ ಸತ್ಯಗಳು**

ನೆಯ ಸತ್ಯ. ಜನನದುಃಖ, ಜರಾದುಃಖ, ಮರಣದುಃಖ ಇವುಗಳಿಂದ ಕೂಡಿರುವ ಜೀವನದಲ್ಲಿ ರೋಗಾದ್ಯುಪದ್ರವಗಳ ದುಃಖವೂ ಸೇರಿರುವುದರಿಂದ ಜೀವನವು ದುಃಖಮಯವೆಂದು ಬುದ್ಧನು ಸೂಚಿಸಿದನು. ದುಃಖಸಮುದಯವೇ ಎರಡನೆಯ ಸತ್ಯ. ದುಃಖಸಮುದಯವು ಹನ್ನೆರಡು ನಿದಾನಗಳ ಪರಿಣಾಮ ಫಲವೆಂಬುದು ಬುದ್ಧನ ಆಶಯ.* ದುಃಖನಿರೋಧವು ಮೂರನೆಯ ಸತ್ಯ. ದುಃಖನಿರೋಧಕ್ಕೆ, ಎಂದರೆ ದುಃಖನಿವಾರಣೆಗೆ, ಮಾರ್ಗವುಂಟೆಂಬುದು ನಾಲ್ಕನೆಯ ಸತ್ಯ. ಆ ದುಃಖನಿರೋಧಕ್ಕೆ ದಾರಿಯು ಬುದ್ಧನು ಬೋಧಿಸಿದ ಆರ್ಯಾಷ್ಟಾಂಗಿಕ ಮಾರ್ಗ.

**ನಿದಾನಗಳು**

ನಿದಾನಗಳ ವಿಚಾರವನ್ನು ಅತ್ಯಂತ ಸ್ಥೂಲವಾಗಿ ಮಾತ್ರವೇ ಇಲ್ಲಿ ಸೂಚಿಸುವುದು ಸಾಧ್ಯ. ಅವಿದ್ಯೆಯ§ ಪರಿಣಾಮವಾಗಿ ಸತ್ಕರ್ಮ ದುಷ್ಕರ್ಮಗಳ ಫಲರೂಪವಾದ ಸಂಸ್ಕಾರಗಳು ಹುಟ್ಟುವುವು. ಒಂದು ಜನ್ಮದ ಸಂಸ್ಕಾರಗಳಿಂದ ಅದರ ಮುಂದಿನ ಜನ್ಮವು ಲಭಿಸುವುದು. ಜನ್ಮವು ಲಭಿಸಿದರೆ ವಿಜ್ಞಾನ, ನಾಮರೂಪ, ಷಡಾ

---

* ಅವಿದ್ಯೆ, ಸಂಸ್ಕಾರಗಳು, ವಿಜ್ಞಾನ, ನಾಮರೂಪ, ಷಡಾಯತನ (ಇಂದ್ರಿಯಾರ್ಥಗಳಿಂದೊಡಗೂಡಿದ ಪಂಚೇಂದ್ರಿಯಗಳು ಮತ್ತು ಚಿತ್ತ), ಸ್ಪರ್ಶ, ವೇದನೆ (ಬಗೆಬಗೆಯ ಭಾವಗಳ ಅನುಭವ–ಜ್ಞಾನ), ತೃಷ್ಣೆ, ಉಪಾದಾನ (ಬಾಳಿನ ಮೇಲಿನ ಆಸಕ್ತಿ), ಭವ (ಇರುವಿಕೆ), ಜನ್ಮ, ಜರಾಮರಣ—ಇವು ಹನ್ನೆರಡೂ ನಿದಾನಗಳು.

§ ಅವಿದ್ಯೆಯೆಂಬುದಕ್ಕೆ ಬೌದ್ಧಮತದಲ್ಲಿ ವೇದಾಂತಮತದಲ್ಲಿರುವ ಅರ್ಥವಿಲ್ಲ. ಸುಖದುಃಖಾದಿಗಳನ್ನನುಭವಿಸುವ ಶಾಶ್ವತವಾದ ವಸ್ತುವಾವುದೂ ಇಲ್ಲವೆಂಬ ತಿಳಿವಳಿಕೆಯ ಅಭಾವರೂಪದ ಅಜ್ಞಾನಕ್ಕೆ ಬೌದ್ಧ ಮತದಲ್ಲಿ ಅವಿದ್ಯೆಯೆಂದು ಹೆಸರು.

ಯತನ, ಸ್ಪರ್ಶ, ವೇದನೆ ಇವುಗಳು ಸಿದ್ಧ; ಇವುಗಳಿಂದಲೇ ದೇಹ ವ್ಯಾಪಾರಗಳು. ಅವಿದ್ಯೆಯು ಮತ್ತು ಸಂಸ್ಕಾರಗಳ ಫಲವಾಗಿ ವಿಜ್ಞಾನವು ಹುಟ್ಟುತ್ತದೆ. ವಿಜ್ಞಾನವೂ, ನಾಮರೂಪವೂ, ಮಾತೃ ಗರ್ಭದಲ್ಲಿ ಮಗುವಿನ ಬಳೆವಣಿಗೆಯು ಆರಂಭವಾದಾಗಿನಿಂದ ಸಿದ್ಧ ವಾಗುತ್ತವೆ. ಒಟ್ಟಿನಲ್ಲಿ ನಾಮರೂಪವೆಂದರೆ ದೇಹವೆಂದು ಭಾವಿಸ ಬಹುದು. ತಾಯಿ ಹೊಟ್ಟೆಯಲ್ಲಿ ಮಗುವಿರುವಾಗಲೇ * ಷಡಾಯ ತನವು ಸಿದ್ಧವಾಗುವುದು. ಜನನವಾದಮೇಲೆ ಸ್ಪರ್ಶವೂ, ವೇದನೆಯೂ ಉಂಟಾಗುವುವು. ವೇದನೆಯು ಹಿತಕರವಾದುದೆಂದೂ, ಅಸಹ್ಯ ಕರವೆಂದೂ, ಸುಖದುಃಖಗಳೆರಡೂ ಅಲ್ಲದುದೆಂದೂ, ಮೂರು ವಿಧ. ಜೀವನದಲ್ಲಿ ಕಂಡುಬರುವ ಬಗೆಬಗೆಯ ಆಶಾಸಮೂಹವಾದ ತೃಷ್ಣೆಯೂ, ಬಾಳನ್ನು ಅನುಭವಿಸಬೇಕೆಂಬ ತೀವ್ರಾಸಕ್ತಿ ಸ್ವರೂಪದ ಉಪಾದಾನವೂ ಭವಕಾರಣಗಳು. ಭವದಲ್ಲಿ ಮುಂದಿನ ಜನ್ಮಕ್ಕೆ ‡ ಕಾರಣವಾಗುವ ಕರ್ಮವು ಸಂಚಿತವಾಗುವುದು. ಜರಾಮರಣಗಳು ಕೊನೆಯ ಕೊಂಡಿಯಂತಿವೆ. ಜರಾಮರಣವೆಂಬ ಹನ್ನೆರಡನೆಯ ನಿದಾನವು ದುಃಖಕ್ಕೆ ಕಾರಣವೆಂಬುದನ್ನಂತೂ ಹೇಳಬೇಕಾದುದೇ ಇಲ್ಲ. ಜರಾಮರಣಗಳನಂತರ ಮತ್ತೆಮತ್ತೆ ಜನ್ಮಗಳೂ ಮತ್ತೆಮತ್ತೆ ಜರಾ ಮರಣಗಳೂ ನಡೆದು "ಭವಚಕ್ರ"ವು ತಿರುಗುತ್ತ ಹೋಗುವುದು.

ಬುದ್ಧನು ತಾನೊಬ್ಬ ವೈದ್ಯನೆಂದು ಹೇಳಿಕೊಂಡಂತೆ ಪಾಳಿ ಗ್ರಂಥಗಳಲ್ಲಿ ಸೂಚಿತವಾಗಿದೆ. ಅನೇಕ ಮಂದಿ ಬೌದ್ಧ ಗ್ರಂಥ

**"ವೈದ್ಯರಾಜ"**

ಕಾರರು ಬುದ್ಧನನ್ನು ಸರ್ವಲೋಕ ಚಿಕಿತ್ಸಕ ನೆಂದೂ, "ಮಹಾಭಿಷಕ್" ಎಂದೂ ಕರೆದಿದ್ದಾರೆ. "ಪೂರ್ವವೈದ್ಯನಾದ ಆತನಿಗೆ ನಮಸ್ಕಾರ"

---

* ಬೌದ್ಧರ ಪರಿಭಾಷೆಯಲ್ಲಿ ಹೇಳುವುದಾದರೆ ಪ್ರಶಾಖಾವಸ್ಥೆಯನ್ನು ಗರ್ಭದಲ್ಲಿರುವ ಶಿಶುವು ದಾಟಿದ ಕಾಲದಿಂದಲೂ

‡ ಬೌದ್ಧರ ಪರಿಭಾಷೆಯಲ್ಲಿ ಹೇಳುವುದಾದರೆ ಮುಂದಿನ ಜಾತಿಗೆ.

ಎಂದು ಬುದ್ಧಚರಿತದಲ್ಲಿ ಹೇಳಿದೆ.* ವೈದ್ಯೋತ್ತಮನೆಂದೂ, ವೈದ್ಯ ರಾಜನೆಂದೂ ಲಲಿತವಿಸ್ತರದ ಬುದ್ಧಸ್ತುತಿಯಲ್ಲಿದೆ.† ಬುದ್ಧನು ಚಿಕಿತ್ಸಾ ಶಾಸ್ತ್ರದ ಚತುರ್ವ್ಯೂಹದ ಮಾದರಿಯಲ್ಲಿ ತನ್ನ ನಾಲ್ಕು ಸತ್ಯಗಳನ್ನು ಅಳವಡಿಸಿದುದೇ ಅದಕ್ಕೆ ಕಾರಣವಿರಬೇಕು. ಇದನ್ನು ಅನೇಕ ಬೌದ್ಧರೇ ಒಪ್ಪಿಕೊಂಡಿದ್ದಾರೆ. ರೋಗ, ರೋಗಹೇತು, ರೋಗನಿರೋಧ ಅಥವಾ ಆರೋಗ್ಯ, ರೋಗನಿರೋಧ ಮಾರ್ಗ ಅಥವಾ ಚಿಕಿತ್ಸೆ—ಎಂಬುದು ಚಿಕಿತ್ಸಾಶಾಸ್ತ್ರದ ಚತುರ್ವ್ಯೂಹ.‡

**ಬುದ್ಧನ ಮೊದಲನೆಯ ಬೋಧನೆ**

ಬುದ್ಧನು ಬೋಧಿಸಿದ ಆರ್ಯಾಷ್ಟಾಂಗಿಕ ಮಾರ್ಗವನ್ನನು ಸರಿಸುವುದೇ ತೃಷ್ಣೆಯ ಪರಿಹಾರದ ಮೂಲಕ ದುಃಖನಿರೋಧಕ್ಕೆ ದಾರಿ. ಧರ್ಮಚಕ್ರಪ್ರವರ್ತನ ಕಾಲದಲ್ಲಿ ಇವುಗಳನ್ನು ಬುದ್ಧನು ಮೃಗವನದಲ್ಲಿ ಮೊಟ್ಟಮೊದಲು ತನ್ನ ಐವರು ಶಿಷ್ಯರಿಗೆ ಬೋಧಿಸಿದ ಸರಣಿಯ ಛಾಯೆಯಲ್ಲಿಯೇ ಮುಂದೆ ಅತಿ ಸಂಕ್ಷೇಪವಾಗಿ ಸೂಚಿಸಿರುವೆವು:—

"ಭಿಕ್ಷುಗಳಿರಾ! ಪರಿವ್ರಾಜಕರು ಎರಡು ಬಗೆಯ ಅತಿವರ್ತನೆಗಳನ್ನೂ ಬಿಡಬೇಕು. ಅವುಗಳಾವುವು? ಅನಾರ್ಯವೂ ಗ್ರಾಮ್ಯವೂ ಎನಿಸಿ ಪೃಥಗ್ಜನ ಯೋಗ್ಯವೆನಿಸಿರುವ ಭೋಗ ಮಗ್ನತೆಯನ್ನೂ ಬಿಡಬೇಕು; ದುಃಖಮಯವೆನಿಸಿ ಅನರ್ಥಕವಾಗಿರುವ (ತಪಸ್ವಿನ ವೇಷದ) ಕಾಯಕ್ಲೇಶವನ್ನೂ ಬಿಡಬೇಕು. ಇವೆರಡು ಅತಿವರ್ತನಗಳಲ್ಲಾವುವನ್ನೂ ಅನುಸರಿಸದೆ

---

* "ಯಃ ಪೂರ್ವವೈದ್ಯಾಯ ನಮೋಽಸ್ತು ತಸ್ಮೈ"—ಬುದ್ಧಚರಿತ.

† "ವೈದ್ಯೋತ್ತಮಸ್ತ್ವಂ ಖಲು ಶಲ್ಯಹರ್ತಾ । ಚಿಕಿತ್ಸಕಸ್ತ್ವಂ ಪರಮಂ ಹಿತಂಕರಃ"—ಲಲಿತವಿಸ್ತರ. "ಸ ವೈದ್ಯರಾಜೋಽಮೃತಭೈಷಜಪ್ರದಃ................"—ಲಲಿತವಿಸ್ತರ.

‡ "ಯಥಾ ಚಿಕಿತ್ಸಾಶಾಸ್ತ್ರಂ ಚತುರ್ವ್ಯೂಹಂ ರೋಗೋ ರೋಗಹೇತುರಾರೋಗ್ಯಮ್ ಭೈಷಜಮ್ ಇತಿ........"—ಯೋಗಸೂತ್ರಭಾಷ್ಯ.

ಧರ್ಮಚಕ್ಷುಸ್ಸನ್ನು ಕೊಡುವುದಾಗಿಯೂ, ಪ್ರಜ್ಞಾಪ್ರದಾಯಕವಾಗಿಯೂ, ಶಾಂತಿದಾಯಕವಾಗಿಯೂ, ನಿರ್ವಾಣ ಸಾಧಕವಾಗಿಯೂ ಇರುವ ತಥಾಗತನ ಮಧ್ಯಮ ಮಾರ್ಗವನ್ನು ಅನುಸರಿಸಬೇಕು. ಅದಾವುದು ಆ ಮಧ್ಯಮ ಮಾರ್ಗ ? ಆರ್ಯ ಸತ್ಯಗಳನ್ನರಿತು ಆರ್ಯಾಷ್ಟಾಂಗಿಕ ಮಾರ್ಗವನ್ನನುಸರಿಸುವುದೇ ಆ ಮಧ್ಯಮ ಮಾರ್ಗ.

ಜೀವನವು ದುಃಖಮಯವೆಂಬುದು ಮೊದಲನೆಯ ಆರ್ಯ ಸತ್ಯ. ಜನ್ಮವು ದುಃಖಮಯ; ಜರೆಯು ದುಃಖಮಯ; ವ್ಯಾಧಿಯು ದುಃಖಮಯ; ಅಪ್ರಿಯರ ಸಂಯೋಗವು ದುಃಖಮಯ; ಪ್ರಿಯರ ವಿಯೋಗವು ದುಃಖಮಯ. ರೂಪ, ವೇದನಾ, ಸಂಜ್ಞಾ, ಸಂಸ್ಕಾರ, ವಿಜ್ಞಾನಗಳೆಂಬ ಪಂಚಸ್ಕಂಧಗಳ ವ್ಯಾಪಾರ ರೂಪದ ಈ ಜೀವನವೇ ದುಃಖಮಯವಾದುದು. ಭಿಕ್ಷುಗಳಿರಾ! ದುಃಖ ಸಮುದಯವು (ದುಃಖಕ್ಕೆ ಕಾರಣವುಂಟೆಂಬುದು) ಆರ್ಯಸತ್ಯಗಳಲ್ಲೆರಡನೆಯದು. ತೃಷ್ಣೆಯೇ ಜನ್ಮಕ್ಕೂ ಅದರಲ್ಲಿಯ ದುಃಖಕ್ಕೂ ಮುಖ್ಯ ಕಾರಣ. ಭೋಗತೃಷ್ಣೆ, ಭವತೃಷ್ಣೆ, ವಿಭವತೃಷ್ಣೆ ಇತ್ಯಾದಿಯಾಗಿ ದುಃಖಕಾರಣವಾದ ತೃಷ್ಣೆಯು ಬಹುಮುಖವಾಗಿದೆ. ಭಿಕ್ಷುಗಳಿರಾ! ದುಃಖ ನಿರೋಧವು ಸಾಧ್ಯವೆಂಬುದು ಆರ್ಯಸತ್ಯಗಳಲ್ಲಿ ಮೂರನೆಯದು. ವೈರಾಗ್ಯವನ್ನು ಭಜಿಸಿ ತೃಷ್ಣೆಯ ಬಲೆಯಿಂದ ಪಾರಾಗುವುದು ದುಃಖನಿರೋಧಕ್ಕೆ ಸಾಧನ. ಭಿಕ್ಷುಗಳಿರಾ! ದುಃಖ ನಿರೋಧ ಗಾಮಿನಿಯಾದ ಮಾರ್ಗವುಂಟೆಂಬುದು ಆರ್ಯ ಸತ್ಯಗಳಲ್ಲಿ ಕೊನೆಯದು. ಆರ್ಯಾಷ್ಟಾಂಗಿಕ ಮಾರ್ಗವೇ ಆ ಮಾರ್ಗ. (೧) ಸಮ್ಯಕ್ದೃಷ್ಟಿ (೨) ಸಮ್ಯಕ್ಸಂಕಲ್ಪ (೩) ಸಮ್ಯಕ್ವಚನ (೪) ಸಮ್ಯಕ್ಕರ್ಮ (೫) ಸಮ್ಯಗ್ಜೀವಿಕಾ (೬) ಸಮ್ಯಗ್ವ್ಯಾಯಾಮ (೭) ಸಮ್ಯಕ್ಸ್ಮೃತಿ (೮) ಸಮ್ಯಕ್ಸಮಾಧಿ—ಈ ಎಂಟೂ ಆ ಮಾರ್ಗಕ್ಕೆ ಅಂಗಭೂತವೆನಿಸಿರುವ ಸಾಧನೆಗಳು. ಭಿಕ್ಷುಗಳಿರಾ! ಈ ಆರ್ಯಸತ್ಯಗಳನ್ನರಿತು ಅಷ್ಟಾಂಗ ಮಾರ್ಗವನ್ನು ನಾನು ಅನುಸಂಧಾನ ಮಾಡಿದುದರಿಂದ ಪ್ರಜ್ಞೆಯು ಉತ್ಪನ್ನವಾಯಿತು; ವಿದ್ಯಾಲಾಭವಾಯಿತು; ಧರ್ಮಚಕ್ಷುಸ್ಸು ತೆರೆಯಿತು. ನನಗೆ ಇದೇ ಅಂತಿಮ ಜನ್ಮ."

ಬುದ್ಧನು ಸೊಗಸಾಗಿಯೂ, ಸಂಕ್ಷೇಪವಾಗಿಯೂ ಈ ರೀತಿ ಆರ್ಯಸತ್ಯಗಳನ್ನು ನಿರೂಪಿಸಿದ್ದಾನೆ. ಬುದ್ಧನ ಸಿದ್ಧಾಂತದಲ್ಲಿ ಅಡಗಿರುವ ಆಶಯಗಳನ್ನು ಇಲ್ಲಿ ಸಂಕ್ಷೇಪವಾಗಿ ಅರಿಕೆಮಾಡುವೆವು.—

ಬುದ್ಧನ ಸಿದ್ಧಾಂತದ ಪ್ರಕಾರ ಐಹಿಕ ಜೀವನವೂ, ಬ್ರಹ್ಮಲೋಕವೇ ಮುಂತಾದವುಗಳಲ್ಲಿಯ ಆವಾಸವೂ, ಸಮಸ್ತ ವ್ಯಾಪಾರಗಳೂ ನಶ್ವರ. ಅವುಗಳಾವುವೂ ಶಾಶ್ವತವಲ್ಲ.*

**ಅನಿತ್ಯತೆ**

ಈ ವಿಚಾರವನ್ನೂ, ಧರ್ಮನಿಯಮಗಳ ಮೇರೆಗೆ ಯಾವ ರೀತಿಯಲ್ಲಿ ಜೀವನವು ಏರ್ಪಟ್ಟಿವೆಯೆಂಬುದನ್ನೂ, ಜಗತ್ತಿನ ಸ್ವಭಾವವನ್ನೂ ಅರಿಯದೆ ನಾವು ಜನನಮರಣರೂಪದ ಸಂಸಾರದಲ್ಲಿ ಸಿಕ್ಕಿಕೊಳ್ಳುತ್ತೇವೆ. ನಮ್ಮ ಅಜ್ಞಾನ

---

* ಬುದ್ಧನು ಉಪದೇಶಿಸಿದುದು ಸಮಸ್ತವೂ ಅನಿತ್ಯವೆಂದು ಮಾತ್ರವೇ ಹೊರತು ಸರ್ವವೂ ಕ್ಷಣಿಕವೆಂದಲ್ಲ. ಕ್ಷಣಿಕವಾದವು ಬುದ್ಧನ ಕಾಲಾನಂತರ ಹುಟ್ಟಿತು. ಸರ್ ರಾಧಾಕೃಷ್ಣನ್‌ರವರೂ ಸಹ "The Doctrine of impermanence held in common by the upanishads and early Buddhism is developed by later Buddhism into the view of momentariness. But to say that things are *anitya* or impermanent is different from saying that they are momentary or *kshanika*" ಎಂದು ಹೇಳಿದ್ದಾರೆ. (Page 372, *Indian Philosophy* By Sir S. Radhakrishnan) ಚಿತ್ತದ ವ್ಯಾಪಾರಗಳು ಕ್ಷಣಕ್ಷಣವೂ ಮಾರ್ಪಡುತ್ತ ಕ್ಷಣಿಕವಾಗಿರುವುವೆಂದು ಮಾತ್ರವೇ ಬುದ್ಧನು ಹೇಳಿದ್ದಾನೆ. ಸಮಸ್ತವೂ ಕ್ಷಣಿಕವೆಂದು ಆತನು ಹೇಳಿಲ್ಲ. "Buddha himself seems to have taught only the impermanence or mutability of things except perhaps mind;"—Page 144, *outlines of Indian Philosophy*, By prof. M. Hiriyanna.

ವಶದಿಂದ ಪಾಪಕ್ಕೂ ದುಃಖಕ್ಕೂ ಈಡಾಗಿ ಮತ್ತೆಮತ್ತೆ ಹುಟ್ಟು ಸಾವುಗಳನ್ನು ಹೊಂದಿ ಕ್ಲೇಶಪಡುತ್ತೇವೆ. ಅನಿತ್ಯವಾದ ವಸ್ತುಗಳಲ್ಲಿ ಆಸಕ್ತಿಯನ್ನಿಟ್ಟುಕೊಂಡು ಭೋಗಮಗ್ನರಾಗಿಯೂ ವಿಚಾರಹೀನರಾಗಿಯೂ ಕಾಲವನ್ನು ಕಳೆದು ದುಃಖಕ್ಕೆ ಗುರಿಯಾಗುತ್ತೇವೆ.

**ತೃಷ್ಣೆ**

ತೃಷ್ಣೆಯೇ ನಮ್ಮ ಹುಟ್ಟು ಸಾವುಗಳಿಗೂ, ಇತರ ಸಮಸ್ತ ದುಃಖಗಳಿಗೂ ಮೂಲ. ಇದ್ದಷ್ಟು ದಿನಗಳೂ ಭೋಗಪಟ್ಟು ಮೃತರಾದರೆ ಸಾಕೆಂಬ ಬಯಕೆಯೂ, ಇಹಲೋಕದಲ್ಲಾಗಲಿ, ಬ್ರಹ್ಮಲೋಕ ಮುಂತಾದುವುಗಳಲ್ಲಾಗಲಿ ಬಾಳಬೇಕೆಂಬ ಆಶೆಯೂ ತೃಷ್ಣೆಯ ರೂಪಗಳು. ಸ್ವಾರ್ಥಪರತೆಯಿಂದಲೂ ರಾಗದ್ವೇಷಾದಿಗಳಿಂದಲೂ ಕೂಡಿ ಐಹಿಕ ಸುಖಕ್ಕೆ ಆಶೆಪಡುವ ಮನೋಧರ್ಮಕ್ಕೆ ತೃಷ್ಣೆಯೇ ಮೂಲ ಕಾರಣ. ಪ್ರಾಣಿಗಳು ಸಂಸಾರ ದುಃಖಕ್ಕೆ ಸಿಕ್ಕಿ ಕ್ಲೇಶಪಡುವಂತೆ ಮಾಡುವುದು ತೃಷ್ಣೆಯೇ. ಬುದ್ಧನು ತೃಷ್ಣೆಯ ಸ್ವಭಾವವನ್ನು ಕುರಿತು ನಿರೂಪಿಸುವುದರಲ್ಲಿ, "ಪ್ರಮತ್ತಚಾರಿಯಾದ ಮನುಷ್ಯನ ತೃಷ್ಣೆಯು ಲತೆಯಂತೆ ಹಬ್ಬುತ್ತದೆ. ಕಾಡಿನಲ್ಲಿ ಹಣ್ಣನ್ನು ಹುಡುಕಿಕೊಂಡು ಮರದಿಂದ ಮರಕ್ಕೆ ಹಾರುವ ಕಪಿಯಂತೆ ಅವನು ಭವದಿಂದ ಭವಕ್ಕೆ ಹಾರಬೇಕಾಗುತ್ತದೆ........ದುರತ್ಯಯವಾದ ತೃಷ್ಣೆಯನ್ನು ಯಾವನು ದಮನ ಮಾಡುವನೋ ಅವನ ಶೋಕಗಳೆಲ್ಲ ತಾವರೆಯ ಮೇಲಿನ ನೀರಿನ ಹನಿಗಳಂತೆ ಉದುರಿಹೋಗುತ್ತವೆ"* ಎಂದು ಹೇಳಿದ್ದಾನೆ. ಜನನ ಮರಣಗಳ ಪರಂಪರೆಗೆ ಪರಿಮಿತಿಯೇ ಇಲ್ಲದೆ

---

* "ಮನುಜಸ್ಸ ಪಮತ್ತಚಾರಿನೋ ತಣ್ಹಾ ವಡ್ಢತಿ ಮಾಲುವಾ ವಿಯ । ಸೋ ಪಲವತಿ ಹುರಾಹುರಂ ಫಲಮಿಚ್ಛಂ ವ ವನಸ್ಮಿಂ ವಾನರೋ ॥...............ಯೋ ಚೇತಂ ಸಹತೀ ಜಮ್ಮಿಂ ತಣ್ಹಂ ಲೋಕೇ ದುರಚ್ಚಯಂ । ಸೋಕಾ ತಮ್ಹಾ ಪಪತನ್ತಿ ಉದಬಿನ್ದೂ ವ ಪೋಕ್ಖರಾ ॥"

ಅವು ಅನಂತವಾಗಿರುತ್ತವೆ. ತೃಷ್ಣೆಯ ನಿರೋಧವೇ ಅವುಗಳ ಕೋಟಲೆಯಿಂದ ತಪ್ಪಿಸಿಕೊಳ್ಳಲು ದಾರಿ. ಈ ಲೋಕದಲ್ಲಾಗಲಿ ಅಥವಾ ಇತರ ಲೋಕಗಳಲ್ಲಾಗಲಿ ಜನಿಸಬೇಕೆಂಬ ಅಥವಾ ಬಾಳ ಬೇಕೆಂಬ ಬಯಕೆಯನ್ನು ಬಿಟ್ಟರೆ ತೃಷ್ಣೆಯು ಪರಿಹಾರವಾಗಿ ನಿರ್ವಾಣದ ಶಾಂತಿಯು ದೊರೆಯುತ್ತದೆ.

**ಅವಿದ್ಯೆ**

ಆದರೆ ಅವಿದ್ಯೆಯು ತೃಷ್ಣೆಯ ಪರಿಹಾರಕ್ಕೆ ಅವಕಾಶ ಕೊಡುವು ದಿಲ್ಲ. ಅನಿತ್ಯವಾದ ಪ್ರಾಪಂಚಿಕ ವ್ಯಾಪಾರಗಳೇ ಸಾರಭೂತವೆಂದು ನಂಬಿಕೆಯುಂಟಾಗುವಂತೆ ಮಾಡಿ ನಿಜದ ನೆಲೆ ಯನ್ನರಿಯದಂತೆ ಅವಿದ್ಯೆಯು ತಡೆಯುತ್ತದೆ. ಮಿಥ್ಯಾ ಸಂಕಲ್ಪದಿಂದ ಕೂಡಿ ಅಸಾರವಸ್ತು ಗಳನ್ನು ಸಾರವಸ್ತುಗಳೆಂದೂ, ಸಾರವಸ್ತುಗಳನ್ನು ಅಸಾರವಸ್ತು ಗಳೆಂದೂ ಭ್ರಾಂತಿಪಡುವವರು ಸಾರಾಸಾರ ವಿವೇಕವನ್ನು ಪಡೆಯ ಲಾರರು.* ಪ್ರಾಪಂಚಿಕ ವ್ಯವಹಾರಗಳಲ್ಲಿಯೇ ಮಗ್ನರಾಗಿ ನಾವು ಅವುಗಳಲ್ಲಿ ತೀವ್ರಾಸಕ್ತಿಯನ್ನಿಟ್ಟುಕೊಳ್ಳುತ್ತೇವೆ. ಅದರ ಫಲಿತಾಂಶ ವಾಗಿ ಕರ್ಮಾಚರಣೆಯು ಪ್ರಾರಂಭವಾಗುತ್ತದೆ.

**ಕರ್ಮ**

ಕರ್ಮಾಚರಣೆ ಮಾಡುವುದರಲ್ಲಿ ಪ್ರಾಣಿಗಳಿಂದ ನಡೆಯುವ ಕರ್ಮಗಳು ಸತ್ಕಾರ್ಯಗಳೆಂದೂ, ದುಷ್ಕಾರ್ಯಗಳೆಂದೂ ವಿಭಾಗ ವಾಗಿವೆ. ಸತ್ಕಾರ್ಯಗಳಿಂದ ಪುಣ್ಯಲಾಭವೂ ದುಷ್ಕಾರ್ಯಗಳಿಂದ ಪಾಪ ಸಂಘಟನೆಯೂ ಆಗುತ್ತವೆ. ಪುಣ್ಯವೇ ಹೆಚ್ಚಾಗಿದ್ದರೆ ದೇವಲೋಕ ಬ್ರಹ್ಮಲೋಕ ಮುಂತಾದವುಗಳಲ್ಲಿ ಸುಖಾವಾಸವಾಗಲಿ ಅಥವಾ ಭೂಲೋಕದಲ್ಲಿಯೇ ಉತ್ತಮವಶಿಯ ಜನ್ಮವಾಗಲಿ ದೊರೆಯುತ್ತದೆ. ಪಾಪವೇ ಹೆಚ್ಚಾಗಿದ್ದರೆ ಅಂಧಕಾರಾವೃತವಾದ ಲೋಕಗಳಲ್ಲಿಯ

* "ಅಸಾರೇ ಸಾರಮತಿನೋ ಸಾರೇ ಚಾಸಾರದಸ್ಸಿನೋ ।
ತೇ ಸಾರಂ ನಾಧಿಗಚ್ಛನ್ತಿ ಮಿಚ್ಛಾಸಂಕಪ್ಪಗೋಚರಾ ॥"

ದುಃಖಾನುಭವವುಂಟಾಗುತ್ತದೆ; ಅಥವಾ ಭೂಲೋಕದಲ್ಲಿ ಹೀನ ದರ್ಜೆಯ ಜನ್ಮವು ದೊರೆಯುತ್ತದೆ. ಕ್ರೈಸ್ತಮತದಲ್ಲಿಯೂ ಯೆಹೋದೀಯ ಮುಂತಾದ ಮತಗಳಲ್ಲಿಯೂ ಹೇಳಿರುವಂತೆ ಪಾಪಿಗಳಿಗೆ ಅಂತರಹಿತವಾದ ಘೋರ ಹಿಂಸೆಯು ನಡೆಯುವ ನರಕದ ಕಲ್ಪನೆಯು ಬೌದ್ಧಮತದಲ್ಲಿಲ್ಲ. ಪಾಪಿಗಳು ಅಂಧಕಾರಾವೃತವಾದ ಲೋಕಗಳಲ್ಲಿ ನಿಯತಕಾಲ ದುಃಖಾನುಭವ ಮಾಡಬೇಕಾಗುವುದೆಂದು ಮಾತ್ರವೇ ಬೌದ್ಧರ ಕಲ್ಪನೆ. ಈ ಬಗೆಯ ದುಃಖಾನುಭವವೂ ಒಂದು ಅವಸ್ಥೆ ಮಾತ್ರವೆನ್ನಬಹುದಾಗಿದೆ.

ಒಳ್ಳೆಯ ಕೆಲಸ ಮಾಡುವುದೇ ಆಗಲಿ ಅಥವಾ ಕೆಟ್ಟಕೆಲಸ ಮಾಡುವುದೇ ಆಗಲಿ ಅವರವರ ಆಂತರಿಕ ಸ್ವಭಾವಕ್ಕನುಗುಣವಾಗಿ ಸಂಭವಿಸತಕ್ಕದಾಗಿದೆಯೆಂಬುದು ಬೌದ್ಧ ಸಿದ್ಧಾಂತದಲ್ಲಿಯ ಭಾವನೆ. ಈ ಸ್ವಭಾವವೆಂಬುದು ಅವರವರ ಪೂರ್ವಜನ್ಮಗಳ ಕರ್ಮಗಳಿಗನುಸಾರವಾಗಿ ಏರ್ಪಟ್ಟಿರುತ್ತದೆ. ಎಂದರೆ ಹಿಂದಿನ ಜನ್ಮಗಳಲ್ಲಿ ಮಾಡಿದ ಆಲೋಚನೆಗಳು, ಆಡಿದ ಮಾತುಗಳು ಮತ್ತು ನಡೆಯಿಸಿದ ಕೆಲಸಗಳು—ಇವುಗಳ ಪರಿಣಾಮರೂಪವಾಗಿ ಅವಕ್ಕೆ ತಕ್ಕಂತೆ ಸ್ವಭಾವವು ಏರ್ಪಡುತ್ತದೆ. ಆ ಸ್ವಭಾವಕ್ಕೆ ತಕ್ಕ ಕರ್ಮಾಚರಣೆಯೇ ಮತ್ತೆ ನಡೆದು, ಮತ್ತೆ ಮುಂದಿನ ಜನ್ಮದ ಸ್ವಭಾವ ಮುಂತಾದುವು ಸಿದ್ಧವಾಗುತ್ತವೆ. ಹೀಗೆ ಜನ್ಮಪರಂಪರೆಗಳು ಸಂಭವಿಸುತ್ತ ಹೋಗುತ್ತವೆ.

ನಾವು ಹುಟ್ಟುವುದಕ್ಕೆ ತೃಷ್ಣೆಯು ಕಾರಣವಾದರೆ, ನಮಗೆ ಯಾವ ಬಗೆಯ ಸ್ವಭಾವವೂ ಯಾವ ಬಗೆಯ ಹುಟ್ಟೂ ದೊರೆಯಬೇಕೆಂಬುದು ನಮ್ಮ ಕರ್ಮಗಳಿಂದ ನಿರ್ಧರವಾಗುತ್ತದೆ. ಎಂದರೆ, ನಮಗೆ ಜನ್ಮವನ್ನು ದೊರೆಯಿಸುವುದು ತೃಷ್ಣೆಯ ಕಾರ್ಯ. ಆದರೆ ಯಾವ ದೇಹವು ದೊರೆಯಬೇಕು, ಯಾವ ಸ್ಥಿತಿಯಲ್ಲಿ ನಾವಿರಬೇಕು, ಯಾವ ಸ್ವಭಾವವನ್ನು ನಾವು ಪಡೆಯಬೇಕು, ಯಾವ ದುಃಖಗಳನ್ನೂ, ಸುಖಗಳನ್ನೂ ನಾವು ಅನುಭವಿಸಬೇಕು—ಎಂಬಿವೇ

ಮುಂತಾದ ವಿಚಾರಗಳ ವ್ಯವಸ್ಥೆಯು ನಮ್ಮ ಕರ್ಮಕ್ಕಧೀನವಾದುದು. ಕರ್ಮಕ್ಕೆ ತಕ್ಕ ಫಲವು ತಪ್ಪದೆ ದೊರೆಯುತ್ತದೆ. ಎತ್ತು ಹೆಜ್ಜೆಯಿಟ್ಟ ಸ್ಥಳದ ಮಾರ್ಗವಾಗಿ ಬಂಡಿಯ ಚಕ್ರವು ಉರುಳುವಂತೆ ದುಷ್ಕಾರ್ಯ ಗಳಿಗೆ ತಪ್ಪದೆ ಪಾಪವು ಸಂಘಟಿಸುತ್ತದೆ. ನೆರಳು ದೇಹವನ್ನು ಅನುಸರಿಸಿಕೊಂಡು ಬರುವಂತೆ ಸತ್ಕಾರ್ಯಗಳಿಗೆ ತಪ್ಪದೆ ಪುಣ್ಯವು ಲಭಿಸುತ್ತದೆ. ನಮ್ಮ ಪರಿಸ್ಥಿತಿಗೆ ನಮ್ಮ ಕರ್ಮಗಳೇ ಕಾರಣ.

**ಪ್ರತೀತ್ಯ ಸಮುತ್ಪಾದ**

ಭೂಲೋಕದಲ್ಲಾಗಲಿ, ಸ್ವರ್ಗ ಮುಂತಾದ ಲೋಕಗಳಲ್ಲಾಗಲಿ, ನಡೆಯುವ ಸಮಸ್ತ ವ್ಯಾಪಾರಗಳೂ ಸಹೇತುಕಗಳಾಗಿರುವುವೆಂದೂ, ಸಮಸ್ತ ವ್ಯಾಪಾರಗಳೂ ಸಹೇತುಕ ಸರಣಿಯಿಂದೊಡಗೂಡಿದ ನಿಯಮಗಳಿಗೆ ಬದ್ಧವಾಗಿರುವುವೆಂದೂ ಬುದ್ಧನು ಬೋಧಿಸಿದನು. ಅಲ್ಲದೆ ಈ ನಿಯಮಬದ್ಧತೆಯನ್ನು ಪ್ರತೀತ್ಯ ಸಮುತ್ಪಾದವೆಂದು ಆತನು ಕರೆದನು. ಬೌದ್ಧ ಸಿದ್ಧಾಂತದಲ್ಲಿ ಇದು ಅತಿ ಮುಖ್ಯವಾದುದು. ಪ್ರತೀತ್ಯ ಸಮುತ್ಪಾದ ಸಿದ್ಧಾಂತದ ವೈಖರಿಯನ್ನು ನೋಡಿ ಇಂದಿನ ವಿಜ್ಞಾನ ಶಾಸ್ತ್ರಜ್ಞರಲ್ಲಿ ಕೂಡ ಹಲವರು ಬೆರಗಾಗಿದ್ದಾರೆ. ಹೇತುಬದ್ಧವಾದ ಕಾರ್ಯಕರಣ ಸರಣಿಯನ್ನು ಸೂಚಿಸುವಲ್ಲಿ ಬುದ್ಧನು, "ಅದು ಹೀಗಿದ್ದ ಪಕ್ಷದಲ್ಲಿ ಇದು ನೆರವೇರುತ್ತದೆ. ಆ ಕ್ರಿಯೆಯಿಂದ ಈ ಕ್ರಿಯೆಯು ಹುಟ್ಟಲು ಹೇತುವೊದಗುತ್ತದೆ. ಅದಿಲ್ಲದೆ ಅಭಾವವುಂಟಾದಲ್ಲಿ ಇದು ನಡೆಯುವುದೇ ಇಲ್ಲ. ಅದು ನಿಂತುಹೋದರೆ ಇದೂ ಮುಗಿದುಹೋಗುತ್ತದೆ"* ಎಂದು ಮುಂತಾಗಿ ಹೇಳಿಕೊಂಡು ಬಂದಿದ್ದಾನೆ. ಪ್ರತೀತ್ಯ ಸಮುತ್ಪಾದದ ಪ್ರಕಾರ ಫಲಿತವಾಗುವ ಅಂಶಗಳಿವು: ನಾನಾ ವ್ಯಾಪಾರಗಳಲ್ಲಿಯೂ ಅನಾದಿಯಾಗಿ ಮಾರ್ಪಾಡುಗಳೂ ನಡೆಯುತ್ತ ಬಂದಿವೆ. ಆದರೆ

---

* "ಇಮಸ್ಮಿಂ ಸತಿ, ಇದಂ ಹೋತಿ । ಇಮಸ್ಸುಪ್ಪಾದಾ ಇದಂ ಉಪಜ್ಜತಿ ॥..........."

ಎಲ್ಲವೂ ಒಂದರೊಡನೆ ಮತ್ತೊಂದಕ್ಕೆ ಸಂಬಂಧವಿದ್ದೇ ನಿಯಮಬದ್ಧವಾಗಿ ನಡೆಯುತ್ತಿದೆ. ಹಿಂದಿನ ವ್ಯಾಪಾರಗಳು ಮುಗಿದು ಬೇರೆ ಹೊಸವುಗಳು ನಡೆಯುವುದಲ್ಲ, ನಿಜಸ್ಥಿತಿ. ಒಂದು ಅವಸ್ಥೆಯಿಂದ ಪ್ರತೀತ್ಯ ಶಕ್ತಿಯನ್ನು ಪಡೆದು* ಆ ಹೇತುವಿನಿಂದಲೇ ಮುಂದಿನ ಅವಸ್ಥೆಯುಂಟಾಗುತ್ತದೆ. ಸಮಸ್ತ ವ್ಯಾಪಾರಗಳೂ ಈ ಬಗೆಯ ಹೊಂದಿಕೆಯಿಂದ ಕೂಡಿ ಸಹೇತುಕವಾಗಿಯೂ, ನಿಯಮಬದ್ಧವಾಗಿಯೂ ನಡೆಯುತ್ತಿವೆ.

**ಕರ್ಮನಿಯಮ (ಕರ್ಮವಿಪಾಕ)**

ಗೌತಮಬುದ್ಧನು ಪ್ರತೀತ್ಯ ಸಮುತ್ಪಾದದ ನಿಯಮವನ್ನು ಇತರ ವಿಚಾರಗಳಿಗೆ ಅನ್ವಯಿಸಿದಂತೆಯೇ ಕರ್ಮಕ್ಕೂ ಅನ್ವಯಿಸಿ, "ಕರ್ಮಫಲವು ಅನುಭವಿಸಿದಲ್ಲದೆ ತಪ್ಪದೆಂದು ಕರ್ಮ ನಿಯಮವನ್ನೇರ್ಪಡಿಸಿದುದು ಸಹಜವಾಗಿಯೇ ಇದೆ. ಮನುಷ್ಯರು ಮಾಡಿದ ದುಷ್ಕರ್ಮಗಳ ದಾರುಣ ಫಲವನ್ನು ಅನುಭವಿಸದೆ ತಪ್ಪಿಸಿಕೊಳ್ಳುವುದು ಸಾಧ್ಯವಿರುವ ಸ್ಥಳವು ಆಕಾಶದಲ್ಲಾಗಲಿ, ಸಮುದ್ರ ಮಧ್ಯದಲ್ಲಾಗಲಿ, ಪರ್ವತ ಮಧ್ಯದಲ್ಲಿರುವ ಗುಹೆಗಳಲ್ಲಾಗಲಿ ಎಲ್ಲಿಯೂ ಇಲ್ಲ" ಎಂದು ಬುದ್ಧನು ಉಪದೇಶಿಸಿದನು. ಆತ್ಮಹತ್ಯ ಮಾಡಿಕೊಂಡರೂ ಪೂರ್ವಾರ್ಜಿತ ಕರ್ಮಫಲವು ಬೆನ್ನುಬಿಡದೆಂಬುದು ಬೌದ್ಧ ಸಿದ್ಧಾಂತದ ಆಶಯ. ಕರ್ಮವಿಪಾಕ ತತ್ತ್ವವನ್ನು ಸನಾತನ ಧರ್ಮಾವಲಂಬಿಗಳೂ, ಜೈನರೇ ಮುಂತಾದವರೂ ಎಲ್ಲರೂ ಒಪ್ಪುತ್ತಾರೆ; ಕೆಲವು ನಾಸ್ತಿಕ ಪಂಥಗಳವರು ಮಾತ್ರ ಇದನ್ನೊಪ್ಪುವುದಿಲ್ಲ. ಉಳಿದ ಭಾರತೀಯ ದರ್ಶನಗಳಲ್ಲಿ ಪ್ರತಿಯೊಂದರಲ್ಲಿಯೂ ಕರ್ಮವಿಪಾಕ ಸಿದ್ಧಾಂತವು ಒಂದು ವೈಶಿಷ್ಟ್ಯವೆನಿಸಿ ಸುವರ್ಣಕಲಶಗಳಂತಿರುವ ಮುಖ್ಯ ಲಕ್ಷಣಗಳಲ್ಲೊಂದಾಗಿದೆ.

---

* "ತಂ ತಂ ಪ್ರತ್ಯಯಂ ಪ್ರತೀತ್ಯ ಸಮುತ್ಪನ್ನಂ, ಪ್ರತೀತ್ಯ ಸಮುತ್ಪನ್ನಂ"

ಆದಾಗ್ಯೂ, ಬೌದ್ಧಮತದಲ್ಲೊಂದು ವಿಶೇಷ. ಗೌತಮ ಬುದ್ಧನು ಇತರ ದರ್ಶನಗಳವರು ಮೊದಲೇ ಅಂಗೀಕರಿಸಿ ಬೋಧಿಸಿದ ಕರ್ಮವಿಪಾಕ ಸಿದ್ಧಾಂತವನ್ನು ಮತ್ತಷ್ಟು ಹಿಗ್ಗಿಸಿ ಅದರ ವ್ಯಾಪ್ತಿಯನ್ನು ಹೆಚ್ಚಿಸಿದನು. ದೇವಲೋಕದವರೂ, ಬ್ರಹ್ಮಲೋಕದವರೂ ಸಹ ಕರ್ಮನಿಯಮದಿಂದ ತಪ್ಪಿಸಿಕೊಳ್ಳುವಂತಿಲ್ಲವೆಂದೂ ಆತನು ಸಿದ್ಧಾಂತಮಾಡಿದನು. ಅದರ ಪರಿಣಾಮವಾಗಿ ಪಾಪಕ್ಕೆ ದುಃಖಾನುಭವವೇ ಫಲವೆಂಬುದೂ, ದಾನ ಹೋಮ ಪ್ರಾಯಶ್ಚಿತ್ತ ಮುಂತಾದ ಯಾವ ಕರ್ಮಗಳಿಂದಲೂ ಅದು ತಪ್ಪುವಂತಿಲ್ಲವೆಂಬುದೂ ಸ್ಪಷ್ಟವಾದುವು. ದೇವಲೋಕದವರೂ, ಬ್ರಹ್ಮಲೋಕದವರೂ ಕರ್ಮಾಧೀನರಾದಕಾರಣ, ಅವರ ದಯೆಯಿಂದಲೂ ಮಾನವರು ದುಷ್ಕರ್ಮ ಫಲದಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲವೆಂಬ ತತ್ತ್ವವು ಏರ್ಪಟ್ಟಿತು. ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬವು ಸಂಪೂರ್ಣವಾಗಿ ಬಿಂಬದ ಸ್ವರೂಪಕ್ಕನುಸಾರವಾಗಿರುವಂತೆ ಕರ್ಮಕ್ಕನುಸಾರವಾದ ಶುಭಾಶುಭ ಫಲಗಳು ದೊರೆಯುವುವೆಂದು ನಿಷ್ಕರ್ಷೆಯಾಯಿತು. ಶಾಕ್ಯಮುನಿಯು ಬುದ್ಧನಾಗಿ ಕರ್ಮತೃಷ್ಣೆಗಳು ಭವಹೇತುಗಳೆಂಬ ತತ್ತ್ವವನ್ನು ಸಾಕ್ಷಾತ್ಕಾರ ಮಾಡಿಕೊಂಡಾಗ ಹೇಳಿದ ಮೊಟ್ಟಮೊದಲನೆಯ ಮಾತುಗಳು ಮನೋಹರವಾಗಿವೆ. (೧೧ಉನೆಯ ಪುಟವನ್ನು ನೋಡಿ.)

**ಪ್ರಜ್ಞೆಯ ಸಾಮರ್ಥ್ಯ**

ಕರ್ಮವಿಪಾಕವು ಇಷ್ಟು ಪ್ರಬಲವಾಗಿದ್ದು ಅದರಿಂದ ಅನಂತ ಸಂಖ್ಯಾತವಾದ ಜನನ ಮರಣಗಳ ರೂಪದ ಸಂಸಾರ ಬಂಧನ ವುಂಟಾಗುವ ಪಕ್ಷಕ್ಕೆ ಅದರಿಂದ ಬಿಡುಗಡೆಯನ್ನು ಕಾಣುವ ಸಂಭವವೇ ಇಲ್ಲವೆ—ಎಂಬ ಪ್ರಶ್ನೆಯು ಹುಟ್ಟಬಹುದು. ನಮ್ಮನ್ನು ಜನ್ಮದಿಂದ ಜನ್ಮಕ್ಕೆ ಓಡಿಸಿ ದುಃಖಕ್ಕೆ ಗುರಿಮಾಡಿರುವ ಕರ್ಮ ಬಂಧನವು ಅವಿದ್ಯೆಯ ಪರಿಣಾಮವಾಗಿ ಕಲ್ಪಿತವಾದುದು. ಆದ

ಕಾರಣ, ಕರ್ಮಾಚರಣೆಯ ವಾಸ್ತವ ಪರಿಸ್ಥಿತಿಯು ಯಾವ ಬಗೆಯದೆಂಬುದು ತಿಳಿದು ಪ್ರಜ್ಞಾಲಾಭವುಂಟಾದರೆ ಅವಿದ್ಯೆಯು ನಿವೃತ್ತಿಯಾಗಿ, ಕುಶಲಾಕುಶಲಸ್ವಭಾವವುಳ್ಳ† ಕರ್ಮ ಬಂಧನವು ತಾನಾಗಿಯೇ ಕಳಚಿಬೀಳುವುದು. ಜೀವನದ ನಿಜಸ್ವಭಾವವೇನೆಂಬುದನ್ನು ಗೊತ್ತುಮಾಡಿಕೊಡುವುದಕ್ಕಾಗಿ ಬೌದ್ಧಮತ ಸಿದ್ಧಾಂತಪ್ರಕಾರ ಅನಾತ್ಮವಾದವು ಏರ್ಪಟ್ಟಿದೆ. ಅದಕ್ಕೆ ನೈರಾತ್ಮ್ಯವಾದವೆಂದೂ ಹೆಸರು.

**ಅನಾತ್ಮವಾದ**

ಜೀವನದಲ್ಲಿ ಕರ್ಮಗಳು ನಡೆಯುತ್ತಿದ್ದರೂ, ಪರಿಣಾಮ ವಿಕಾರ ರಹಿತನಾಗಿ ಅವುಗಳನ್ನಾಚರಿಸುವ ಕರ್ತೃವಾದ ಯಾವನೊಬ್ಬ ಶಾಶ್ವತನೂ ಇಲ್ಲವೆಂಬುದು ಬೌದ್ಧರ ಅಭಿಪ್ರಾಯ. "ಕರ್ಮವನ್ನಾಚರಿಸುವವನಾವನೂ ಇಲ್ಲ"‡ ಎಂಬುದು ಬೌದ್ಧಮತದ ಅನಾತ್ಮವಾದದ ಸಾರ. ಕರ್ಮಫಲ ಭೋಕ್ತೃವಾದ ಶಾಶ್ವತ ವಸ್ತುವೊಂದುಂಟೆಂಬುದನ್ನು ಬುದ್ಧನು ಬೋಧಿಸಲಿಲ್ಲ. ದೇಹದ ವ್ಯಾಪಾರಗಳು ಸರ್ವದಾ ನಡೆಯುತ್ತಿದ್ದಾಗ್ಯೂ ಅವುಗಳನ್ನು ನಡೆಯಿಸುವವನು ಯಾವ ವ್ಯಕ್ತಿಯೂ ಅಲ್ಲ. ಆದರೆ ಜೀವನವು ಕ್ಲ್ಪಪ್ತಕಾಲದವರೆಗಾದರೂ ಧಾರಾಕಾರವಾಗಿ ಅವಿಚ್ಛಿನ್ನತೆಯಿಂದ ನಡೆದುಬರುತ್ತಿರುವಂತೆ ತೋರುವುದಕ್ಕೇನು ಕಾರಣವೆಂದರೆ, ಬೌದ್ಧ ಸಿದ್ಧಾಂತದ ಉತ್ತರವು ಹೀಗಿರುವುದು: ಹೊಳೆಯಲ್ಲಿ ಅವಿಚ್ಛಿನ್ನತೆಯಿಂದ ಏಕಪ್ರಕಾರವಾಗಿ ಪ್ರವಾಹವಿರುವಂತೆ ತೋರುವುದು ಸ್ವಾಭಾವಿಕ.

---

† "ಕಮ್ಮಂ ನಾಮ ಕುಸಲಾಕುಸಲಚೇತನಾ" ಎಂಬುದಕ್ಕನುಸಾರವಾಗಿ ಒಳ್ಳೆಯದು ಕೆಟ್ಟುದೆಂಬುದರ (ಕುಶಲಾಕುಶಲದ) ಭಾವನೆಯ ಪರಿಜ್ಞಾನವೇ ಕರ್ಮ. ಕರ್ಮದಿಂದ ಅದರ ಸ್ವಭಾವಕ್ಕನುಸಾರವಾದ ವಿಪಾಕವು ಹುಟ್ಟುವುದು. ಕರ್ಮದಿಂದಲೇ ಪ್ರಪಂಚ, ಕರ್ಮದಿಂದಲೇ ಪ್ರಜೆ. (ಕಮ್ಮಣಾ ವತ್ತತಿ ಲೋಕೋ, ಕಮ್ಮಣಾ ವತ್ತತಿ ಪಜಾ).

‡ "ಕರ್ಮಸ್ಯ ಕಾರಕೋ ನಾಸ್ತಿ"

ಆದರೆ ಒಂದು ಕ್ಷಣದಲ್ಲಿ ಕಂಡ ನೀರಿನ ಸಮೂಹವು ಉತ್ತರಕ್ಷಣ ದಲ್ಲಿಯೇ ಅಲ್ಲಿಂದ ಸಾಗಿಹೋಗಿ ಬೇರೆ ನೀರಿನ ಸಮೂಹವು ಅಲ್ಲಿಗೆ ಬಂದು ಮರುಕ್ಷಣವೇ ಅದೂ ಸಾಗಿಹೋಗಿ ಮತ್ತೆ ಬೇರೆ ನೀರು ಬರುತ್ತದೆ. ಹೀಗೆ ವಾರಿರಾಶಿಯು ಸಂತಾನವು ಅನರ್ಗಳವಾಗಿದ್ದು ಒಟ್ಟಿನಲ್ಲಿ ಪ್ರವಾಹವೆನಿಸಿಕೊಂಡು ಶಾಶ್ವತವಾಗಿರುವ ತೋರಿಕೆಯಿಂದ ಕೂಡಿರುತ್ತದೆ. ಕೊಳ್ಳಿಯೊಂದನ್ನು ನಾವು ಬೇಗಬೇಗ ಚಕ್ರಾಕಾರ ವಾಗಿ ಗಿರಗಿರನೆ ತಿರುಗಿಸಿದರೆ ಜ್ವಾಲಾಮಯವಾದೊಂದು ದೊಡ್ಡ ವೃತ್ತವು ಕಾಣಿಸುತ್ತದೆ. ಹೀಗೆಯೇ ದೇಹಾದಿಗಳ ವ್ಯಾಪಾರಗಳೂ ಅವು ಸಂತಾನ ರೂಪದಲ್ಲಿ ಪರಂಪರೆಯಾಗಿ ಸಂಭವಿಸುತ್ತಿರುವುದ ರಿಂದ ಜೀವನವು ಏಕರೀತಿಯಲ್ಲಿ ಮುಂದುವರಿಯುತ್ತಿರುವ ತೋರಿಕೆ ಯುಂಟಾಗುತ್ತಿದೆ. ಆದಕಾರಣ ಜೀವನವು ದೇಹಾದಿಗಳಲ್ಲಿ ನಡೆ ಯುವ ವ್ಯಾಪಾರಗಳ ಸಂತಾನ ರೂಪದಿಂದ ಕೂಡಿರುವುದೇ ಹೊರತು, ಕರ್ಮಗಳನ್ನು ನಡೆಯಿಸುವ ಮತ್ತು ಕರ್ಮಫಲ ಭೋಕ್ತೃವಾದ ಶಾಶ್ವತ ವಸ್ತುವಾವುದೂ ಇಲ್ಲ. ಸಂತಾನ ತರಂಗವ ತೋರಿಕೆಯಿಂದ ವಂಚಿತನಾಗಿ ಮನುಷ್ಯನು "ನಾನು ಜೀವಿಸಿದ್ದೇನೆ. ನಾನು ಹೀಗೆ ಮಾಡುತ್ತಿದ್ದೇನೆ. ನಾನು ಹಾಗೆ ಮಾಡುತ್ತಿದ್ದೇನೆ" ಎಂದು ಕೊಳ್ಳುತ್ತಾನೆ. ಅನಿತ್ಯ ವಸ್ತುಗಳಲ್ಲಿ "ಇದು ನನ್ನದು. ಈ ವಸ್ತುವು ನಾನು. ಇದೇ ನನ್ನ ಆತ್ಮ" ಎಂಬ ಭಾವನೆಯುಂಟಾಗುತ್ತದೆ.* ವಾಸ್ತವವಾಗಿ ನೋಡಿದರೆ, ದೇಹದ ಸ್ಥೂಲಭಾಗಗಳಿಗೆ ಸಂಬಂಧ ಪಟ್ಟ ರೂಪಸ್ಕಂಧ, ಭಾವನೆಗಳಿಗೆ ಸಂಬಂಧಪಟ್ಟ ವೇದನಾಸ್ಕಂಧ, ಗ್ರಹಣಶಕ್ತಿಗೆ ಸಂಬಂಧಪಟ್ಟ ಸಂಜ್ಞಾಸ್ಕಂಧ, ನಾನಾ ಪ್ರವೃತ್ತಿ ಗಳಿಗೂ ಸಂಬಂಧಪಟ್ಟ ಸಂಸ್ಕಾರಸ್ಕಂಧ, ಆಲೋಚನಾ ಸಾಮ ರ್ಥ್ಯಕ್ಕೂ, ನಿರ್ಧಾರಕ ಶಕ್ತಿಗೂ ಸಂಬಂಧಪಟ್ಟ ವಿಜ್ಞಾನಸ್ಕಂಧ—

* ಮಜ್ಝಿಮ ನಿಕಾಯ (ಮಧ್ಯಮ ನಿಕಾಯ)ದಲ್ಲಿ ಮಹಾ ಪುಣ್ಣಮ ಸುತ್ತನ್ತವನ್ನು ನೋಡಿ.

ಎಂಬ ಐದು ಸ್ಕಂಧಗಳ ಸಂಘಾತವೇ "ನಾನು ನಾನು" ಎಂಬ ಭಾವನೆಗೆ ("ಅಹಮಹಮಿಕಾ ಪ್ರವಾಹ"ಕ್ಕೆ) ಕಾರಣ. ಈ ಐದು ಸ್ಕಂಧಗಳ ಸಂಘಾತಕ್ಕೆ "ಪುದ್ಗಲ" ಎಂದು ಹೆಸರು. ಇದೇ ಅನಾತ್ಮವಾದ ಅಥವಾ ನೈರಾತ್ಮ್ಯವಾದವೆಂಬುದು. ಈ ನೈರಾತ್ಮ್ಯವಾದವೇ ದೇವಲೋಕದ ಮತ್ತು ಬ್ರಹ್ಮಲೋಕ ಮುಂತಾದುವುಗಳಲ್ಲಿಯ ಜೀವನಕ್ಕೂ ಅನ್ವಯಿಸುತ್ತದೆಂದು ಬೌದ್ಧರ ಭಾವನೆ. ಸುಖದುಃಖಗಳನ್ನನುಭವಿಸುತ್ತ ಕರ್ಮಾಚರಣೆಯಿಂದ ಭವಬಂಧನವನ್ನು ಕಲ್ಪಿಸಿಕೊಳ್ಳುವಂಥ, 'ನಾನು' ಎಂಬ ಶಾಶ್ವತ ವಸ್ತುವೇ ಇಲ್ಲವೆಂಬುದು ಸಾಕ್ಷಾತ್ಕಾರವಾದ ಬಳಿಕ ಫಲಭೋಕ್ತೃತ್ವದ ಪ್ರಸಂಗವೇ ಇರುವುದಿಲ್ಲ. ಸಮಸ್ತವೂ ಅನಿತ್ಯವೆಂಬ ನಿಶ್ಚಲಜ್ಞಾನವುಂಟಾಗಿ—ಜೀವನದ ನಿಜಸ್ವಭಾವವೇನೆಂಬುದು ವ್ಯಕ್ತವಾಗಿ—ಅವಿದ್ಯೆಯ ಪರೆಯು ಹಾರಿಹೋಗಿ—ಪ್ರಜ್ಞಾಲಾಭವುಂಟಾಗುತ್ತದೆ. ಆಗ್ಗೆ ಜೀವನವು ದುಃಖಮಯವೆಂಬುದು ಹೃದಯಂಗಮವಾಗಿ (ಇಹಲೋಕದ ಅಥವಾ ಇತರ ಲೋಕಗಳ) ಜೀವನದ ಮೇಲಣ ಆಸಕ್ತಿಯು ಮಾಯವಾಗುತ್ತದೆ. ಅದರೊಡನೆ ತೃಷ್ಣೆಯು ನಿವೃತ್ತಿಯಾಗಿ ಕರ್ಮಬಂಧನಕ್ಕೆ ಅವಕಾಶವೇ ತಪ್ಪಿಹೋಗಿ ನಿರ್ವಾಣದ ಶಾಂತಿಯು ದೊರೆಯುತ್ತವೆ. ಇದೀಗ ಅನಾತ್ಮವಾದದ ಮುಖ್ಯಾಶಯ. ಬೌದ್ಧಮತದಲ್ಲಿ ಅನಾತ್ಮವಾದಕ್ಕೆ ಬಹಳ ಪ್ರಾಧಾನ್ಯವುಂಟು. ಆದುದರಿಂದಲೇ ಬುದ್ಧನು "ಅನಾತ್ಮವಾದಕ್ಕೆ ವ್ಯತಿರಿಕ್ತವಾದ ಭಾವನೆಯನ್ನಿಟ್ಟುಕೊಳ್ಳುವುದು ಸರ್ವಥಾ ಬಾಲಭಾವವೇ ಸರಿ"† ಎಂದು ಹೇಳಿದ್ದಾನೆ. "ಸರ್ವವೂ ಅನಿತ್ಯ; ಸರ್ವವೂ ಅನಾತ್ಮ, ನಿರ್ವಾಣವೇ ಶಾಂತಿ" ಎಂಬಿವು ಬೌದ್ಧಮತದ ಮೂಲಾಧಾರದಂತಿರುವ ಮೂರು ತತ್ತ್ವಗಳು.‡

---

† "...........ಕೇವಲೋ ಪರಿಪೂರೋ ಬಾಲಧಮ್ಮೋ."

‡ "ಸರ್ವಮನಿತ್ಯಂ, ಸರ್ವಮನಾತ್ಮಂ, ನಿರ್ವಾಣಂ ಶಾಂತಮ್."

ಜೀವನವು ನಾನಾ (ದೇಹೇಂದ್ರಿಯ) ವ್ಯಾಪಾರಗಳ ಸಂತಾನವೆಂದನಲೇಲಿ, ಪುದ್ಗಲನು ('ನಾನು ನಾನು' ಎಂಬ ತೋರಿಕೆಗೆ ವಿಷಯವಾದ ವಸ್ತುವು) ಶಾಶ್ವತವಾಗಿಲ್ಲದೆ ಬೇರೆಬೇರೆಯಾಗುತ್ತಿರಬೇಕಾಗುವುದು. ಅಲ್ಲಿಗೆ ಒಮ್ಮೆ ಮಾಡಿದ ಕರ್ಮದ ಫಲವನ್ನು ಆ ತರುವಾಯ ಹುಟ್ಟುವ ಪುದ್ಗಲನೇಕೆ ಅನುಭವಿಸಬೇಕೆಂಬ ಪ್ರಶ್ನೆಯು ಹುಟ್ಟುವುದು. ಭವಭವಕ್ಕೂ ಮತ್ತು ಜನ್ಮಜನ್ಮಕ್ಕೂ—ಪುದ್ಗಲ ಪುದ್ಗಲನಿಗೂ—ಸಂಬಂಧವಿದ್ದೇ ಇರುವುದರಿಂದ ಮುಂದಿನ ಪುದ್ಗಲನಿಗೆ ಕರ್ಮ ಫಲಾನುಭವವು ತಪ್ಪದು. ಯುವಕನಾಗಿದ್ದಾಗಿನ ಸ್ಥಿತಿಯೂ ಮುದುಕನಾಗಿದ್ದಾಗಿನ ಸ್ಥಿತಿಯೂ ಬೇರೆಬೇರೆ ಎಂದು ತೋರಿದರೂ ಯೌವನಕಾಲದಲ್ಲಿ ಸಂಪಾದಿಸಿದ ಸಂಪತ್ತಿನಿಂದ ಮುಪ್ಪಿನಲ್ಲಿ ಸುಖಾನುಭವವು ಲಭಿಸುವಂತೆ, ಈ ಕರ್ಮ ಫಲಾನುಭವವೂ ಏರ್ಪಡುವುದು.

ಕರ್ಮವನ್ನಾಚರಿಸುವ ಮತ್ತು ದೇಹಾದಿಗಳಿಗೆ ಸಂಬಂಧವಿಲ್ಲದ ಶಾಶ್ವತವಾದ ಆತ್ಮನೆಂಬ ವಸ್ತುವು ಇಲ್ಲವೆಂದೂ, ದೇಹವಾಗಲಿ ಮನಸ್ಸು ಮುಂತಾದುವುಗಳಾಗಲಿ ಆತ್ಮವಲ್ಲವೆಂದೂ, ಅನಾತ್ಮವಾದದಲ್ಲಿ ಬುದ್ಧನು ಹೇಳಿದ್ದಾನೆಯೇ ಹೊರತು, ಶಾಶ್ವತವ ವಸ್ತುವಾವುದೂ ಇಲ್ಲವೇ ಇಲ್ಲವೆಂಬುದು ಬುದ್ಧನ ಅಭಿಪ್ರಾಯವಲ್ಲ.* ದೇಹಾದಿ ವ್ಯಾಪಾರಗಳು ನಾರ್ಪಡುತ್ತಿರುವಲ್ಲಿ ಅವುಗಳನ್ನವಲಂಬಿಸಿಕೊಂಡು ತಾನು ಮಾತ್ರ ಮಾರ್ಪಡದ ಶಾಶ್ವತವಾದ ಕರ್ತನಂತಿರುವ ಆತ್ಮನೆಂಬುದು ಇಲ್ಲವೆಂಬುದು ಮಾತ್ರವೇ ಬುದ್ಧನ ಅಭಿಪ್ರಾಯ.

---

* "Buddha clearly tells us what the self is not, though he does not give any clear account of what it is. It is, however, wrong to think that there is no self at all according to Buddha."

Page 386, *Indian Philosophy*.
By Sir S. Radhakrishnan

ಸಂತಾನ ರೂಪದಲ್ಲಿ ನಡೆಯುವ ವ್ಯಾಪಾರಗಳಿಂದಮೇಲೆ ಅವು ಸಂತಾನ ರೂಪದಲ್ಲಿ ನಡೆಯುವುದನ್ನು ಗಮನಿಸುವ ಒಂದು ಶಾಶ್ವತ ವಸ್ತುವಿರಬೇಕಾಯಿತಲ್ಲವೆ? ಸಂತಾನರೂಪವೇ ತಾನು ಸಂತಾನ ವೆಂಬುದನ್ನು ಕಂಡುಕೊಳ್ಳಲಾರದು. "ಇದೆಲ್ಲ ಕೇವಲ ಸಂತಾನ ಪರಂಪರೆ. ಇದು ಆತ್ಮನಲ್ಲ" ಎಂಬುದನ್ನು ನಿರ್ಧರಿಸುವ ವಸ್ತು ವೊಂದಿರಬೇಕಲ್ಲವೆ? ಸ್ಕಂಧಗಳನ್ನು ವಹಿಸಿರುವ ವಸ್ತುವು ಪುದ್ಗಲ ವೆಂದೂ ಬುದ್ಧನು ಹೇಳಿರುವುದರಿಂದ, ಪುದ್ಗಲನು ಬೇರೆಯೇ ಆಗ ಬೇಕಾಯಿತು.* ಹುಟ್ಟು ಸಾವುಗಳಿಂದಲೂ, ದುಃಖದಿಂದಲೂ ತುಂಬಿದ ಈ ಪ್ರಾಪಂಚಿಕ ವ್ಯವಹಾರಗಳು ಭವಸಂತಾನ ಪರಂಪರೆ ಗಳಿಂದ ತುಂಬಿವೆಯೆಂಬುದೂ ಅವುಗಳಲ್ಲಿ ಆತ್ಮನಿಲ್ಲವೆಂಬುದೂ ಬುದ್ಧನ ಆಶಯುಗಳೆಂದು ತೋರುವುದು. ಉಪನಿಷತ್ತುಗಳಲ್ಲಿ ಹೇಳಿರುವ ಬಗೆಯ ಆತ್ಮನು ಉಂಟೆಂದೂ ಬುದ್ಧನು ಹೇಳಿಲ್ಲ; ಇಲ್ಲವೆಂದೂ ಬುದ್ಧನು ಹೇಳಿಲ್ಲ; ಅವನು ಆ ವಿಚಾರದಲ್ಲಿ ಮೌನ ವನ್ನವಲಂಬಿಸಿದ್ದಾನೆ.§

---

* "From this we should not conclude that he denied reality. He did admit it, but only gave a dynamic explanation of it."

—Page 142, *outlines of Indian Philosophy* By Prof. M. Hiriyanna M.A.

"........that the words : 'body is not the self : mind is not the self' cannot rationally be said to imply that there is no self (or soul, or real 'man' )

—Page 46, *outlines of Buddhism* By Mrs. Rhys Davids, D.Litt ; M.A.

§ "........Buddha is silent about the Atman enunciated in the upanishads. He neither affirms nor denies its existence."—Page 387. *Indian Philosophy* By Sir S. Radhakrishnan.

Earth's sweetest joy is but disguised Sorrow — Drummond.



ಐದು ಸ್ಕಂಧಗಳೂ ಸೇರಿದ ಸಂಘಾತದಲ್ಲಿಯ ಚೇತನದ (ಎಂದರೆ ಶಕ್ತಿ ವಿಶೇಷದ) ಸಹಾಯದಿಂದ ಅವು ಉಂಟುಮಾಡುವ ನಾನಾ ವ್ಯಾಪಾರ ಸಂತಾನ ಪರಂಪರೆಗಳೇ ಒಟ್ಟಿನಲ್ಲಿ ಜಗತ್ತಿನ ಭ್ರಾಂತಿಯನ್ನೂ, ಜೀವನದ ಭ್ರಾಂತಿಯನ್ನೂ, "ನಾನು, ನಾನು" ಎಂಬ ಭಾವನೆಯನ್ನೂ ಉಂಟುಮಾಡುತ್ತವೆ. ಮರಣ ಕಾಲದಲ್ಲಿ ಐದು ಸ್ಕಂಧಗಳ ವ್ಯಾಪಾರಗಳೂ ನಿಂತುಹೋಗಿದ್ದು, ತೃಷ್ಣೆಯ ಮತ್ತು ಕರ್ಮವಿಪಾಕದ ಪ್ರಭಾವ ದಿಂದ ಅವು ಮತ್ತೆ ಆವಿರ್ಭವಿಸುತ್ತವೆ. ಮುಂದಿನ ಜನ್ಮವು ಆಗ್ಗೆ ಪ್ರಾರಂಭವಾಗುತ್ತದೆ; ಅದರಲ್ಲಿಯ ವ್ಯಕ್ತಿಯು ಹಿಂದಿದ್ದುದೂ ಅಲ್ಲ; ಹೊಸದೂ ಅಲ್ಲ;* ದಾರಿಗನು ತಾನು ಹಿಡಿದುಕೊಂಡು ಹೋಗು ತ್ತಿದ್ದ ಪಂಜಿನ ಉರಿಯನ್ನು ಆರಿಸಿದ್ದು ಮತ್ತೆ ಹೊತ್ತಿಸಿದಾಗಿನ ಉರಿಯಂತಿರುತ್ತದೆ, ಅದರ ಪರಿಸ್ಥಿತಿ. ಒಬ್ಬ ಮನುಷ್ಯನು ತಾನು ಇಪ್ಪತ್ತು ವರುಷಗಳು ಹಿಂದಿದ್ದುದಕ್ಕಿಂತ ಬೇರೆಯಾಗಿದ್ದರೂ ಒಬ್ಬನೇ ಎಂದು ಭಾವಿಸಿಕೊಳ್ಳುವಂತೆಯೇ ಒಂದು ಜನ್ಮದ ಮನುಷ್ಯನಿಗೂ ಅದರ ಮುಂದಿನ ಜನ್ಮದ ಮನುಷ್ಯನಿಗೂ ಸಂಬಂಧವುಂಟು. ಅವನು ಹಿಂದಿನ ಜನ್ಮದ ವ್ಯಕ್ತಿ ಎನ್ನುವಂತೆಯೂ ಇಲ್ಲ; ತೀರ ಪ್ರತ್ಯೇಕ ವ್ಯಕ್ತಿ ಎನ್ನುವಂತೆಯೂ ಇಲ್ಲ. ಚೇತನವು ಕೆಲವು ನಿಯಮಗಳಿ ಗೊಳಪಟ್ಟು ಬಗೆಬಗೆಯ ವ್ಯಾಪಾರಗಳ ನೂತನ ಸಂತಾನಗಳನ್ನು ಸಿದ್ಧಪಡಿಸಿಕೊಡುತ್ತದೆ. ಬೇರೆಬೇರೆ ವಸ್ತುಗಳೇ ಉರಿದು ಪ್ರತಿ ಕ್ಷಣವೂ ಬೇರೆಬೇರೆ ಉರಿಗಳಿಂದ ಕೂಡಿದ ಕಾಡುಕಿಚ್ಚು ಏಕತ್ವ ಭ್ರಾಂತಿಯನ್ನುಂಟುಮಾಡಿ ಧಗಧಗಿಸುವಂತೆ, ಆ ಸಂತಾನಗಳ ಪ್ರಭಾವದಿಂದ ಜೀವನವೂ ಅಖಂಡವಾಗಿ ಏಕಪ್ರಕಾರವಾಗಿರುವ ತೋರಿಕೆಯಿಂದ ಕೂಡಿ ಮುಂದುವರಿಯುತ್ತದೆ.

**ಕರ್ಮಬಂಧ ಮತ್ತು ಜನ್ಮಪ್ರಾಪ್ತಿ**

---

* "ನ ಚ ಸೋ ನ ಚ ಅಣ್ಣೋ" (ಅದೇ ಅಲ್ಲ; ಅಥವಾ ಅನ್ಯವೂ ಅಲ್ಲ.)

ನಾವು ಮೊದಲೇ ನಿರೂಪಿಸಿರುವ ಅಂಶಗಳಿಗನುಸಾರವಾಗಿ ಯೋಚಿಸಿ ನೋಡಿದಲ್ಲಿ ಈ ಜನ್ಮಗಳ ಬವಣೆಯು ಅನಾದಿಯಾಗಿ ಅನುಸರಿಸಿಬಂದಿವೆ. ಜಗತ್ತಿನ ಮತ್ತು ಜೀವನದ ನಿಜಸ್ವಭಾವವನ್ನರಿತು ದುಃಖ ನಿರೋಧದಿಂದ ಪ್ರಜ್ಞಾಲಾಭ ಮಾಡಿಕೊಳ್ಳುವವರೆಗೂ ಮುಂದೆ ಜನ್ಮಗಳ ಕೋಟಲೆಯು ತಪ್ಪುವಂತಿಲ್ಲ. ದುಃಖ ನಿರೋಧಕ್ಕೆ ಆರ್ಯಾಷ್ಟಾಂಗಿಕ ಮಾರ್ಗವೇ ಅವಲಂಬನವೆಂಬುದು ಬುದ್ಧನ ಉಪದೇಶ. ಇವರಲ್ಲಿ ಅಂಗಭೂತ ವಾಗಿರುವ ಎಂಟು ಸಾಧನೆಗಳ ಆಶಯವನ್ನೂ ಇಲ್ಲಿ ಅತಿ ಸಂಕ್ಷೇಪ ವಾಗಿ ಸೂಚಿಸಬಹುದಾಗಿದೆ:—

ಆರ್ಯಾಷ್ಟಾಂಗಿಕ ಮಾರ್ಗ

(೧) **ಸಮ್ಯಕ್ದೃಷ್ಟಿ**:—ಸಾರಾಸಾರ ವಿಚಾರಗಳನ್ನು ಸ್ವಾನುಭವದಿಂದ ಮಥನಮಾಡಿ ಆರ್ಯಸತ್ಯಗಳನ್ನೂ, ಅನಾತ್ಮವಾದ ಮುಂತಾದ ತತ್ತ್ವಗಳನ್ನೂ ಸರಿಯಾಗಿ ಮನದಟ್ಟು ಮಾಡಿಕೊಳ್ಳುವ ಮನೋವೃತ್ತಿಯನ್ನುಂಟು ಮಾಡಿಕೊಳ್ಳ ಬೇಕೆಂಬುದು ಇದರ ಆಶಯ. ಕೇವಲ ವ್ಯಕ್ತಿ ಗೌರವದ ಅಥವಾ ಗ್ರಂಥ ಗೌರವದ ದಾಕ್ಷಿಣ್ಯದಿಂದಲಾಗಲಿ ಅಥವಾ ಆಪ್ತವಾಕ್ಯ ಪ್ರಮಾಣದ ಅಂಧಶ್ರದ್ಧೆ ಯಿಂದಲಾಗಲಿ ಯಾವುದನ್ನೂ ನಂಬದಿರುವ ಮನೋಧರ್ಮವನ್ನು ಬಲಪಡಿಸಿ ಕೊಳ್ಳಬೇಕೆಂಬುದೂ ಬುದ್ಧನ ಸೂಚನೆ. ಅಲ್ಲದೆ ಅಪಕಾರಿಗಳಿಗೆ ಕೂಡ ಉಪಕಾರ ಮಾಡುವ ಮನೋಧರ್ಮವನ್ನು ಪರಿಪುಷ್ಟಿಗೊಳಿಸಿಕೊಳ್ಳಬೇಕೆಂಬುದೂ ಬುದ್ಧನ ಅಭಿಪ್ರಾಯ.

(೨) **ಸಮ್ಯಕ್ಸಂಕಲ್ಪ**:—ಸುಖಲೋಲುಪತೆಯನ್ನೂ ರಾಗದ್ವೇಷಾದಿ ಗಳನ್ನೂ ತೊರೆದು, ಲೋಕ ಕುಶಲವನ್ನು ಬಯಸುತ್ತ, ಪ್ರಜ್ಞಾಲಾಭವನ್ನು ಪಡೆಯುವುದಾಗಿ ಸ್ಥಿರನಿಶ್ಚಯ ಮಾಡಿಕೊಳ್ಳುವ ಗುಣವನ್ನು ಇದು ಸೂಚಿಸು ತ್ತದೆ. ಬುದ್ಧನು ಸತಿಪಟ್ಠಾನ ಸುತ್ತದಲ್ಲಿ ಹೇಳಿರುವಂತೆ "ನಿಷ್ಕರ್ಮತಾ ಸಂಕ ಲ್ಪವೂ, ಅದ್ರೋಹ ಸಂಕಲ್ಪವೂ, ಅಹಿಂಸಾ ಸಂಕಲ್ಪವೂ" ಸಮ್ಯಕ್ಸಂಕಲ್ಪವೆನಿಸು

ವುವು. ಸದ್ಭಾವನೆಗಳೇ ತತ್ತ್ವಸಾಕ್ಷಾತ್ಕಾರಕ್ಕೆ ಮೂಲಾಧಾರವೆಂಬುವು ಸಮ್ಯಕ್ಸಂಕಲ್ಪದ ಆಶಯು.

(೩) **ಸಮ್ಯಕ್ವಚನ**:—ಸುಳ್ಳು ಹೇಳಕೂಡದೆಂಬುದೂ, ಪರದೂಷಣೆಯ ಪಿಸುಣತನದ ಮಾತುಗಳನ್ನಾಡಕೂಡದೆಂಬುದೂ, ಯಾರಲ್ಲಿಯೂ ಬಿರುನುಡಿಗಳನ್ನಾಡಕೂಡದೆಂಬುವೂ ಇದರ ಆಶಯ. ಸತ್ಯಭಾಷಿಯೂ, ಮೃದುಭಾಷಿಯೂ ಆಗಿರಬೇಕೆಂಬುವು ಇದರ ನಿಯಮ.

(೪) **ಸಮ್ಯಕ್ಕರ್ಮ**:—ಪ್ರಾಣಹಿಂಸೆ ಮಾಡದೆ, ಕಳ್ಳತನ ಮಾಡದೆ, ನೀತಿಗೆಟ್ಟು ನಡೆಯದೆ, ಧರ್ಮಸಮ್ಮತವಾದ ವಿಹಿತ ಕಾರ್ಯಗಳನ್ನು ಮಾಡುವ ಗುಣವನ್ನು ವೃದ್ಧಿಪಡಿಸಿಕೊಳ್ಳಬೇಕೆಂಬುವು ಈ ಸಾಧನೆಯ ಆಶಯ. ಪ್ರಾಣಿದಯೆಯು ಇದರ ಕೀಲು; "ಮಿಥ್ಯಾಚಾರ"ವನ್ನು ಬಿಡಬೇಕೆಂಬುದು ಇದರ ತತ್ತ್ವ.

(೫) **ಸಮ್ಯಕ್ಜೀವಿಕಾ**:—ಹೀನವೃತ್ತಿಗಳನ್ನು ಕೈಕೊಳ್ಳದೆ ಉತ್ತಮ ವಿಧದಲ್ಲಿ ಜೀವನ ಮಾಡಬಹುದಾದ ವೃತ್ತಿಗಳನ್ನು ಮಾತ್ರವೇ ಅವಲಂಬಿಸಬೇಕೆಂಬುವು ಇದರ ಆಶಯ. ಪರಹಿಂಸೆಯ ಜೀವನ ವೃತ್ತಿಯನ್ನು ಬುದ್ಧನು ನಿಷೇಧಿಸಿರುವನು. ವಿಷ ವಿಕ್ರಯ ಮಾಡುವುದು, ಮಾಂಸವನ್ನು ಮಾರುವುದು, ಕಟುಕನಾಗಿ ಪ್ರಾಣಿವಧೆ ಮಾಡುವುದು ಮುಂತಾದ ವೃತ್ತಿಗಳನ್ನನುಸರಿಸಕೂಡದೆಂಬುದು ಈ ನಿಯಮದ ಆಶಯ. ಪರಹಿಂಸೆಯಿಂದ ಧನಿಕನಾದವನು ಪರಮ ಪಾಪಿಯೆಂಬುದು ಬುದ್ಧನ ಮತ.

(೬) **ಸಮ್ಯಕ್ವ್ಯಾಯಾಮ**:—ಧ್ಯಾನ ಮುಂತಾದವುಗಳ ಸಹಾಯದಿಂದ ಸಂತತವೂ ಸದ್ಭಾವನೆಗಳಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ ತೃಷ್ಣಾ ನಿರೋಧದ ಕಡೆಗೆ ಮನಸ್ಸು ಹೋಗುವಂತೆ ಮಾಡುವುದು ಇದರ ಉದ್ದೇಶ. ಪರಿಪೂರ್ಣತೆಯನ್ನು ಪಡೆಯುವ ನಿಶ್ಚಯ ಬುದ್ಧಿಯು ಇದರ ಲಕ್ಷಣ.

ಬೌದ್ಧ ಮತದಲ್ಲಿ ಧ್ಯಾನವು ಬಹು ಮುಖ್ಯವಾದುದು. ಧ್ಯಾನದಲ್ಲಿ ಸಾಧಕನ ಅಧಿಕಾರ ಸಾಮರ್ಥ್ಯಗಳಿಗನುಸಾರವಾಗಿ ವಿವಿಧ ವಿಹಾರಗಳೂ, ಆಯತನಗಳೂ ಉಂಟು. ಮೈತ್ರೀ, ಕರುಣಾ, ಮುದಿತಾ, ಉಪೇಕ್ಷಾ, ಎಂಬ ಗುಣಗಳನ್ನು ವೃದ್ಧಿಪಡಿಸಿಕೊಂಡು ಸಮಸ್ತ ಮಾನವರಲ್ಲಿಯೂ, ಸಮಸ್ತ ಪ್ರಾಣಿಗಳಲ್ಲಿಯೂ ಪ್ರೀತಿಕರುಣೆಗಳಿಂದ ವರ್ತಿಸುವುದು ಧ್ಯಾನದಲ್ಲಿ ಸಿದ್ಧಿ ಪಡೆದುವರ ಪರಿಣಾಮ ಫಲಗಳಲ್ಲೊಂದು. ಶತ್ರು ಮಿತ್ರ ಭೇದವೇ ಮನಸ್ಸಿನಲ್ಲಿಲ್ಲದೆ ಪ್ರಾಣಿಮಾತ್ರದಲ್ಲಿ ಪ್ರೀತಿಯುನ್ನಿಡುವುದು ಮೈತ್ರಿಯ ಧರ್ಮ. ಪ್ರಾಣಿಮಾತ್ರದಲ್ಲಿ ಅಹಿಂಸೆಗೆ ಅವಕಾಶ ಕೊಡದ ಮನೋಧರ್ಮವು ಕರುಣೆಯ ಲಕ್ಷಣ. ತನಗೆ ಅಹಿತವನ್ನಾಚರಿಸಿದವರಲ್ಲಿಯೂ ಪ್ರಸನ್ನಚಿತ್ತವನ್ನು ತೋರುವುದು ಮುದಿತಾ ಸಿದ್ಧಿಯನ್ನು ಪಡೆದುದರ ಕುರುಹು. ನಿಷ್ಪಕ್ಷಪಾತದಿಂದ ಕೂಡಿರುವುದೂ ಪ್ರತೀಕಾರ ಬುದ್ಧಿಯ ಲವಲೇಶವೂ ಇಲ್ಲದಿರುವುದೂ ಉಪೇಕ್ಷೆಯ ಧರ್ಮ. ಪ್ರಾಣಾಯಾಮ ಮಾಡಿ ಧ್ಯಾನಮಗ್ನತೆಯಿಂದ ಕೂಡಿ ಈ ಗುಣಗಳನ್ನು ವೃದ್ಧಿಪಡಿಸಿಕೊಳ್ಳಬೇಕೆಂದು ಬುದ್ಧನು ಬೋಧಿಸಿದ್ದಾನೆ.*

(೭) **ಸಮ್ಯಕ್ಸ್ಮೃತಿ**:—"ಸಮ್ಯಕ್ಸ್ಮೃತಿಯೆಂದರೆ ದೌರ್ಮನಸ್ಯವನ್ನೂ, ಚಿತ್ತಸಂತಾಪವನ್ನೂ ಪರಿತ್ಯಜಿಸುವುದು" ಎಂದು ಬುದ್ಧನು ಅಪ್ಪಣೆ ಕೊಡಿಸಿದ್ದಾನೆ. ಇದು ಯೋಗಸಾಧನೆಗಳಿಂದ (ಎಂದರೆ ಧ್ಯಾನಾದಿಗಳಿಂದ) ಪಡೆಯಬೇಕಾದುದು. ಈ ಸಾಧನೆಯಲ್ಲಿ ಹಿಂದಿನ ಜನ್ಮಗಳ ವೃತ್ತಾಂತಗಳನ್ನೆಲ್ಲ ಅರಿಯುವುದೂ ಇತರರು ಮಾಡಿದ ಅಪಕಾರಗಳನ್ನು ಮರೆತು ಉಪಕಾರಗಳನ್ನು ಮಾತ್ರ ನೆನಪಿನಲ್ಲಿಟ್ಟುಕೊಂಡಿರುವುದೂ ಸೇರಿವೆ. ಇವೆರಡರಲ್ಲಿ ಮೊದಲನೆಯದು ಉಚ್ಚತರಗತಿಯ ಸಾಧಕರಿಗೆ; ಎರಡನೆಯದು ಸಾಮಾನ್ಯರಿಗೆ ಸಹ.

---

* ಮಜ್ಝಿಮನಿಕಾಯದ ಮಹಾ ರಾಹುಲೋವಾದ ಸುತ್ತನ್ತವನ್ನು ನೋಡಿ. ಅಲ್ಲದೆ, ಯೋಗ ಸೂತ್ರಗಳಿಗೂ ಇದಕ್ಕೂ ಹೋಲಿಕೆಯೂ ಉಂಟು. ಯೋಗಸೂತ್ರಗಳ ವಿಭೂತಿ ಪಾದದ ೨೩ನೆಯ ಸೂತ್ರವಾದ "ಮೈತ್ರ್ಯಾದಿಷು ಬಲಾನಿ" ಎಂಬ ಸೂತ್ರವನ್ನೂ ಅದರ ವ್ಯಾಖ್ಯಾನವನ್ನೂ ನೋಡಿ.

(೮) **ಸಮ್ಯಕ್ಸಮಾಧಿ**:—ಇದು, ಅಷ್ಟಾಂಗ ಮಾರ್ಗದಲ್ಲಿ ಅಂತಿಮ ಸಿದ್ಧಿಯಾದ ಅರ್ಹತ ದಶೆಯ ಸಾಕ್ಷಾತ್ಕಾರ; ಆನಂದಲಹರಿಯ ಸಿರಿಬೀಡು. ಇದು ಅನುಭವೈಕವೇದ್ಯವೇ ಹೊರತು ವರ್ಣನೆಗೆ ವಿಷಯವಾಗತಕ್ಕುದಲ್ಲವೆಂದು ಬುದ್ಧನು ಹೇಳಿದ್ದಾನೆ. ಇದರಲ್ಲಿ ಪ್ರಥಮಧ್ಯಾನ, ದ್ವಿತೀಯಧ್ಯಾನ, ತೃತೀಯ ಧ್ಯಾನ, ಚತುರ್ಥಧ್ಯಾನ, ಎಂಬ ನಾಲ್ಕು ಅಂತಸ್ತುಗಳುಂಟೆಂದು ಸೂಚಿಸಿ ಬುದ್ಧನು ಅವುಗಳ ಲಕ್ಷಣಗಳನ್ನು ವಿವರಿಸಿದ್ದಾನೆ.

**ಹಿಂದಿನ ಜನ್ಮಗಳ ಪರಿಜ್ಞಾನ**

ಸಾಮಾನ್ಯರು ನಿದ್ರೆಯಿಂದೆಚ್ಚೆತ್ತಮೇಲೆ ಸ್ವಪ್ನಗಳ ವಿಚಾರವನ್ನು ಹೇಳುವಂತೆ ಆರ್ಯಾಷ್ಟಾಂಗಿಕ ಮಾರ್ಗದಲ್ಲಿ ಪೂರ್ಣಸಿದ್ಧಿಯನ್ನು ಪಡೆದವರು ತಮ್ಮ ಹಿಂದಿನ ಭವಗಳ ವೃತ್ತಾಂತಗಳನ್ನೆಲ್ಲ ಹೇಳಲು ಸಮರ್ಥರಾಗುತ್ತಾರೆ.*

---

*ಇದನ್ನು ಕೇಳಿ ಯಾರೂ ಅಪನಂಬಿಕೆಪಡಬೇಕಾದುದಿಲ್ಲ. ಯಾವ ಸಾಧನೆಯೂ ಇಲ್ಲದೆಯೇ ಪೂರ್ವಜನ್ಮಸಂಬಂಧವಾದ ವ್ಯಾಪಾರಗಳು ವಿಸ್ಮಯಜನಕವಾದ ರೀತಿಯಲ್ಲಿ ಈಗಿನ ಕಾಲದಲ್ಲಿಯೂ ತಲೆದೋರಿದ ನಿದರ್ಶನಗಳಿರುವಲ್ಲಿ, ಸಾಧನೆಯಿಂದ ಪೂರ್ವಜನ್ಮಸ್ಮರಣೆಯು ಸಾಧ್ಯವಿಲ್ಲವೆನ್ನುವ ಬಗೆ ಹೇಗೆ? ಇಷ್ಟರ ಮೇಲೂ ಅನುಮಾನಪಡುವವರು ಮುಂದಿನ ವಾಕ್ಯಗಳನ್ನು ಪರಿಶೀಲಿಸಬೇಕೆಂದು ಬಿನ್ನಹ:—

"Sir Arthur Conan Doyle instances how the young daughter of an eminent barrister, known to him, began to write Greek fluently with all the complex accents in their correct places. He also refers to a letter received from a famous physician asking his (Sir Arthur's) opinion about one of his children who had written a considerable amount of script in Mediaeval French. Many scores of similar instances could be given supported by eqally unimpeachable evidence. But nothing of all this is inexplicable or mysterious

**ನಾಲ್ಕು ದಶೆಗಳು**

ಆರ್ಯಾಷ್ಟಾಂಗಿಕ ಮಾರ್ಗವು ನಾಲ್ಕು ದಶೆಗಳಲ್ಲಿ ಸಿದ್ಧಿಯಾಗಿ, ಅಜ್ಞಾನದ ಆವರಣಗಳಂತಿರುವ ಹತ್ತು ತೊಡರುಗಳೂ (ದಶಬಂಧನಗಳೂ) ಆಗ್ಗೆ ನಾಶವಾಗಿ ಕೊನೆಗೆ ನಿರ್ವಾಣ ಲಾಭವಾಗುತ್ತದೆ. ಸ್ರೋತಾಪನ್ನ, ಸಕೃದಾಗಾಮಿ, ಅನಾಗಾಮಿ, ಅರ್ಹತ—ಇವೇ ಆ ನಾಲ್ಕು ದಶೆಗಳು.* ಅರ್ಹತನಾಗುವುದೇ ಪೂರ್ಣಸಿದ್ಧಿ ; ಅರ್ಹತನಿಗೆ ನಿರ್ವಾಣದ ಶಾಂತಿಯು ಸಹಜವಾಗಿಯೇ ದೊರೆಯುತ್ತದೆ.

**ಅರ್ಹತ್ವದ ವಿಧಿಯು ಬಲಹೀನನಿಗಲ್ಲ**

ಆರ್ಯಾಷ್ಟಾಂಗಿಕ ಮಾರ್ಗವು ಭೋಗಮಗ್ನತೆಗೂ ತಪಸ್ವಿವೇಷಧಾರಿಗಳ ಕಾಯಕ್ಲೇಶಗಳಿಗೂ ನಡುವೆಯಿದ್ದ ಮಧ್ಯಮಮಾರ್ಗವೆಂದು ಬುದ್ಧನು ಹೇಳಿದುದು ನಿಜ. ಆದರೂ ಅದನ್ನನುಸರಿಸಿ ಸಿದ್ಧಿಯನ್ನು ಕಾಣುವ ಸಾಧನೆಯು ಮಾತಿನಲ್ಲಿ ಆಡಿ ಮುಗಿಸುವಂತಹುದಲ್ಲ. ಸಮ್ಯಕ್ಸಮಾಧಿಗೂ, ಧ್ಯಾನದ ನಾನಾ ಆಯತನಗಳಿಗೂ ಮುಟ್ಟುವುದೆಂದರೆ ಬಲಹೀನರಿಂದ ಸಾಧ್ಯವಲ್ಲದ ಉಗ್ರಸಾಧನೆಯೇ ಸರಿ. ಬುದ್ಧನೇ ತಿಳಿಸಿರುವಂತೆ ಆತನ ದೇಹದ ಬಾಧೆಗಳನ್ನು ಕೂಡ ಮರೆಯಿಸಿ ಶಾಂತಿಯನ್ನೀಯುತ್ತಿದ್ದುದು, ಆ ಸಮಾಧಿಮಗ್ನತೆಯ ಧ್ಯಾನಾವಸ್ಥೆ. ಆರ್ಯಾಷ್ಟಾಂಗಿಕ

---

from the Buddhist point of view. It is curious how every possible and impossible theory and conjecture is put forward to account for these phenomena except the correct explanation of re-birth."

—Pages 105 & 106, *Navayana Buddhism and Modren Thought.*
by J. E. ELLAM.

* ಇವಕ್ಕೆ ಸಂಬಂಧಪಟ್ಟ ವಿವರಗಳು ಬಹು ತೊಡಕಾಗಿವೆ. ಆದಕಾರಣ ಇಲ್ಲಿ ಕೊಟ್ಟಿಲ್ಲ.

ಮಾರ್ಗವನ್ನನುಸರಿಸಿದ ಭಿಕ್ಷುಗಳ ವರ್ತನೆಯು ಹೇಗಿರಬೇಕೆಂಬು ದನ್ನು ಕುರಿತು ಬುದ್ಧನು, "ಭಿಕ್ಷುಗಳೇ! ಘಾತುಕರೂ, ಧೂರ್ತರೂ ಬಂದು ಗರಗಸದಿಂದ ನಿಮ್ಮ ದೇಹದ ಅಂಗಾಂಗಗಳನ್ನು ಕೊಯ್ದು ಹಾಕಿದರೂ ನೀವು ಕೋಪಿಸಿಕೊಳ್ಳಕೂಡದು. ಭೂಮಿಯಂತೆ ನೀವು ಕ್ಷಮಾವಂತರಾಗಿರಬೇಕು. ನನ್ನ ಬೋಧೆಯನ್ನು ಅಂಗೀಕರಿಸಿ ದುದಕ್ಕೆ ಆಗ್ಗೆ ಸಾರ್ಥಕ" ಎಂದು ಹೇಳಿರುವನು. ಬುದ್ಧನು ಪೂರ್ಣನೆಂಬೊಬ್ಬ ಭಿಕ್ಷುವಿನ ಮನಃ ಪರಿವರ್ತನೆಯು ಹೇಗಿದ್ದಿ ತೆಂಬುದನ್ನು ಪರೀಕ್ಷಿಸುವುದಕ್ಕಾಗಿ, "ಜನರು ನಿನ್ನನ್ನು ಬೈದು ಹಿಂಸೆಮಾಡಿದರೆ ಆಗೇನೆಂದು ಭಾವಿಸುವೆ?" ಎಂದು ಕೇಳಿದನಂತೆ. ಪೂರ್ಣನು, "ಈ ಜನರು ನಿಜವಾಗಿಯೂ ಒಳ್ಳೆಯವರು. ಅವರು ನನ್ನನ್ನು ಬೈದರೇ ಹೊರತು ನನ್ನನ್ನು ಹೊಡೆದು ಕಳ್ಳಿಸಿಯಲಿಲ್ಲ ವಲ್ಲಾ—ಎಂದುಕೊಳ್ಳುವೆನು" ಎಂದು ಉತ್ತರ ಹೇಳಲು ಬುದ್ಧನು, "ಅವರು ನಿನ್ನನ್ನು ಹೊಡೆದು ಕಳ್ಳಿಸಿದರೆ—ಆಗ?" ಎಂದು ಪ್ರಶ್ನೆ ಮಾಡಿದನು. ಪೂರ್ಣನು, "ಅವರು ಕೋಲುಗಳಿಂದಲೂ ಕತ್ತಿ ಗಳಿಂದಲೂ ಹೊಡೆದು ಘಾಸಿಪಡಿಸಲಿಲ್ಲವಲ್ಲಾ! ಅವರೇ ಒಳ್ಳೆ ಯವರು—ಎಂದುಕೊಳ್ಳುವೆನು" ಎಂದನು. ಬುದ್ಧನು, ಅವರು ಕೋಲುಗಳಿಂದಲೂ ಕತ್ತಿಗಳಿಂದಲೂ ಹೊಡೆದು ಘಾಸಿಪಡಿಸಿದರೆ— ಆಗ?" ಎಂದು ಮತ್ತೆ ಪ್ರಶ್ನೆಮಾಡಿದನು. ಪೂರ್ಣನು, "ಅವರು ನನ್ನನ್ನು ಕೊಲ್ಲಲಿಲ್ಲ. ಅಷ್ಟು ಒಳ್ಳೆಯ ಗುಣವೇ ಸಾಕು—ಎಂದು ಕೊಂಡು ಮೈತ್ರಿಯಿಂದಿರುವೆನು" ಎಂದನು. ಕೊನೆಗೆ ಬುದ್ಧನು, "ಅವರಿಂದ ನಿನಗೆ ಸಾವೇ ಸನ್ನಿಹಿತವಾದರೆ—ಆಗ?" ಎಂದು ಕೇಳಿದನು. ಪೂರ್ಣನು, "ಜೀವನವೆಂಬ ತೊರೆಕೆಯ ಈ ದುಃಖ ದಿಂದ ಅವರು ನನ್ನನ್ನು ಪಾರುಮಾಡುವುದರಲ್ಲಿದ್ದಾರೆ. ಅದೂ ಒಳ್ಳೆ ಯದು—ಎಂದುಕೊಂಡು ಶಾಂತಿಯಿಂದ ಸಾವಿಗೆ ಸಿದ್ಧನಾಗುವೆನು" ಎಂದನು. ಬುದ್ಧನು ಆ ಮಾತುಗಳನ್ನು ಕೇಳಿ, "ಸಾಧು, ಪೂರ್ಣ, ಸಾಧು; ಸರಿಯಾಗಿ ಹೇಳಿದೆ. ಜನರಿಗೆ ನನ್ನ ಸಂದೇಶವನ್ನು ತಿಳಿಸಲು

ನೀನು ಅರ್ಹನಾಗಿರುವೆ. ನಿರ್ವಾಣಕ್ಕೆ ಅಧಿಕಾರಿಯಾಗಿರುವ ನೀನು ಜನರಿಗೆ ನಿರ್ವಾಣದ ವಿಚಾರವನ್ನು ಬೋಧಿಸಲು ಈಗ ಯೋಗ್ಯನು. ಹೋಗಿ ಬಾ, ಪೂರ್ಣ; ಹೋಗಿ ಬಾ, ಭಿಕ್ಷುವೆ" ಎಂದು ಹೇಳಿ ಪೂರ್ಣನನ್ನು ಆದರದಿಂದ ಬೀಳ್ಕೊಂಡನು. ಈ ಬಗೆಯ ಸಾಧನೆಯ ಉಚ್ಚಪಂತವನ್ನೇರುವುದು ಬಲಹೀನರಾದ ಸಾಮಾನ್ಯರಿಗೆ ಸಾಧ್ಯವೆ?

ಜೀವನವು ದುಃಖಮಯವೆಂಬುದೇ ಮೊದಲನೆಯ ಆರ್ಯ ಸತ್ಯವಾದರೆ, ಜನರು ವೀತಶೋಕರಾಗಿ ಅರ್ಹತಪದವಿಗೇರುವುದೇ ಆರ್ಯಾಷ್ಟಾಂಗಿಕ ಸಾಧನೆಯ ಪೂರ್ಣಸಿದ್ಧಿ.

**ನಿರ್ವಾಣ** ಅರ್ಹತರಿಗೆ ಲಭಿಸುವ ಶಾಂತಿಸಂತೋಷಗಳಿಗೇ ನಿರ್ವಾಣವೆಂದು ಹೆಸರು. ನಿರ್ವಾಣವೆಂಬ ಪದವು ಭಗವದ್ಗೀತೆಯಲ್ಲಿಯೂ ಪ್ರಯೋಗವಾಗಿದೆ. ಆದರೆ ಬೌದ್ಧ ಮತ ಸಿದ್ಧಾಂತದ ಪ್ರಕಾರ ನಿರ್ವಾಣದ ವಿಚಾರವನ್ನು ಚರ್ಚಿಸುವುದು ಮಾತ್ರವೇ ಇಲ್ಲಿ ನಮ್ಮ ಆಶಯವಾಗಿದೆ. "ನಿರ್ವಾಣ" ಎಂಬ ಪದಕ್ಕೆ ದೀಪವು ಆರಿಹೋಗುವುದು–ಎಂದೂ ಅರ್ಥ. ಆ ಅರ್ಥದಲ್ಲಿ ಪರಿಗಣಿಸಿದರೂ ನಿರ್ವಾಣವೆಂದರೆ ತೃಷ್ಣಾತೈಲವು ಮುಗಿದು ಕರ್ಮಬಂಧನವೆಂಬ ದೀಪವು ಆರಿಹೋಗುವುದೆಂದರ್ಥ. ಸಾಧನೆಯ ಬಲದಿಂದ ಭವಕಾರಣಗಳಾದ "ಉತ್ಪತ್ತಿ ಧರ್ಮ"ಗಳೆಲ್ಲ ದುಃಖನಿರೋಧಕವಾದ "ಅನುತ್ಪತ್ತಿ ಧರ್ಮ"ಗಳಾಗಿ ಪರಿಣಮಿಸುವುದಕ್ಕೆ ನಿರ್ವಾಣವೆಂದು ಹೆಸರು. ರಾಗದ್ವೇಷಾದಿಗಳ ದಾಂಧಲೆಯ ಸುಳಿಗೆ ಸಿಕ್ಕಿರುವ ("ಸಾಸ್ರವ") ವ್ಯಾಪಾರಗಳೆಲ್ಲ ನಾಶವಾಗಿ, ರಾಗದ್ವೇಷಾದಿಗಳ ಸೋಂಕೇ ಇಲ್ಲದೆ ಮೈತ್ರೀಮಯವೆನಿಸಿರುವ ("ಅನಾಸ್ರವ") ವ್ಯಾಪಾರಗಳಲ್ಲಿ ಓಲಾಡುತ್ತ ಪ್ರಸನ್ನತೆಯಿಂದಿರುವುದು ನಿರ್ವಾಣಕ್ಕೆ ಅಧಿಕಾರಿಯಾದ ಅರ್ಹತನ ಲಕ್ಷಣ. ನಿರ್ವಾಣವೆಂಬುದು ಭವದೂರವಾದ ಮತ್ತು ಶಾಂತಿಮಯವಾದ ಶಾಶ್ವತ ಸ್ಥಿತಿಯೇ ಹೊರತು ಅದೊಂದು ಆವಾಸಸ್ಥಾನವೇನೂ ಅಲ್ಲ. ನಿರ್ವಾಣವೆಂಬುದು ಸ್ವಯಂ

ಗೋಚರ. ಕಣ್ಣುಗಳ ವ್ಯಾಪಾರದಿಂದಲೇ ಕಣ್ಣುಗಳಿರುವುದು ಗೋಚರಕ್ಕೆ ಬರುವಂತೆ ನಿರ್ವಾಣದ ಅನಿರ್ವಚನೀಯವಾದ ಶಾಂತಿಯೇ ಅದನ್ನು ಗೋಚರ ಮಾಡಿಕೊಡುತ್ತದೆ.

ನಿರ್ವಾಣವು ಎರಡು ಬಗೆಯದೆಂದು ಸಿದ್ಧಾಂತವಾಗಿದೆ. ಅರ್ಹತ ಪದವಿಯನ್ನು ಪಡೆದ ಸಾಧಕನು ತನ್ನ ಜೀವಿತ ಕಾಲದಲ್ಲಿಯೇ ಅನುಭವಿಸುವ ನಿರ್ವಾಣಕ್ಕೆ ಉಪಾಧಿಶೇಷ ನಿರ್ವಾಣವೆಂದು ಹೆಸರು. ಆಗ್ಗೆ ರಾಗದ್ವೇಷಾದಿಗಳೂ ತೃಷ್ಣೆಯೂ ಅವನಿಗಿರುವುದಿಲ್ಲವಾದರೂ ಸ್ಕಂಧಗಳು ಮಾತ್ರ ಕೆಲಸ ಮಾಡುತ್ತಿರುತ್ತವೆ. ಅರ್ಹತನು ದೇಹವನ್ನು ಬಿಡುವ ಕಾಲದಲ್ಲಿ ಅವನ ಅನುಭವಕ್ಕೆ ಬಂದು ಆ ಬಳಿಕ ಶಾಶ್ವತವಾಗಿರುವ ನಿರ್ವಾಣಕ್ಕೆ ಅನುಪಾಧಿಶೇಷ ನಿರ್ವಾಣವೆಂದು ಹೆಸರು. ಪರಿನಿರ್ವಾಣವೆಂದು ಬೌದ್ಧರು ಕರೆಯುವುದೂ ಇದನ್ನೇ.

ನಿರ್ವಾಣವೆಂದರೆ ಶೂನ್ಯತೆಯ ಪರಿಸ್ಥಿತಿಯೆಂದು ಕೆಲವರಿಗೆ ತಪ್ಪು ಅಭಿಪ್ರಾಯವುಂಟು.* ನಿರ್ವಾಣವೆಂದರೆ ಶೂನ್ಯತೆಯೆಂದು ಯುವಕನೆಂಬವನು ಸೂಚಿಸಿದಾಗ ಸಾರಿಪುತ್ರನು ಆ ಅಭಿಪ್ರಾಯವು ತಪ್ಪೆಂದು ತಿಳಿಸಿ, ಅರ್ಹತನ ಸ್ಥಿತಿಯು ದುರವಗಾಹ್ಯವೆಂದೂ, ಅರ್ಹತನು ಸ್ಕಂಧಗಳ ಸಮುದಾಯವೂ ಅಲ್ಲವೆಂದೂ, ಒಂದು ಅಥವಾ ಹೆಚ್ಚು ಸ್ಕಂಧಗಳೂ ಅರ್ಹತನಲ್ಲವೆಂದೂ ಹೇಳಿದನಂತೆ. ಆದಕಾರಣ, ನಿರ್ವಾಣವು ಶೂನ್ಯತೆಯ ಸರ್ವನಾಶವಲ್ಲ. ನಿರ್ವಾಣವೆಂದರೆ ದುಃಖರಾಹಿತ್ಯವು ಮಾತ್ರವೇ ಎಂದೂ, ಆನಂದವಲ್ಲವೆಂದೂ ಕೆಲವರು ಅಭಿಪ್ರಾಯಪಡುವರು. ನಿರ್ವಾಣವು ಆನಂದಮಯವಾದುದೆಂದು ಅನೇಕ ಪಾಳಿಗ್ರಂಥಗಳಲ್ಲಿ ಹೇಳಿದೆ. ಬುದ್ಧನೇ

* ನಿರ್ವಾಣವೆಂದರೆ ಶೂನ್ಯತೆಯಿಂದ ಕೂಡಿದ ವಿನಾಶವಲ್ಲವೆಂಬುದಕ್ಕೆ "ಅತಸ್ತೇಷಾಂ ನಿರ್ವಾಣ ಬುದ್ಧಿರ್ಭವತಿ, ನ ಚ ಮಹಾಮತೇ ವಿನಾಶ ದೃಷ್ಟ್ಯಾ ನಿವಾರ್ಯತೇ" ಎಂಬ ವಚನವೂ ಪ್ರಮಾಣ.

ತಿಳಿಯ
ಬಾರ್ದ
ಬಾದ

"ಆರೋಗ್ಯವು ಪರಮಲಾಭ; ನಿರ್ವಾಣವು ಪರಮಸುಖ"* ಎಂದು ಹೇಳಿದಂತೆ ಮಜ್ಝಿಮನಿಕಾಯದಲ್ಲಿಯೂ "ಹಸಿವಿಗಿಂತ ಹೆಚ್ಚಿನ ಬಾಧೆಗಳಿಲ್ಲ; ದೇಹವಿರುವುದಕ್ಕಿಂತ ದುಃಖಗಳಿಲ್ಲ. ನಿರ್ವಾಣಕ್ಕಿಂತ ಹೆಚ್ಚಿನ ಸುಖವಿಲ್ಲ"† ಎಂದು ಹೇಳಿದಂತೆ ಧರ್ಮಪದಲ್ಲಿಯೂ ಬರೆದಿದೆ. "ಭವನಿರೋಧವೇ ನಿರ್ವಾಣ"‡ ಎಂದಬಳಿಕ ನಿರ್ವಾಣವು ಸುಖದಾಯಕವೆಂದು ಪ್ರತ್ಯೇಕವಾಗಿ ಹೇಳಬೇಕಾದುದೇ ಇಲ್ಲ. ನಿರ್ವಾಣವನ್ನು "ಅಚ್ಯುತ", "ಅಮೃತ", "ಅತ್ಯಂತ" "ಅನುತ್ತರ ಯೋಗಕ್ಷೇಮ" ಎಂದು ಮುಂತಾಗಿ ಕರೆದಿರುವ ಪರ್ಯಾಯ ಪದಗಳು ಬೌದ್ಧಗ್ರಂಥಗಳಲ್ಲಿವೆ. ನಿರ್ವಾಣವು ಆನಂದಮಯವೆಂಬುದನ್ನು ಅವು ಚೆನ್ನಾಗಿ ಸೂಚಿಸುತ್ತವೆ. ಎಲ್ಲಕ್ಕೂ ಮಿಗಿಲಾಗಿ ಬುದ್ಧನೇ ನಿರ್ವಾಣವು ಪರಮ ಸುಖವೆಂದು ಹೇಳಿರುವುದಲ್ಲದೆ ಅರ್ಹತನು ಅನುಭವಿಸುವ ನಿರ್ವಾಣವು ಅನನುವೇದ್ಯವೆಂದೂ§ ತಿಳಿಸಿದ್ದಾನೆ. ಅಲ್ಲದೆ ಬುದ್ಧನು "ನಾನು ಇದನ್ನು ಬೋಧಿಸಿ ವಿವರಿಸಿದರೆ ಕೆಲವರು ನಿಷ್ಕಾರಣವಾಗಿ ನನ್ನಮೇಲೆ ಅಸತ್ಯಾರೋಪಣೆಮಾಡಿ 'ಗೌತಮನು ನಾಶವನ್ನೂ, ಹಾಳಾಗುವುದನ್ನೂ ಉಪದೇಶಿಸುತ್ತಾನೆ' ಎನ್ನುತ್ತಿದ್ದಾರೆ. ಹೀಗೆ ಹೇಳುವುದರಲ್ಲಿ ನನ್ನಲ್ಲಿಲ್ಲದ ದೋಷವನ್ನು ಅವರು ಆರೋಪಿಸುತ್ತಿದ್ದಾರೆ. ನಾನು ಬೋಧಿಸದಿರುವುದನ್ನೇ ನಾನು ಬೋಧಿಸಿದಂತೆ ಪ್ರಮಾದ ವಶದಿಂದ ಆರೋಪಿಸಿ ತಪ್ಪುಹೊರಿಸುತ್ತಿದ್ದಾರೆ" ಎಂದು ಹೇಳಿದ್ದಾನೆ.

---

* ಮಜ್ಝಿಮ ನಿಕಾಯದಲ್ಲಿ ಮಾಗಂದಿಯ ಸುತ್ತನ್ತ ಮುಂತಾದವುಗಳನ್ನು ನೋಡಿ.

† "ಜಿಗಚ್ಛಾ ಪರಮಾ ರೋಗಾ ಸಙ್ಖಾರಪರಮಾ ದುಃಖಾ ।
ಏತಂ ಞಾತ್ವಾ ಯಥಾಭೂತ ನಿಬ್ಬಾಣಂ ಪರಮಂ ಸುಖಮ್ ॥"–
ಧರ್ಮಪದ ೨೦೩ನೆಯ ಶ್ಲೋಕ.

‡ "ಭವನಿರೋಧೋ ನಿಬ್ಬಾಣಂ"

§ "ಅನನುವೇಜ್ಜೋ"

ಆರ್ಯಾಷ್ಟಾಂಗಿಕ ಮಾರ್ಗದಲ್ಲಿ ಪೂರ್ಣ ಸಿದ್ಧಿಯನ್ನು ಪಡೆದ ಅರ್ಹತನೂ ಸಹ ಜನರ ಹಿತಕ್ಕಾಗಿ ಕೆಲಸಮಾಡುತ್ತಿರಬೇಕೆಂದೂ, ತಾನು ಕರ್ಮಬಂಧವನ್ನು ನೀಗಿದವನೆಂಬ ಕಾರಣದಿಂದ ಅಲಸನಾಗಿ ಕುಳಿತಿರಕೂಡದೆಂದೂ ಬುದ್ಧನು ಬೋಧಿಸಿದ್ದಾನೆ. ಬುದ್ಧನ ಈ ದಿವ್ಯೋಪದೇಶವನ್ನು ನೆನೆದಾಗ ಯಾರಿಗೆ ತಾನೆ ಭಗವದ್ಗೀತೆಯಲ್ಲಿರುವ "ಕರ್ಮಫಲವನ್ನಪೇಕ್ಷಿಸಿ ಕೆಲಸ ಮಾಡುವವನಾಗಲೂ ಬೇಡ. ಸತ್ಕಾರ್ಯಾಚರಣೆ ಮಾಡದೆ ಸುಮ್ಮನಿರುವ ಸಂಗತಿಯೂ ಬೇಡ" * ಎಂಬ ಶ್ರೀ ಕೃಷ್ಣನ ಅಮೃತ ವಾಣಿಗಳು ತಟಕ್ಕನೆ ಸ್ಮರಣೆಗೆ ಬರುವುದಿಲ್ಲ? ಬುದ್ಧನು ತಾನು ಅರ್ಹತನಾದಮೇಲೆ ಲೋಕ ಕುಶಲಕ್ಕಾಗಿ ನಾಲ್ವತ್ತು ವರುಷಗಳಕಾಲ ಶ್ರಮಿಸಿ ಅನುಗ್ರಹ ಮಾಡಿದುದನ್ನು ಮರೆಯಲಾಗಿಗೆ ಸಾಧ್ಯ?

**ಅರ್ಹತನೂ ಕೆಲಸಮಾಡಬೇಕು**

ಬುದ್ಧನು ಜೀವಾತ್ಮ ಪರಮಾತ್ಮರೇ ಇಲ್ಲನೆಂದು ಸಾರಿಹೇಳಿದ ನಾಸ್ತಿಕನೆಂದು ಹಲವರ ಮತ. ಈ ಬಗೆಯ ಅಭಿಪ್ರಾಯವು ನಿರಾಧಾರವಾದುದು. ಕರ್ಮಾಚರಣೆಯು ದೇಹಾದಿ ಪಂಚಸ್ಕಂಧಗಳಿಂದ ‡ ನಡೆಯುತ್ತಿದೆಯೆಂದು ತಿಳಿಸಿ, ದೇಹ, ಚಿತ್ತ ಮುಂತಾದವುಗಳಾವುವೂ ಆತ್ಮವಲ್ಲವೆಂದು ಅನಾತ್ಮವಾದವನ್ನು

**ಜೀವಾತ್ಮ ಪರಮಾತ್ಮರು; ಸೃಷ್ಟಿಯ ವಿಚಾರ**

---

* "ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ"
ಭಗವದ್ಗೀತೆ.

‡ ಈ ಸ್ಕಂಧಗಳ ಸಂಬಂಧವಾದ ನಿರೂಪಣೆಯನ್ನು ಉಪನಿಷತ್ತುಗಳಲ್ಲಿ ಹೇಳಿರುವ ನಾಮರೂಪಗಳ ಆಧಾರದ ಮೇಲೆ ಬುದ್ಧನು ಆಳವಡಿಸಿ ಪರಿಪುಷ್ಟಗೊಳಿಸಿದ್ದಾನೆ:—

ಬುದ್ಧನು ಬೋಧಿಸಿದನು.† ಈ ಅಂಶವನ್ನು ಹಿಂದೆಯೇ ತಿಳಿಸಿದ್ದೇವೆ. ಪಂಚಸ್ಕಂಧಗಳನ್ನುಳಿದು ಕರ್ಮಾಚರಣೆ ಮಾಡುತ್ತಿರುವ, "ನಾನು" ಎಂಬ ಶಾಶ್ವತ ವಸ್ತುವಾವುದೂ ಇಲ್ಲವೆನ್ನುವುದಕ್ಕೂ, ಜೀವಾತ್ಮವೆಂಬ–"ನಾನೆಂಬ"–ವಸ್ತುವೇ ಇಲ್ಲವೆನ್ನುವುದಕ್ಕೂ ಅಜಗಜಾಂತರವುಂಟು. ಬುದ್ಧನು ಜೀವಾತ್ಮನುಂಟೆಂದೂ ಹೇಳಲಿಲ್ಲ; ಜೀವಾತ್ಮನಿಲ್ಲವೆಂದೂ ಹೇಳಲಿಲ್ಲ. ಜೀವಾತ್ಮನೆಂಬ ವಸ್ತುವಿಲ್ಲವೆಂಬುದೇ ಬುದ್ಧನ ಅಭಿಪ್ರಾಯವೆಂದು ವಾದಿಸಲುಪಕ್ರಮಿಸಿದವರು (ಮಿಳಿಂದ ಪ್ರಶ್ನೆಯೆಂಬ ಗ್ರಂಥದ ಕರ್ತನಾದ) ನಾಗಸೇನ ಮುಂತಾದವರು ಮಾತ್ರವೇ. ರಥವೆಂದು ನಾವು ಕರೆಯುವ ವಸ್ತುವು ಚಕ್ರಗಳು, ಅಚ್ಚುಗಳು, ಸ್ತಂಭಗಳು, ಕಲಶ, ಧ್ವಜಗಳು, ಮುಂತಾದವುಗಳ ಸಮೂಹವು ಮಾತ್ರವೇ ಹೊರತು ರಥನೆಂಬ ಪದಾರ್ಥವು ಬೇರಿಲ್ಲವೋ ಹಾಗೆಯೇ ಪಂಚಸ್ಕಂಧಗಳಿವೆಯೇ ಹೊರತು ಜೀವಾತ್ಮನಿಲ್ಲವೆಂದು ಮಿಳಿಂದ ಪ್ರಶ್ನೆ ಮುಂತಾದವುಗಳಲ್ಲಿ ಮಾತ್ರ ಬರೆದಿದೆ. ಆದರೆ ಜೀವಾತ್ಮನಿಲ್ಲವೆಂದು ಬುದ್ಧನು ಎಲ್ಲಿಯೂ ಹೇಳಿಲ್ಲ.* ಇಷ್ಟಕ್ಕೂ

---

"The theory of the *skandhas* is developed out of the *namarupa* of the upanishads."—Page 384, *Indian Philosophy*·—by Sir S· Radhakrishnan·

† "It was Buddha's interest to show that body, mind, etc·, are not the true self·"—Page 373, *Indian Philosophy* by Sir S. Radhakrishnan.

* ಬೌದ್ಧ ಮತೀಯ ಗ್ರಂಥಗಳ ವ್ಯಾಸಂಗದಲ್ಲಿ ನಿಷ್ಣಾತರಾಗಿರುವ ಡಾಕ್ಟರ್ ರ್ಹೈಸ್ ಡೇವಿಡ್ಡರವರಂತಹ ಉದ್ದಾಮ ಪಂಡಿತರು ಬುದ್ಧನು ಬೋಧಿಸಿದ ಅಂಶಗಳಿಂದ ಜೀವಾತ್ಮನಿಲ್ಲವೆಂಬುದು ಆತನ ಆಶಯವೆಂದು ವ್ಯಕ್ತವಾಗುವುದೆಂದು ಬರೆದಿರುವುದು ವಿಸ್ಮಯಜನಕವಾಗಿದೆ. ಪಾಶ್ಚಿಮಾತ್ಯ ಲೇಖಕರಲ್ಲಿ ಇತರರು ಕೆಲವರೂ ಅದೇ ರೀತಿ ಅಭಿಪ್ರಾಯಪಟ್ಟಿದ್ದಾರೆ. ಅವರೆ ಕ್ರೈಸ್ತಮತದಲ್ಲಿ ಹೇಳಿರುವ ಲಕ್ಷಣಗಳುಳ್ಳ ಜೀವಾತ್ಮನನ್ನು (soul)

ಪರಿನಿರ್ವಾಣಹೊಂದಿದ ಮೇಲೆ ಸ್ಕಂಧಗಳಿರುವುದಿಲ್ಲವೆಂಬ ಅಂಶವನ್ನೂ, ಅದಕ್ಕೆ ಅನುಪಾಧಿಶೇಷ ನಿರ್ವಾಣವೆಂದು ಹೆಸರೆಂಬ ಅಂಶವನ್ನೂ, ಅದು ಆನಂದಮಯವಾದ ಶಾಶ್ವತಸ್ಥಿತಿಯೆಂಬ ಅಂಶವನ್ನೂ ಹಿಂದೆ ತಿಳಿಸಿದ್ದೇವಷ್ಟೆ. ಜೀವಾತ್ಮನಿಲ್ಲವೇ ಇಲ್ಲವೆಂಬುದು ಬುದ್ಧನ ಅಭಿಪ್ರಾಯವೆನ್ನುವ ಪಕ್ಷಕ್ಕೆ ಈ ಅಂಶಗಳು ಸಿದ್ಧಿಸುವ ಬಗೆ ಹೇಗೆ? ನಿರ್ವಾಣವು ಆಗ್ಗೆ ಸರ್ವಶೂನ್ಯವಾದ ವಿನಾಶವಾಗಬೇಕಾಗುತ್ತಿದ್ದಿತೇ ಹೊರತು, ಅದು ಪರಮ ಸುಖವೆಂದೂ ಅನನುವೇದ್ಯವೆಂದೂ ಬುದ್ಧನು ವರ್ಣಿಸುವುದಕ್ಕೆ ಕಾರಣವೇ ಇರುತ್ತಿರಲಿಲ್ಲ.

ಬ್ರಹ್ಮಲೋಕ, ದೇವಲೋಕ, ಮುಂತಾದವುಗಳುಂಟೆಂದು ಬುದ್ಧನು ಬೋಧಿಸಿದನು; ಆದರೆ ಪರಮಾತ್ಮನಾಗಲಿ ಈಶ್ವರನಾಗಲಿ ಉಂಟೆಂದು ಕಂಠೋಕ್ತವಾಗಿ ಆತನು ಬೋಧಿಸಲಿಲ್ಲ. ಯಾರನ್ನು ಬೇಡಿ ಪ್ರಾರ್ಥಿಸಿದರೂ ಆರಾಧಿಸಿದರೂ ಕರ್ಮಬಂಧನದ ನಿಯಮದಿಂದ ಅವರು ನಮ್ಮನ್ನು ಪಾರಗಾಣಿಸಲಾರರೆಂದೂ, ದುಃಖನಿರೋಧಕ್ಕೆ ನಾವೇ ಮಾರ್ಗವನ್ನು ಕಲ್ಪಿಸಿಕೊಳ್ಳಬೇಕೆಂದೂ ಬುದ್ಧನು ಮನಗಂಡನು. ಆತನು ಭಗವಂತನೊಬ್ಬನಿರುವನೆಂದು

---

ಬುದ್ಧನ ಸಿದ್ಧಾಂತದಲ್ಲಿ ಕಾಣಲಾಗದ ಕಾರಣ ಅವರು ಹಾಗೆ ಹೇಳಿರುವ ಪಕ್ಷಕ್ಕೆ ಅಭ್ಯಂತರವಿಲ್ಲವೆಂದೂ, ಹಾಗಿಲ್ಲದ ಪಕ್ಷದಲ್ಲಿ ಅವರ ಅಭಿಪ್ರಾಯವು ತಪ್ಪೆಂದೂ, ಜೀವಾತ್ಮನಿಲ್ಲವೆಂದು ಬುದ್ಧನು ಎಲ್ಲೆಲ್ಲಿಯೂ ಹೇಳಿಲ್ಲವೆಂದೂ ಎಡ್ಮಂಡ್ ಹೋಮ್ಸ್ ಮುಂತಾದವರು ಘಂಟಾಘೋಷವಾಗಿ ಹೇಳಿದ್ದಾರೆ. ಬೌದ್ಧಮತೀಯರಾದ ಪಾಲ್‌ದಾಹ್ಲ್‌ಕೆ ಅವರು "The Buddha never said: 'There exists no such thing as the soul,' any more than he said: 'There is no God.' He only said "Redemption from the sorrow of life is not to be reached through this God-Idea." ಎಂದು ತಿಳಿಸಿದ್ದಾರೆ.

—Page 194, *Buddhist Essays* by Paul Dahlke.

ಬೋಧಿಸಿ ಭಗವದಾರಾಧನೆಯನ್ನು ವಿಧಿಸದಿದ್ದುದಕ್ಕೆ ಅದೇ ಕಾರಣ ವಾಗಿರಬೇಕು. ಆದುದರಿಂದಲೇ ಬುದ್ಧನು, "ಮಾನವನು ತನಗೆ ತಾನೇ ಉದ್ಧಾರಕನು. ತನ್ನನ್ನುಳಿದು ಮತ್ತಾವನು ತಾನೇ ತನ್ನನ್ನುದ್ಧರಿಸಬಲ್ಲನು? ಮನೋನಿಗ್ರಹವುಳ್ಳಾತನು ತನಗೆ ತಾನೇ ಉತ್ತಮ ರೀತಿಯಲ್ಲಿ ಉದ್ಧಾರಕನಾಗುವನು"* ಎಂದು ಹೇಳಿದ್ದಾ ನೆಂದು ತೋರುವುದು. ಮಾನವನು ತಾನಾಗಿಯೇ ಕಲ್ಪಿಸಿಕೊಳ್ಳುವ ಕರ್ಮಬಂಧನವನ್ನು ಭಗವತ್ಪ್ರಾರ್ಥನೆಯು ತಪ್ಪಿಸಲಾರದೆಂಬ ಉದ್ದೇ ಶವು ಬುದ್ಧನದಾಗಿದ್ದುದರಿಂದಲೇ ಆತನು ತನ್ನ ಶಿಷ್ಯನೊಬ್ಬನಿಗೆ ನದಿಯ ಆಚಿನ ದಡವನ್ನು ತೋರಿಸಿ, "ಎಷ್ಟೆಷ್ಟು ಪ್ರಾರ್ಥಿಸಿದರೂ ಅಲ್ಲಿರುವ ಆ ದಡವು ಇಲ್ಲಿಗೆ ಬರಲಾರದು—ಅಲ್ಲವೆ?" ಎಂದು ಕೇಳಿದುದು. ಭಗವಂತನೇ ಇಲ್ಲವೆಂಬುದು ಬುದ್ಧನ ಅಭಿಪ್ರಾಯ ವಾಗಿದ್ದರೆ ಆತನು ಲೋಕಾಂತರಗಳೂ ಬ್ರಹ್ಮೇಂದ್ರ ಮುಂತಾದ ದೇವತೆಗಳೂ ಉಂಟೆಂದು ಒಪ್ಪಿಕೊಂಡ ಬಗೆ ಹೇಗೆ? (ಬುದ್ಧನು ಪ್ರಸ್ತಾವಿಸಿರುವ ಬ್ರಹ್ಮಲೋಕದ ಬ್ರಹ್ಮರುಗಳೂ ಕರ್ಮಬಂಧನ ಕ್ಕೊಳಗಾದವರು; ಸಾಮಾನ್ಯರು; ಅವರಿಗಾಗಲಿ ದೇವಲೋಕ ಮುಂತಾದವುಗಳ ದೇವರುಗಳಿಗಾಗಲಿ ಮಾನವರ ಮೇಲೆ ಅಧಿಕಾರ ವಿಲ್ಲ). ಮಹಾಯಾನ ಶಾಖೆಯವರು ಹೀನಯಾನದವರ ಭಾವನೆಗಳಲ್ಲಿ ಕೆಲವು ಬೋಧನೆಗಳು ಬುದ್ಧನ ಬೋಧನೆಗೆ ಸರಿಯಾಗಿಲ್ಲವೆಂದು

---

* "ಅತ್ತಾ ಹಿ ಅತ್ತನೋ ನಾಥೋ ಕೋ ಹಿ ನಾಥೋ ಪರೋ ಸಿಯಾ । ಅತ್ತನಾ ಹಿ ಸುದನ್ತೇನ ನಾಥಂ ಲಭತಿ ದುಲ್ಲಭಂ ॥"

—ಧರ್ಮಪದ, ೧೬೦ನೆಯ ಶ್ಲೋಕ.

ಈ ಶ್ಲೋಕವು ಭಗವದ್ಗೀತೆಯ ಶ್ಲೋಕವೊಂದನ್ನು ಹೋಲುತ್ತದೆ. ಅದಾವುದೆಂದರೆ:—

"ಉದ್ಧರೇದಾತ್ಮನಾऽऽತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ"॥

—ಭಗವದ್ಗೀತಾ, ೬ನೆಯ ಅಧ್ಯಾಯ, ೫ನೆಯ ಶ್ಲೋಕ.

ಭಾವಿಸಿ ತಮ್ಮ ಶಾಖೆಯನ್ನು ಸ್ಥಾಪಿಸಿಕೊಂಡರು. ಸನಾತನ ಧರ್ಮ ಸಿದ್ಧಾಂತದವರ ಬ್ರಹ್ಮನನ್ನು ಹೋಲುವ ಮಂಜುಶ್ರೀಯನ್ನೂ, ವಿಷ್ಣುವನ್ನು ಹೋಲುವ ಪದ್ಮಪಾಣಿಯನ್ನೂ (ಎಂದರೆ ಅವಲೋಕಿತೇಶ್ವರನನ್ನೂ), ಶಿವನನ್ನು ಹೋಲುವ ಅಮಿತಾಭನನ್ನೂ ಮಹಾಯಾನಶಾಖೆಯ ಬೌದ್ಧರು ಆರಾಧಿಸತೊಡಗಿದರು. ಅವರು ಅನುಕರಣ ಪಟುಗಳಾಗಿ ಹಾಗೆ ಮಾಡಿದರೆನ್ನುವುದಕ್ಕೆ ಅವಕಾಶವುಂಟು. ಆದರೂ ಭಗವಂತನೇ ಇಲ್ಲವೆಂಬುದು ಬುದ್ಧನ ಅಭಿಪ್ರಾಯವಾಗಿದ್ದ ಪಕ್ಷಕ್ಕೆ ಅವರು ಆ ರೀತಿ ಮಾಡುವುದು ಸಾಧ್ಯವಿರುತ್ತಿದ್ದಿತೇ—ಎಂಬ ಶಂಕೆಗಾದರೂ ಸ್ವಲ್ಪಮಟ್ಟಿಗೆ ಇದರಿಂದ ಆಸ್ಪದವುಂಟಲ್ಲವೆ? ಭಗವಂತನಿಲ್ಲವೆಂದು ಬುದ್ಧನು ಎಲ್ಲಿಯೂ ಹೇಳಿಲ್ಲ.‡

---

‡ ಶಾಶ್ವತ ವಸ್ತುವೊಂದುಂಟೆಂಬ ಭಾವನೆಯೇ ಗೌತಮ ಬುದ್ಧನಿಗಿದ್ದಿತೆಂದು ಅನೇಕ ಮಂದಿ ವಿದ್ವಾಂಸರ ಅಭಿಪ್ರಾಯ. ಸರ್ ರಾಧಾಕೃಷ್ಣನ್ ಅವರೂ ಆ ವಿದ್ವಾಂಸರಲ್ಲೊಬ್ಬರು. ಅವರು ಈ ಸಂಬಂಧವಾಗಿ ಹೇಳಿರುವುದೇನೆಂದರೆ:—

However much Buddha tried to refuse to reply to the question of the ultimate reality which lay beyond the categories of the phenomenal world, he did not seem to have had any doubt about it. "There is an unborn, an unoriginated, an unmade, an uncompounded; where there not, O mendicants, there would be no escape from the world of the born, the originated, the made and the Compounded" (Udana, viii. 3.) Buddha believed in an ontological reality that endures beneath the shifting appearances of the visible world.

—Pages 379-380. *Indian Philosophy*,
by Sir S. Radhakrishnan.

[ಸ್ಥಳಸಂಕೋಚದಿಂದ ಇಲ್ಲಿ ಇತರರ ಅಭಿಪ್ರಾಯಗಳನ್ನು ಸೂಚಿಸಿಲ್ಲ.]

ಸೃಷ್ಟಿಯ ಆದ್ಯಂತಗಳ ವಿಷಯವಾಗಿಯೂ ಬುದ್ಧನು ಏನನ್ನೂ ಹೇಳಲಿಲ್ಲ. ಸಂಸಾರವು ದುಃಖಮಯವಾದುದೆಂದೂ ಅದು ಅನಾದಿಯಾದುದೆಂದೂ, ಆತನು ಬೋಧಿಸಿದನೇ ಹೊರತು, ಸಂಸಾರದ ಅಥವಾ ಸೃಷ್ಟಿಯ ಆದಿಕಾರಣವು ಏನೆಂಬುದನ್ನು ಆತನು ಬೋಧಿಸಲಿಲ್ಲ.

“ಭಗವಂತನ ಸ್ವಭಾವವೇನು, ಸೃಷ್ಟಿಯು ನಡೆದ ಬಗೆ ಹೇಗೆ, ಜೀವಾತ್ಮನಿದ್ದಾನೆಯೆ ?”—ಎಂಬಿವೇ ಮುಂತಾದ ವಿಚಾರಗಳಲ್ಲಿ ಬುದ್ಧನು ಮೌನವನ್ನವಲಂಬಿಸಿದ್ದನು.

**ಬುದ್ಧನ ಮೌನ**

ನಾನಾ ಲೇಖಕರೂ ಅದಕ್ಕೆ ಬಗೆಬಗೆಯಾಗಿ ಕಾರಣಗಳನ್ನು ತಿಳಿಸಿದ್ದಾರೆ. ಭಗವಂತನೂ ಜೀವಾತ್ಮನೂ ಇಲ್ಲವೆಂದೇ ಬುದ್ಧನು ನಂಬಿದ್ದನೆಂದೂ, ಆದರೆ ಕಂಠೋಕ್ತವಾಗಿ ತಿಳಿಸಲು ಆತನು ಎದೆಗುಂದಿ ಅಳುಕಿದನೆಂದೂ ಕೆಲವರ ಅಭಿಪ್ರಾಯ. ಬುದ್ಧನಂತಹ ಧೀರನ ವಿಷಯದಲ್ಲಿ ಈ ಬಗೆಯ ಆಕ್ಷೇಪಣೆಗೆ ಸುತರಾಂ ಅವಕಾಶವಿಲ್ಲ. ಬುದ್ಧನ ಮನಸ್ಸು ಸಂದೇಹಗ್ರಸ್ತವಾಗಿದ್ದುದರಿಂದ ಅವನು ಸುಮ್ಮನಿದ್ದನೆಂದು ಕೆಲವರ ಮತ. ಬುದ್ಧನ ವಾಗ್ಧೋರಣೆಯನ್ನೂ ಧೈರ್ಯವನ್ನೂ ನೋಡಿದರೆ ಅವನೆಂದಿಗೂ ಸಂಶಯಗ್ರಸ್ತನಾಗಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದಾಗಿದೆ. ಬುದ್ಧನಿಗೆ ಭಗವಂತನ ವಿಷಯ, ಸೃಷ್ಟಿಕ್ರಮ, ಮುಂತಾದ ಗಹನ ವಿಚಾರಗಳು ತಿಳಿದೇ ಇರಲಿಲ್ಲವೆಂದು ಕೆಲವರ ಅಭಿಪ್ರಾಯ. ಮಹನೀಯನಾದ ಬುದ್ಧನು ತಾನೇ ಅಜ್ಞನಾಗಿದ್ದೂ ಇಲ್ಲದ ಸಲ್ಲದ ಆಟವನ್ನು ಕಟ್ಟಿ ಇತರರಿಗೆ ಮೋಸಮಾಡಿದನೆಂಬ ಕಲ್ಪನೆಯೇ ಅಚಿಂತ್ಯವಾದುದು.

ಬುದ್ಧನು ಅನೇಕ ವಿಷಯಗಳನ್ನು ಬಲ್ಲವನಾಗಿದ್ದರೂ ಜೀವನದಲ್ಲಿ ದುಃಖನಿರೋಧವುಂಟಾಗಿ ನಿರ್ವಾಣವನ್ನು ಸಾಧಿಸುವ ಸಚ್ಛೀಲಕ್ಕೆಷ್ಟು ಆವಶ್ಯಕವೆಂದು ತೋರಿತೋ ಅಷ್ಟನ್ನು ಮಾತ್ರವೇ

ಜನರಿಗೆ ಬೋಧಿಸಿದನು. ಉಳಿದ ಸಮಸ್ತ ವಿಚಾರಗಳಲ್ಲಿಯೂ ಮೌನದಿಂದಿದ್ದನು. ಒಮ್ಮೆ ವಾತ್ಸ್ಯಗೋತ್ರನೆಂಬವನು ಬುದ್ಧನಲ್ಲಿಗೆ ಬಂದು, "ಆತ್ಮನುಂಟೆ?" ಎಂದು ಮೂರುಸಾರಿ ಪ್ರಶ್ನೆಮಾಡಿದನಂತೆ. ಬುದ್ಧನು ಉತ್ತರ ಹೇಳದೆ ಮೌನದಿಂದಿದ್ದನು. ಜೀವಾತ್ಮನಿಲ್ಲವೆಂದು ಬುದ್ಧನು ನಂಬಿದ್ದನೆಂದೂ ಅದಕ್ಕೆ ಆತನ ಮೌನವೇ ನಿದರ್ಶನ ವೆಂದೂ ಕೆಲವರು ಪಾಶ್ಚಿಮಾತ್ಯ ಲೇಖಕರು ಇದರಿಂದ ಅನುಮೇಯಿ ಸಿದ್ದಾರೆ. ಬುದ್ಧನು ಅನಧಿಕಾರಿಗಳಿಗೂ ಧರ್ಮಬೋಧೆ ಮಾಡುವ ಅವಿವೇಕಕ್ಕೆ ಕೈಹಾಕುತ್ತಿರಲಿಲ್ಲ. ವಾತ್ಸ್ಯಗೋತ್ರನು ಓಡಿಬಂದು ಒಂದು ಪ್ರಶ್ನೆಹಾಕಿದ ಮಾತ್ರವೇ ಬುದ್ಧನು ಉತ್ತರ ಹೇಳಬೇಕಾ ದುದೇನೂ ಅಗತ್ಯವಾಗಿರಲಿಲ್ಲ.

ಒಮ್ಮೆ ಮಾಲುಕ್ಯಪುತ್ರನೆಂಬವನು ಬುದ್ಧನನ್ನು ಕುರಿತು "ಬುದ್ಧನಾದವನು ಮರಣಹೊಂದಿದ ಮೇಲೂ ಬಾಳೆಂಬು ದೊಂದುಂಟೆ?" ಎಂದು ಪ್ರಶ್ನೆಮಾಡಿದನಂತೆ. ಬುದ್ಧನಿಗೆ ಸಾಧ್ಯ ವಿದ್ದರೆ ಅದಕ್ಕೆ ಉತ್ತರ ಹೇಳಬೇಕೆಂದು ಕೋರಿ ಉದ್ಧತತನವನ್ನು ತೋರಿಸಿ ಅವನು ಮಾತನಾಡಿದನಂತೆ. ಬುದ್ಧನು, "ಮಾಲುಕ್ಯ ಪುತ್ರ! ನಿನಗೇನಾದರೂ ನಾನು ಹೇಳಿದ್ದೆನೆ? 'ಬಾ, ಮಾಲುಕ್ಯ ಪುತ್ರ, ನನ್ನ ಶಿಷ್ಯನಾಗಿರು. ಪ್ರಪಂಚವು ಶಾಶ್ವತವೇ ಅಶಾಶ್ವತವೇ ಎಂಬುದನ್ನೂ, ಆತ್ಮವು ದೇಹಾತಿರಿಕ್ತ ವಸ್ತುವೇ ಅಲ್ಲವೇ ಎಂಬು ದನ್ನೂ, ಬುದ್ಧನು ಮೃತನಾದ ಮೇಲೆ ಬದುಕಿರುವನೇ ಇಲ್ಲವೇ ಎಂಬುದನ್ನೂ ತಿಳಿಸುತ್ತೇನೆ' ಎಂದೇನಾದರೂ ನಾನು ನಿನಗೆ ಹೇಳಿ ದ್ದೆನೆ?" ಎಂದನು. ಆಗಂತುಕನು ಇಲ್ಲವೆಂದನು. ಬುದ್ಧನು "ಇಲ್ಲವೇ, ನೀನೇನಾದರೂ ನನ್ನನ್ನು ಕುರಿತು 'ಗೌತಮ, ನಾನು ನಿನ್ನ ಶಿಷ್ಯನಾಗಿರುವೆನು. ಪ್ರಪಂಚವು ಶಾಶ್ವತವೋ ಅಶಾಶ್ವತವೋ ತಿಳಿಸು' ಎಂದು ಕೇಳಿದ್ದೆಯೋ?" ಎಂದು ಕೇಳಿದನು. ಮಾಲುಕ್ಯಪುತ್ರನು "ಇಲ್ಲ; ಕೇಳಿರಲಿಲ್ಲ" ಎಂದನು. ಆ ಬಳಿಕ ಬುದ್ಧನು ಅವನನ್ನು

ಕುರಿತು, "ವಿಷಪೂರಿತವಾದ ಬಾಣವು ಒಬ್ಬ ಮನುಷ್ಯನ ಮೈಗೆ ನಾಟಿಕೊಂಡಿದೆಯೆಂದು ಭಾವಿಸೋಣ. ಅವನ ಬಂಧು ಮಿತ್ರರು ಚತುರನಾದೊಬ್ಬ ಚಿಕಿತ್ಸಕನನ್ನು ಕರೆತಂದರೆ ಚಿಕಿತ್ಸಕನೊಡನೆ ಅವನು 'ನನ್ನನ್ನು ಬಾಣದಿಂದ ಹೊಡೆದವನಾರು? ಅವನು ರಾಜನೆ, ಬ್ರಾಹ್ಮಣನೆ, ವೈಶ್ಯನೆ, ಶೂದ್ರನೆ? ಅವನ ವಂಶವಾವುದು? ಅವನ ಹೆಸರೇನು? ಅವನು ಎತ್ತರವಾಗಿದ್ದಾನೆಯೋ ಅಥವಾ ಕುಳ್ಳಾಗಿದ್ದಾನೆಯೋ? ಅವನು ನನ್ನಮೇಲೆ ಪ್ರಯೋಗಿಸಿದ ಬಾಣದ ರಚನಾ ಕ್ರಮವೆಂತಹುದು?—ಎಂಬೀ ಸಂಗತಿಗಳನ್ನು ತಿಳಿಸುವವರೆಗೂ ನನಗೆ ಚಿಕಿತ್ಸೆ ಮಾಡಕೂಡದು' ಎಂದನೆನ್ನು. ಅವನ ಗತಿಯೇನು? ಅವನು ಮೃತಪಡುವನಲ್ಲವೆ? ಪ್ರಪಂಚವು ಶಾಶ್ವತವೆ, ಅಶಾಶ್ವತವೆ, ಮೃತನಾದಮೇಲೆ ಬುದ್ಧನಿಗೆ ಬಾಳೆಂಬುದುಂಟೆ, ಅಲ್ಲವೆ—ಎಂಬಿವೇ ಮುಂತಾದ ವಿಚಾರಗಳನ್ನು ತಥಾಗತನೇಕೆ ತನ್ನ ಶಿಷ್ಯರಿಗೆ ಬೋಧಿಸಿಲ್ಲ? ಸೌಶೀಲ್ಯಕ್ಕಾಗಲಿ, ದುಃಖನಿರೋಧಕ್ಕಾಗಲಿ, ಇವುಗಳಿಂದ ಸಹಾಯವಾಗುವುದಿಲ್ಲವೆಂಬ ಕಾರಣದಿಂದ. ಸೌಶೀಲ್ಯಕ್ಕೂ ದುಃಖ ನಿರೋಧಕ್ಕೂ ಸಾಧಕವಾಗುವುದನ್ನೆಲ್ಲ ತಥಾಗತನು ಶಿಷ್ಯರಿಗೆ ಬೋಧಿಸಿದ್ದಾನೆ. ಮಾಲುಕ್ಯಪುತ್ರ! ನಾನು ತಿಳಿಸಿಲ್ಲದಿರುವುದೆಲ್ಲ ಹಾಗೆಯೇ ಉಳಿದಿರಲಿ. ನಾನು ತಿಳಿಸಿರುವುದು ಮಾತ್ರ ಜನರ ಅವಗಾಹನೆಗೆ ಬರಲಿ" ಎಂದನು. ಉರಿಯುತ್ತಿರುವ ಮನೆಯಲ್ಲಿರುವವನ ಕರ್ತವ್ಯವು ಮೊದಲು ಉರಿಯಿಂದ ತಪ್ಪಿಸಿಕೊಳ್ಳುವುದೇ ಹೊರತು ಉರಿಯ ವಿಚಾರವನ್ನೂ, ಅದರ ಕಾರಣವನ್ನೂ ಕುರಿತು ಚರ್ಚಿಸುವುದಲ್ಲವೆಂದೂ ಬುದ್ಧನು ಉಪದೇಶಿಸಿದ್ದಾನೆ. ಬುದ್ಧನ ಮೌನಕ್ಕೆ ನಿಜವಾದ ಕಾರಣವು ಇವುಗಳಿಂದ ಸ್ಪಷ್ಟವಾಗಿ ಗೋಚರಿಸುವುದಲ್ಲವೆ? ಹೀಗಿದ್ದೂ ಗೌತಮ ಬುದ್ಧನು ನಾಸ್ತಿಕನೆಂದು ಮುಂತಾಗಿ ಕೆಲವರು ಆತನ ಮೇಲೆ ದೋಷಾರೋಪಣೆ ಮಾಡಿದ್ದಾರೆ. ಆತನು ನಾಸ್ತಿಕನಾದರೂ ಆಗಿರಲಿ ಅಥವಾ ಆಸ್ತಿಕನಾದರೂ ಆಗಿರಲಿ; ಆತನು ಹೇಳಿರುವ, "ಸಮಸ್ತ ಪಾಪಗಳಿಂದಲೂ ವಿಮುಖನಾಗಿರ

ಬೇಕು. ಸರ್ವದಾ ಸತ್ಕಾರ್ಯಗಳನ್ನಾಚರಿಸಬೇಕು. ಸ್ವಚಿತ್ತ ಪರಿದಮನದಿಂದ ಪ್ರಶಾಂತನಾಗಿರಬೇಕು :—ಇದೇ ಬುದ್ಧರುಗಳ ಶಾಸನ" † ಎಂಬ ಸಂದೇಶವನ್ನು ಆಸ್ತಿಕ ಶ್ರೇಷ್ಠರೂ ಅಭಿನಂದಿಸಲೇ ಬೇಕು. ಭಗವಂತನ ಅಸ್ತಿತ್ವವನ್ನೇ ಮರೆತು ಆ ಸಂದೇಶಕ್ಕನು ಸಾರವಾಗಿ ವರ್ತಿಸಿದವರಿಗೂ ಮುಕ್ತಿಸಿಂಹಾಸನವು ಲಭಿಸಲೇಬೇಕು.

---

† "ಸಬ್ಬ ಪಾಪಸ್ಸ ಅಕರಣಂ ಕುಸಲಸ್ಸ ಉಪಸಂಪದಾ । ಸಚಿತ್ತ ಪರಿಯೋದಪನಂ ಏತಂ ಬುದ್ಧಾನಂ ಸಾಸನಂ ॥"

—ಧರ್ಮಪದ : ೧೮೩ನೆಯ ಶ್ಲೋಕ.

ಈ ಸಂದೇಶವು ಅಮೌಲ್ಯವಾದುದೆಂದು ಬೌದ್ಧರ ಅಭಿಪ್ರಾಯ.

# ಹದಿಮೂರನೆಯ ಅಧ್ಯಾಯ

—÷—

## ಶಿಷ್ಯ ವ್ಯವಸ್ಥೆ

(ಉಪಾಸಕರು, ಭಿಕ್ಷುಗಳು)

ಗೃಹಸ್ಥರು ಪಂಚಶೀಲಗಳನ್ನನುಸರಿಸಿ "ಉಪಾಸಕ"ರಾಗಿರಬಹುದೆಂಬುದರ ಜೊತೆಗೆ ಮತ್ತೊಂದು ಅನುಕೂಲವೂ ಬೌದ್ಧಮತದಲ್ಲುಂಟು. ದಶ ಶೀಲಗಳನ್ನನುಸರಿಸಿ ಭಿಕ್ಷುಗಳಾದವರು ತಾವು ಬಯಸಿದಾಗ ಸ್ಥವಿರರೆಂಬ ಹಿರಿಯ ಭಿಕ್ಷುಗಳಿಗೆ ತಿಳಿಸಿ ಗೃಹಸ್ಥಾಶ್ರಮವನ್ನವಲಂಬಿಸಬಹುದು. ಆ ಬಳಿಕ ಮತ್ತೆ ತಾವು ಬಯಸಿದಾಗ ದಶ ಶೀಲಗಳನ್ನನುಸರಿಸಿ ಭಿಕ್ಷುಗಳಾಗಬಹುದು. ಆದರೆ ದಶ ಶೀಲಗಳನ್ನಾಚರಿಸುತ್ತ ಭಿಕ್ಷುಗಳಾಗಿರುವ ಅವಧಿಯಲ್ಲಿ ಮಾತ್ರ ಅವುಗಳಲ್ಲೊಂದನ್ನೂ ಬಿಡದೆ ಪರಿಪಾಲಿಸಬೇಕು.

**ಬೌದ್ಧಮತದಲ್ಲಿಯ ಅನುಕೂಲ**

ಗೃಹಸ್ಥರು ಬೌದ್ಧಮತವನ್ನವಲಂಬಿಸಬೇಕಾದರೆ "ರತ್ನತ್ರಯ"ದಲ್ಲಿ* ಶ್ರದ್ಧೆ ತೋರಿ ಪಂಚ ಶೀಲಗಳನ್ನನುಸರಿಸುವುದಾಗಿ ಪ್ರತಿಜ್ಞೆ ಮಾಡಿ ಅದರಂತೆ ನಡೆಯುವುದು ಆವಶ್ಯಕ. ಪ್ರಾಣಿಹತ್ಯ ಮಾಡದಿರುವುದು ಮತ್ತು ಪ್ರಾಣಿಹಿಂಸೆ ಮಾಡದಿರುವುದು; ತನ್ನದಾದ ಅಥವಾ ತಾನು ತೆಗೆದುಕೊಳ್ಳಲು ಉಚಿತವಾಗಿ ಪಡೆದ ವಸ್ತುವನ್ನುಳಿದು ಮತ್ತಾವ ವಸ್ತುವನ್ನೂ ತೆಗೆದುಕೊಳ್ಳದಿರುವುದು; ಸಂತ

**ಉಪಾಸಕರು**

---

* ಬುದ್ಧನನ್ನೂ ಧರ್ಮವನ್ನೂ ಸಂಘವನ್ನೂ ಶರಣುಹೋಗುವುದಾಗಿ ಹೇಳುವ ಮೂರು ವಾಕ್ಯಗಳು.

ತವೂ ಸತ್ಯವನ್ನೇ ನುಡಿಯುತ್ತ, ಮೋಸದ ಮಾತುಗಳನ್ನಾಗಲಿ, ನಿಂದಾ ವಾಕ್ಯಗಳನ್ನಾಗಲಿ ಆಡದಿರುವುದು; ಬ್ರಹ್ಮಚರ್ಯದಿಂದಿರುವುದು ಮತ್ತು ಮಾದಕವಸ್ತುಗಳನ್ನಾಗಲಿ, ಚಿತ್ತೋದ್ರೇಕಕರವಾದ ವಸ್ತುಗಳನ್ನಾಗಲಿ ಸೇವಿಸದಿರುವುದು; ಇವೈದು ಪಂಚಶೀಲಗಳು. ಇವುಗಳನ್ನನುಸರಿಸುವವರು ಉಪಾಸಕರೆನಿಸಿಕೊಳ್ಳುವರು. ದಂಪತಿಗಳೀರ್ವರಿಗೂ ಪಂಚಶೀಲಗಳ ದೀಕ್ಷೆಯಲ್ಲಿರಲು ಅಧಿಕಾರವುಂಟು. ಅವರು ತಮಗೆ ಇಷ್ಟವಿದ್ದಷ್ಟು ಕಾಲ ಪಂಚಶೀಲ ದೀಕ್ಷೆಯಲ್ಲಿದ್ದು ಆ ಬಳಿಕ ಬಿಟ್ಟುಬಿಡಬಹುದು; ಮತ್ತೆ ಪಂಚಶೀಲ ದೀಕ್ಷಾಪರಿಗ್ರಹ ಮಾಡಲೂ ಬಹುದು. ಪಂಚಶೀಲಗಳನ್ನು ಆಚರಣೆಯಲ್ಲಿಟ್ಟು ಕೊಂಡಿರುವಾಗ್ಗೆ ಗೃಹಸ್ಥರೆಲ್ಲರೂ "ಉಪಾಸಕ" ತರಗತಿಯ ಬೌದ್ಧರು.

ಇನ್ನು ಉಪಾಸಕರ ಕರ್ತವ್ಯಗಳ ವಿಚಾರ. ಉಪಾಸಕರು ವಿನೀತರಾಗಿಯೂ, ಧಾರ್ಮಿಕರಾಗಿಯೂ, ಶೀಲವಂತರಾಗಿಯೂ ಬಾಳಬೇಕು. ಸಾಧ್ಯವಾದಮಟ್ಟಿಗೂ ಅವರೂ ಆರ್ಯಾಷ್ಟಾಂಗಿಕ ಮಾರ್ಗವನ್ನನುಸರಿಸುತ್ತ ಬರಬೇಕು. ಅದಕ್ಕನುಕೂಲಿಸುವಂತೆ ಉಪಾಸಕರು ಆಗಾಗ ಭಿಕ್ಷು ಭಿಕ್ಷುಣೀ ದೀಕ್ಷೆಯನ್ನು ಪಡೆದು ಅಭ್ಯಾಸ ಮಾಡಿಕೊಳ್ಳುವುದುತ್ತಮ. ಉಪಾಸಕರು ಭಿಕ್ಷುಗಳಿಗೆ ಅನ್ನಾದಿಗಳನ್ನಿತ್ತು ಸತ್ಕರಿಸಿ, ಅದರಿಂದಲೂ ಪುಣ್ಯವನ್ನು ಗಳಿಸಬೇಕು. ಭಿಕ್ಷುಗಳಿಗೆ ಅವರು ಭಿಕ್ಷವಿತ್ತರೆ ಪುಣ್ಯಾರ್ಜನೆಗೆ ತಮಗೊಂದು ಅವಕಾಶವನ್ನು ಕಲ್ಪಿಸಿಕೊಂಡಂತಾಗುವುದೇ ಹೊರತು, ಭಿಕ್ಷುಗಳಿಗೆ ಉಪಕಾರದ ಹೊರೆಯನ್ನು ಹೊರಿಸಿದಂತಲ್ಲ. ಭಿಕ್ಷುಗಳಿಗೆ ಉಪಾಸಕರ ಮೇಲೆ ಯಾವ ಅಧಿಕಾರವೂ ಇಲ್ಲ. ಭಿಕ್ಷಾದಿಗಳಿಂದ ಅವರು ಭಿಕ್ಷುಗಳನ್ನು ಸತ್ಕರಿಸಲೇಬೇಕೆಂಬ ನಿರ್ಬಂಧವೂ ಇಲ್ಲ. ಆದಾಗ್ಯೂ ಉಪಾಸಕರು ಪರೋಪಕಾರಿಗಳಾಗಿಯೂ, ಕರುಣಾಳುಗಳಾಗಿಯೂ ವರ್ತಿಸುತ್ತ, ಧರ್ಮಶ್ರವಣದಿಂದ ಗುಣವೃದ್ಧಿ ಮಾಡಿಕೊಳ್ಳಬೇಕು.

ಮೇಲೆ ಹೇಳಿದ ಪಂಚಶೀಲಗಳ ಜೊತೆಗೆ ಮತ್ತೈದು ಶೀಲಗಳು ಸೇರಿ ದಶ ಶೀಲಗಳಾಗುವುವು. ಅವುಗಳಾವುವೆಂದರೆ:

**ಭಿಕ್ಷುಗಳು**

ದಿನಕ್ಕೆ ಕ್ಲೃಪ್ತಕಾಲದಲ್ಲಿ ಒಪ್ಪತ್ತು ಹೊರತು, ಉಳಿದ ಕಾಲಗಳಲ್ಲಿ ಊಟ ಮಾಡದಿರುವುದು; ನೃತ್ಯ, ಗೀತ, ವಾದ್ಯ, ನಾಟ್ಯಾದಿಕೂಟಗಳಲ್ಲಿ ಸೇರದೆಯೂ ಅವುಗಳನ್ನೂ ಇತರ ವಿನೋದಗಳನ್ನೂ, ನೋಡದೆಯೂ ಇರುವುದು; ಗಂಧಮಾಲ್ಯಾದಿಗಳನ್ನೂ, ಅಲಂಕಾರಗಳನ್ನೂ ಬಿಟ್ಟು ಸ್ವಪ್ರತಿಷ್ಠೆಯಿಲ್ಲದೆ ವಿನೀತರಾಗಿರುವುದು; ಉತ್ತಮ ವಿಧದ ಹಾಸಿಗೆ ಹೊದಿಕೆಗಳನ್ನುಪಯೋಗಿಸದಿರುವುದು; ಸ್ವಪ್ರಯೋಜನಕ್ಕಾಗಿ ಚಿನ್ನ ಬೆಳ್ಳಿಗಳನ್ನಾಗಲಿ, ಮತ್ತಾವ ರೂಪದ ಹಣವನ್ನಾಗಲಿ ಸ್ವೀಕರಿಸದಿರುವುದು. ಇವು ಭಿಕ್ಷುಗಳಿಗಾಗಿ ವಿಧಾಯಕವಾಗಿವೆ. ಭಿಕ್ಷುಗಳು ಅಗತ್ಯವಾಗಿ ದಶಶೀಲಗಳನ್ನು ತಪ್ಪದೆ ಅನುಸರಿಸುತ್ತ ಅವುಗಳ ಜೊತೆಗೆ ಆರ್ಯಾಷ್ಟಾಂಗಿಕ ಮಾರ್ಗವನ್ನು ಅನುಸಂಧಾನ ಮಾಡಿ ಅರ್ಹತ ಪದವಿಗೇರಲು ಪ್ರಯತ್ನಿಸಬೇಕು.

ಭಿಕ್ಷುಗಳೆಲ್ಲರ ಒಟ್ಟು ಸಮುದಾಯಕ್ಕೆ ಸಂಘವೆಂದು ಹೆಸರು. ಭಿಕ್ಷುಗಳ ಸಂಘವನ್ನು ಸ್ಥಾಪಿಸಿದುದು, ಬುದ್ಧನು ನೆರವೇರಿಸಿದ ಮಹತ್ತರವಾದ ಕಾರ್ಯಗಳಲ್ಲೊಂದಾಗಿದೆ. ಸಂಘದ ಸದಸ್ಯರಿಗೆ

**ಸಂಘ**

ಭಿಕ್ಷುಗಳೆಂದು ಹೆಸರು. ಭಿಕ್ಷುಣಿಯರೂ ಸಂಘಕ್ಕೆ ಸೇರಬಹುದಾಗಿದ್ದ ಕಾಲವು ಕ್ರಿಸ್ತಶಕ ಮೊದಲನೆಯ ಶತಮಾನದಲ್ಲಿಯೇ ಮುಗಿದುಹೋಯಿತು. ಸ್ತ್ರೀಯರು ಈಗಲೂ ಭಿಕ್ಷುಣಿಯರಾಗಬಹುದು. ಆದರೆ ಸಂಘಕ್ಕೆ ಸೇರಿ ಅದರ ವ್ಯವಸ್ಥೆಯಲ್ಲಿ ಭಾಗಿಗಳಾಗಲು ಅವರಿಗೆ ಅಧಿಕಾರವಿಲ್ಲ.

ಅಂಟು ಜಾಡ್ಯದಿಂದ ಅಥವಾ ವಾಸಿಯಾಗುವುದು ಅಸಾಧ್ಯವಾಗಿರುವ ರೋಗದಿಂದ ಪೀಡಿತರಾಗಿರುವವರು; ತಾಯಿ ತಂದೆಗಳ

**ಅನರ್ಹತೆಗಳು** ಅಥವಾ ಪೋಷಕರ ಅಪ್ಪಣೆಯನ್ನು ಪಡೆಯದಿರುವ ಅಪ್ರಾಪ್ತವಯಸ್ಕರು; ದಾಸ್ಯದಿಂದ ಬಿಡುಗಡೆ ಹೊಂದದಿರುವ ದಾಸದಾಸಿಯರು; ಅಪರಾಧಿಗಳೆಂದು ಆಪಾದಿತರಾಗಿದ್ದು ನಿರಪರಾಧಿಗಳೆಂದು ತೀರ್ಮಾನವಾಗದಿರುವವರು; ರಾಜದಂಡನೆಯನ್ನನುಭವಿಸುವ ಅವಧಿಯು ಪೂರೈಸದಿರುವವರು; ಋಣವಿಮುಕ್ತರಾಗದಿರುವ ಸಾಲಗಾರರು; ರಾಜಸೇವೆಯ ಅವಧಿಯು ಪೂರ್ತಿಯಾಗದಿರುವ ಸೈನಿಕರು ಮತ್ತು ಅಧಿಕಾರಿಗಳು; ಘೋರಪಾತಕಗಳನ್ನಾಚರಿಸಿರುವವರು. ಇವರುಗಳು ಹೊರತು ಉಳಿದವರು ಯಾರು ಬೇಕಾದರೂ ಜಾತಿ ಕುಲ ಮುಂತಾದ ನಿರ್ಬಂಧವಾವುದೂ ಇಲ್ಲದೆ ಭಿಕ್ಷುದೀಕ್ಷೆಯನ್ನು ವಹಿಸಿ ಸಂಘಕ್ಕೆ ಸೇರಬಹುದೆಂಬುದು ಬುದ್ಧನು ಏರ್ಪಡಿಸಿದ ನಿಯಮ.

ಭಿಕ್ಷುಗಳಾಗತಕ್ಕವರು ಕೇಶಖಂಡನ ಮಾಡಿಸಿಕೊಂಡು ಕಾಷಾಯವಸ್ತ್ರವನ್ನು ಧರಿಸಿ ಪರಿವ್ರಾಜಕ ದೀಕ್ಷೆಯನ್ನು

**ಭಿಕ್ಷುದೀಕ್ಷೆ** ವಹಿಸಬೇಕು. ಇದು ಎರಡುವಿಧ. ಮೊದಲು "ಶ್ರಮಣೇರ" ಎಂಬ ದೀಕ್ಷೆ. ಆ ಬಳಿಕ "ಉಪಸಂಪದಾ" ದೀಕ್ಷೆ. ಶ್ರಮಣೇರನಾಗತಕ್ಕವನು ಕಾಷಾಯವಸ್ತ್ರಗಳನ್ನು ಕೈಯಲ್ಲಿ ಹಿಡಿದು ಹತ್ತುಮಂದಿಗಳಿಗೆ ಕಡಮೆಯಿಲ್ಲದ ಭಿಕ್ಷುಗಳಿರತಕ್ಕ ಸಭೆಗೆ ಬಂದು ಅವರಲ್ಲಿ ಅಪ್ಪಣೆ ಬೇಡಬೇಕು. ಶ್ರಮಣೇರನಾಗಿ ದೀಕ್ಷಾಪ್ರದಾನವಾಗಬಹುದೆಂದು ಅಪ್ಪಣೆಯಾದಮೇಲೆ ಅವನು ಕಾಷಾಯ ವಸ್ತ್ರಧಾರಣೆಮಾಡಿ ಹಿಂದೆಯೇ ತಿಳಿಸಿರುವ ರತ್ನತ್ರಯ ವಾಕ್ಯಗಳನ್ನು ಹೇಳಿ ಅಭಿವಂದಿಸಬೇಕು. ಆ ಬಳಿಕ ಉಪಾಧ್ಯಾಯನಾಗಿಯೋ ಆಚಾರ್ಯನಾಗಿಯೋ ಇರುವ ಭಿಕ್ಷುವೊಬ್ಬನನ್ನು ಅವನು ಶುಶ್ರೂಷೆಮಾಡಿ, ದಶಶೀಲಗಳೇ ಮುಂತಾದ ನಿಯಮಗಳನ್ನನುಸರಿಸಿ ಆರ್ಯಾಷ್ಟಾಂಗಿಕ ಮಾರ್ಗದ ಸಾಧನೆಗಳನ್ನು ಕಲಿಯಬೇಕು. ಶ್ರಮಣೇರ ದೀಕ್ಷೆಯು ಯುಕ್ತ ರೀತಿಯಲ್ಲಿ ನೆರವೇರಿದ ಬಳಿಕ ಉಪಸಂಪದಾ ದೀಕ್ಷೆಯು ದೊರೆಯು

ವುದು. ಉಪಸಂಪದಾ ದೀಕ್ಷೆಯು ದೊರೆಯಬೇಕಾದರೆ, ವಯಸ್ಸು ಇಪ್ಪತ್ತು ವರುಷಗಳಿಗೆ ಕಡಮೆಯಾಗಿರಕೂಡದು.

ಭಿಕ್ಷುಗಳು ಅನುಸರಿಸಬೇಕಾದ ನಿಯಮಗಳನ್ನೆಲ್ಲ ಬುದ್ಧನು ವಿಧಾಯಕಮಾಡಿದ್ದಾನೆ. ಅವುಗಳೆಲ್ಲ ವಿನಯಪಿಟಕದಲ್ಲಿವೆ.

**ಭಿಕ್ಷುಗಳು ಅನುಸರಿಸಬೇಕಾದ ನಿಯಮಗಳು**

ಆ ನಿಯಮಗಳು ನಾಲ್ಕು ಪಂಗಡಗಳಾಗಿ ವಿಭಾಗವಾಗಿವೆ. ಸಂಘದ ಸುವ್ಯವಸ್ಥೆಗೆ ಆವಶ್ಯಕವಾದ ನಿಯಮಗಳು; ರಾಗದ್ವೇಷಾದಿಗಳನ್ನು ದಮನಮಾಡುವುದಕ್ಕೆ ಆವಶ್ಯಕವಾದ ನಿಯಮಗಳು; ಆರ್ಯಾಷ್ಟಾಂಗಿಕ ಮಾರ್ಗವನ್ನನುಸರಿಸಿ ಸಿದ್ಧಿಹೊಂದುವುದರಲ್ಲಿ ಆವಶ್ಯಕವಾದ ಉಪದೇಶ ರೂಪದ ನಿಯಮಗಳು; ಆಹಾರ ವಸ್ತ್ರಾದಿಗಳೇ ಮುಂತಾದವುಗಳನ್ನು ದೊರೆಯಿಸಿಕೊಂಡು ಉಪಯೋಗಿಸುವುದರಲ್ಲಿ ಅನುಸರಿಸಬೇಕಾದ ನಿಯಮಗಳು; ಎಂದು ನಾಲ್ಕು ಪಂಗಡಗಳ ನಿಯಮಗಳಿವೆ. ಭಿಕ್ಷುಗಳೆಲ್ಲರೂ ಅವುಗಳನ್ನು ಪರಿಪಾಲಿಸಬೇಕೆಂದು ವಿಧಾಯಕವಾಗಿದೆ.

ಭಿಕ್ಷುಗಳು ಆ ನಾಲ್ಕು ಪಂಗಡಗಳ ನಿಯಮಗಳನ್ನೂ ಪರಿಪಾಲಿಸುತ್ತ, ಆರ್ಯಾಷ್ಟಾಂಗಿಕ ಮಾರ್ಗವನ್ನನುಸರಿಸಬೇಕು.

**ಭಿಕ್ಷುಗಳ ಕರ್ತವ್ಯಗಳು**

ಹಿಂದೆ ಬುದ್ಧನ ದಿನಚರಿಯಲ್ಲಿ ತಿಳಿಸಿರುವ ಕಾರ್ಯಕ್ರಮವನ್ನೇ ಅವರೂ ನೆರವೇರಿಸಬೇಕು. ಎಂದರೆ ಉಷಃಕಾಲಕ್ಕೆ ನಿದ್ರೆಯಿಂದೆದ್ದೆತ್ತು, ಪ್ರಯಾಣದಲ್ಲಿ ಅಥವಾ (ಪ್ರಯಾಣವಿಲ್ಲದ ದಿನ) ಧ್ಯಾನದಲ್ಲಿ ಮಧ್ಯಾಹ್ನದವರೆಗೂ ಕಾಲವನ್ನು ಕಳೆದು ಆಬಳಿಕ ಭಿಕ್ಷೆಗೆ ಹೋಗಿ ಒಪ್ಪತ್ತು ಮಾತ್ರವೇ (ಮಧ್ಯಾಹ್ನದ ವೇಳೆಗೆ) ಭೋಜನ ಮಾಡಬೇಕು. ಭಿಕ್ಷವೆತ್ತುವಾಗ ತಲೆತಗ್ಗಿಸಿಕೊಂಡು ಮೌನದಿಂದಿರಬೇಕು. ಭಿಕ್ಷವನ್ನು ನೀಡಿದವರನ್ನು ಆಕ್ಷೇಪಿಸಕೂಡದು. ಬಿಸಿಲು ತಂಪುವವರೆಗೂ ಗ್ರಂಥಾವಲೋಕನ ಮಾಡು

ತ್ತಿದ್ದು ಆ ಬಳಿಕ ಧರ್ಮಬೋಧೆ ಮಾಡಬೇಕು. ಸಾಯಂಕಾಲ ವಾದಮೇಲೆ ಧಾರ್ಮಿಕ ವಿಚಾರಗಳನ್ನು ಚರ್ಚಿಸಿ ಶಿಷ್ಯರ ಸಂದೇಹ ಗಳನ್ನು ನಿವೃತ್ತಿಮಾಡಬೇಕು. ಮೂರು ಕಾಷಾಯ ವಸ್ತ್ರಗಳು, ಒಂದು ನಡುಕಟ್ಟು, ಒಂದು ಭಿಕ್ಷಾಪಾತ್ರೆ, ಒಂದು ಸೂಜಿ, ನೀರನ್ನು ಶೋಧಿಸುವ ಒಂದು ಬಟ್ಟೆ, ಒಂದು ಕ್ಷೌರದ ಕತ್ತಿ ಇವು ಎಂಟರ ಹೊರತು ಮತ್ತಾವ ಸ್ವತ್ತೂ ಭಿಕ್ಷುವಿಗಿರಕೂಡದೆಂಬುದು ಬುದ್ಧನು ಏರ್ಪಡಿಸಿರುವ ನಿಯಮ. ಅಮಾವಾಸ್ಯೆಯ ದಿನವೂ, ಹುಣ್ಣಿಮೆಯ ದಿನವೂ ಭಿಕ್ಷುಗಳ ಗೋಷ್ಠಿಯು ನಡೆಯಬೇಕು. ಆಗ ಸ್ಥವಿರನೆಂಬ ಹಿರಿಯ ಭಿಕ್ಷುವು, ಭಿಕ್ಷುಗಳ ಕರ್ತವ್ಯಗಳನ್ನು ಒಂದೊಂದಾಗಿ ಸೂಚಿಸಿ, "ನೀವು ಇದನ್ನು ನೆರವೇರಿಸಿರುವಿರಾ?" ಎಂದು ಮೂರು ಮೂರು ಸಲ ಕೇಳಬೇಕು. ಭಿಕ್ಷುಗಳಲ್ಲಿ ಯಾರಾದರೂ ಯಾವುದಾದರೂ ವಿಚಾರಗಳಲ್ಲಿ ತಪ್ಪಿ ನಡೆದಿದ್ದರೆ ಅವರು ತಮ್ಮ ಅಪರಾಧವನ್ನು ಒಪ್ಪಿಕೊಳ್ಳಬೇಕು. ಸ್ಥವಿರನು ಆ ಅಪರಾಧಕ್ಕೆ ತರ್ಜನೆಯ ದಂಡನೆ ಯನ್ನಾಗಲಿ, ಸ್ವಲ್ಪಕಾಲ ಭಿಕ್ಷುದೀಕ್ಷೆಯನ್ನು ತಪ್ಪಿಸುವ ದಂಡನೆಯ ನ್ನಾಗಲಿ, ಅಥವಾ (ಭಿಕ್ಷುದೀಕ್ಷೆಯಲ್ಲಿರಲು ಅಪರಾಧಿಯು ಅನರ್ಹ ನೆಂದು ತೀರ್ಮಾನಿಸಿ ಅವನನ್ನು ಹೊರಡಿಸುವ) ಬಹಿಷ್ಕಾರದ ದಂಡ ನೆಯನ್ನಾಗಲಿ ಆ ಆ ಅಪರಾಧದ ಗುರುತ್ವಕ್ಕನುಗುಣವಾಗಿ ವಿಧಿಸ ಬಹುದು.

ಭಿಕ್ಷುಗಳಿಗೂ ಉಪಾಸಕರಿಗೂ ವಿಧಿನಿಷೇಧಗಳ ರೂಪದ ನಿಯಮಗಳನ್ನೇರ್ಪಡಿಸಿರುವುದರ ಜೊತೆಗೆ ಗುರುಶಿಷ್ಯರು, ಸ್ವಾಮಿ

**ಸದ್ವರ್ತನೆಯ ನಿಯಮಗಳು**

ಭೃತ್ಯರು, ಪತಿಪತ್ನಿಯರು, ಹಿರಿಯರು ಕಿರಿಯರು ಮುಂತಾದವರು ಪರಸ್ಪರವಾಗಿ ಹೇಗೆ ವರ್ತಿಸ ಬೇಕೆಂಬ ವಿಷಯದಲ್ಲಿಯೂ ಬುದ್ಧನು ಉತ್ತಮ ವಿಧದ ನಿಯಮಗಳನ್ನೇರ್ಪಡಿಸಿದ್ದಾನೆ. ಅವು ಸಮಸ್ತರಿಗೂ ಉಪಾದೇಯವಾಗಿವೆ. ಒಟ್ಟಿನಲ್ಲಿ ಆ ನಿಯಮಗಳ ಸಾರಾಂಶವೇನೆಂದರೆ:—

ತಾಯಿ ತಂದೆಗಳು ಮಕ್ಕಳನ್ನು ತಿದ್ದಿ ಅವರು ಸನ್ಮಾರ್ಗಾವಲಂಬಿಗಳಾಗುವಂತೆಯೂ, ದುರ್ಮಾರ್ಗ ಪರಾಙ್ಮುಖರಾಗಿರುವಂತೆಯೂ ಮಾಡಬೇಕು. ಅವರು ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಿ ಅವರಿಗೆ ಸಹಾಯ ಮಾಡುತ್ತ ಪ್ರೀತಿಯಿಂದ ಅವರ "ಭರಣ ಪೋಷಣ"ಗಳನ್ನು ನಡೆಯಿಸಬೇಕು.

ಮಕ್ಕಳು ತಾಯಿತಂದೆಗಳಲ್ಲಿ ವಿಧೇಯರಾಗಿದ್ದು ಪ್ರೀತಿಭಕ್ತಿಗಳಿಂದ ಕೂಡಿ ಅವರನ್ನು ಸೇವಿಸಬೇಕು. ಅವರು ತಮ್ಮ ತಾಯಿತಂದೆಗಳ ಸ್ವತ್ತನ್ನು ಪೋಲು ಮಾಡಕೂಡದು. ರೋಗ ಬಂದಾಗಲೂ, ಮುಪ್ಪಿನಲ್ಲಿಯೂ ತಾಯಿತಂದೆಗಳನ್ನು ಮಕ್ಕಳು ಉಪಚರಿಸಿ ಕಾಪಾಡಬೇಕು. ಮಕ್ಕಳು ವಂಶಕ್ಕೆ ಭೂಷಣಪ್ರಾಯರಾಗಬೇಕು.

ಆಚಾರ್ಯನು ಶಿಷ್ಯರಿಗೆ ಸದ್ವಿದ್ಯೆಯನ್ನೂ ಸದ್ಗುಣಗಳನ್ನೂ ಕಲಿಸಬೇಕು; ತನ್ನಿಂದ ಸಾಧ್ಯವಿರುವ ಮಟ್ಟಿಗೂ ನಿರ್ವಂಚನೆಯಾಗಿ ಅವರಿಗೆ ಕಲೆಗಳನ್ನೂ ಶಾಸ್ತ್ರಗಳನ್ನೂ ಬೋಧಿಸಬೇಕು; ಅಲ್ಲದೆ, ಅವರನ್ನು ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

ಶಿಷ್ಯರು ಗುರುವಿನಲ್ಲಿ ಗೌರವವನ್ನು ತೋರಿಸಿ ಏಕಾಗ್ರಚಿತ್ತರಾಗಿ ಆತನ ಬೋಧನೆಯನ್ನು ಗ್ರಹಿಸಿ ವಿದ್ಯಾರ್ಜನೆಮಾಡಬೇಕು.

ಗಂಡನು ಹೆಂಡತಿಯಲ್ಲಿ ದಾಕ್ಷಿಣ್ಯಪರನಾಗಿ ಪ್ರೀತಿಯಿಂದ ವರ್ತಿಸಬೇಕು. ಗಂಡನು ಹೆಂಡತಿಯನ್ನು ಸನ್ಮಾನಿಸಿ ಅವಳಿಗೆ ಬೇಕಾದ ವಸ್ತ್ರಾಭರಣಗಳೇ ಮುಂತಾದವುಗಳನ್ನು ತಂದುಕೊಟ್ಟು ಸಂತೋಷಪಡಿಸಬೇಕು.

ಹೆಂಡತಿಯು ಗೃಹಕೃತ್ಯಗಳನ್ನು ವಿಚಕ್ಷಣೆಯಿಂದ ನೋಡಿಕೊಳ್ಳುತ್ತ ಬಂಧುಗಳನ್ನೂ, ಮಿತ್ರರನ್ನೂ ಆದರದಿಂದ ಸತ್ಕರಿಸಬೇಕು; ತನ್ನ ಗಂಡನಲ್ಲಿ ಪ್ರೀತ್ಯಾದರಗಳನ್ನು ತೋರಿಸಿ ಗೃಹಿಣೀಧರ್ಮವನ್ನು ನಿರಾಲಸ್ಯದಿಂದ ಸರಿಯಾಗಿ ಪರಿಪಾಲಿಸಬೇಕು; ತನ್ನ ಗಂಡನ ಸ್ವತ್ತುಗಳನ್ನು ಪೋಲುಮಾಡದೆ ಜಾಗರೂಕಳಾಗಿರಬೇಕು.

ಮಿತ್ರರು ಪರಸ್ಪರವಾಗಿ ಪ್ರೀತಿಗೌರವಗಳಿಂದ ವರ್ತಿಸಬೇಕು. ಪ್ರತಿಯೊಬ್ಬನೂ ತನ್ನಲ್ಲಿ ಮಿತ್ರನು ಹೇಗೆ ನಡೆದುಕೊಳ್ಳಬೇಕೆಂದು ಬಯಸುವನೋ ತಾನೂ ತನ್ನ ಮಿತ್ರನಲ್ಲಿ ಹಾಗೆಯೇ ವರ್ತಿಸಬೇಕು. ಮಿತ್ರರು ಪರಸ್ಪರವಾಗಿ ಅಮಾತ್ಯ ರೂಪದಿಂದಿದ್ದು ಬುದ್ಧಿವಾದ ಹೇಳುತ್ತ, ವಿನಯ ಶೀಲರಾಗಿ ವರ್ತಿಸಬೇಕು, ಪ್ರತಿಯೊಬ್ಬನೂ ಆಪತ್ಕಾಲದಲ್ಲಿ ತನ್ನ ಮಿತ್ರನಿಗೆ ನೆರವಾಗಬೇಕು. ಕಷ್ಟಬಂದಾಗ ಕೈಬಿಡದವನೇ ಸನ್ಮಿತ್ರ.

ಯಜಮಾನನು ಸೇವಕರ ಯೋಗಕ್ಷೇಮಗಳನ್ನು ನೋಡಿಕೊಳ್ಳಬೇಕು; ಅವರ ಶಕ್ತಿಗೆ ಮೀರಿದ ಕೆಲಸವನ್ನು ಮಾಡಿಸಕೂಡದು. ಅವನು ಅವರಿಗೆ ಭೋಜನ ವೇತನಗಳನ್ನು ಸರಿಯಾಗಿ ನಡೆಯಿಸಬೇಕು. ಅವರಿಗೆ ರೋಗಬಂದಾಗ ಶುಶ್ರೂಷೆಮಾಡಿ ಅಥವಾ ಶುಶ್ರೂಷೆ ಮಾಡಿಸಿ ಉಚಿತವಾಗಿ ಸಹಾಯ ಮಾಡಬೇಕು. ಅಸಾಧಾರಣ ರೀತಿಯಲ್ಲಿ ತನಗೆ ಬಂದ ಹೆಚ್ಚಿನ ಲಾಭದಲ್ಲಿ ಅವರಿಗೊಂದು ಭಾಗವನ್ನು ಸಲ್ಲಿಸಬೇಕು. ಅಲ್ಲದೆ ಯಜಮಾನನು ಸೇವಕರಿಂದ ದುಡಿಸಿಕೊಳ್ಳುವುದರಲ್ಲಿ ತೋರಿಸುವ ಆದರವನ್ನೇ ಅವರಿಗೆ ತಕ್ಕಷ್ಟು ವಿರಾಮ ದಿನಗಳನ್ನು ಕೊಡುವುದರಲ್ಲಿಯೂ ತೋರಿಸಬೇಕು.

ಸೇವಕರು ಯಜಮಾನನ ಕೆಲಸದಲ್ಲಿ ಶ್ರದ್ಧಾಸಕ್ತಿಗಳನ್ನು ತೋರಿಸಿ ಹರ್ಷಚಿತ್ತರಾಗಿ ಕೆಲಸ ಮಾಡಬೇಕು. ಅವರೆಂದಿಗೂ ತಮ್ಮ ಯಜಮಾನನನ್ನು ದೂರಬಾರದು.

ಉಪಾಸಕರು ಭಿಕ್ಷುಗಳಿಗೆ ಮನಃಪೂರ್ವಕವಾಗಿ ಮೈತ್ರಿಯನ್ನು ತೋರಿಸಿ, ಅವರನ್ನು ಆದರಿಸಬೇಕು; ಅಲ್ಲದೆ ಅವರನ್ನು ಪ್ರೀತಿಯಿಂದ ಮನೆಗೆ ಬರಮಾಡಿಕೊಂಡು ಅವರ ದೇಹರಕ್ಷಣೆಗೆ ಬೇಕಾದ ಆಹಾರ ಮುಂತಾದವನ್ನು ಕೊಟ್ಟು ಉಪಚರಿಸಬೇಕು.

ಭಿಕ್ಷುಗಳು ಉಪಾಸಕರಲ್ಲಿ ದಯೆಯನ್ನು ತೋರಿ ಧರ್ಮಬೋಧೆ ಮಾಡಿ ಮೈತ್ರಿಯಿಂದಿರಬೇಕು. ಅವರ ಸಂದೇಹಗಳನ್ನು ನಿವಾರಣೆಮಾಡಿ ಅವರಿಗೆ ದುಃಖನಿರೋಧದ ಮಾರ್ಗವನ್ನು ತೋರಿಸಬೇಕು.‡

‡ ಸಿಗಾಲೋವಾದ ಸುತ್ತವನ್ನು ನೋಡಿ.

**ಕೆಲವು ಉಪದೇಶ ವಾಣಿಗಳು**

ಬೌದ್ಧರಿಗೂ, ಬೌದ್ಧರಲ್ಲದವರಿಗೂ ಉಭಯತ್ರರಿಗೂ ಉಪಾದೇಯಗಳೆನಿಸಿರುವ ಅಮೋಘವಾದ ಉಪದೇಶ ವಾಣಿಗಳನ್ನು ಬುದ್ಧನು ಅನುಗ್ರಹಿಸಿದ್ದಾನೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಬಹುದಾಗಿದೆ:—

೧. ಮನಸ್ಸು ಪ್ರಸನ್ನವಾಗಿದ್ದರೆ ಸುಖವು ಛಾಯೆಯಂತೆ ಅನುಸರಿಸಿ ಬರುತ್ತದೆ.

೨. ಅವನು ನನ್ನನ್ನು ಬೈದನು, ಅವನು ನನ್ನನ್ನು ಹೊಡೆದನು, ಅವನು ನನ್ನನ್ನು ಸೋಲಿಸಿದನು, ಅವನು ನನ್ನನ್ನು ಮೋಸಗೊಳಿಸಿದನು, ಹೀಗೆಂದು ಕುದಿಯುವ ಮನಸ್ಸಿನಿಂದ ವೈರವು ತೊಲಗದು.

೩. ವೈರದಿಂದ ವೈರವು ಶಾಮ್ಯವಾಗದು ; ವೈರವು ಪ್ರೇಮದಿಂದಲೇ ಸೋತು ಶಾಂತವಾಗುವುದು ; ಇದೇ ಸನಾತನ ಧರ್ಮ.

೪. ಅನಿಷ್ಕಷಾಯ ಮನಸ್ಸಿನವನು ಕಾಷಾಯವನ್ನು ಧರಿಸಿ ಫಲವಿಲ್ಲ. ದಮನವಿಲ್ಲದವನ ಮನಸ್ಸಿನಿಂದ ಕಾಷಾಯಕ್ಕೆ ಅವಮಾನ.

೫. ದುಶ್ಛನ್ನವಾದ ಮನೆಯನ್ನು ಮಳೆಯ ನೀರು ಭೇದಿಸಿಕೊಂಡು ನುಗ್ಗುವಂತೆ ಅಭಾವಿತನ ಚಿತ್ತವನ್ನು ರಾಗವು ಭೇದಿಸಿಬಿಡುತ್ತದೆ.

೬. ಸುಚ್ಛನ್ನವಾದ ಮನೆಗೆ ಮಳೆಯ ಭಯವಿಲ್ಲ ; ಸಂಭಾವಿತನ ಚಿತ್ತಕ್ಕೆ ರಾಗದ್ವೇಷಗಳ ಭಯವಿಲ್ಲ.

೭. ಅಪ್ರಮಾದವು ಅಮೃತತ್ವಕ್ಕೆ ದಾರಿ; ಪ್ರಮಾದವು ಮರಣದ ಹೆಬ್ಬಾಗಿಲು.

೮. ಆಡಿದಂತೆ ಮಾಡದವನ ಮಾತುಗಳು ಬಣ್ಣವಿದ್ದರೂ ವಾಸನೆಯಿಲ್ಲದ ಹೂವಿನಂತೆ.

೯. ಗ್ರಾಮವಾಗಲಿ, ಅರಣ್ಯವಾಗಲಿ, ನೀರಾಗಲಿ, ನೆಲವಾಗಲಿ ಅರ್ಹತನೆಲ್ಲಿದ್ದರೆ ಅದೇ ಪಾವನವಾದ ಪುಣ್ಯಕ್ಷೇತ್ರ.

೧೦. ಅರಣ್ಯಗಳು ರಮ್ಯವಾದ ಸ್ಥಳಗಳು; ಏಕೆಂದರೆ ಶಾಂತಾತ್ಮರಿಗೆ ಅವುಗಳಿಂದ ಸಂತೋಷ.

೧೧. ಶುದ್ಧಶೀಲನನ್ನು ಹಿಂಸಿಸುವವನಿಗೆ ಪಾಪಸಂಘಟನೆಯು ಸ್ವತಸ್ಸಿದ್ಧ.

೧೨. ಮೃತ್ಯುವೆಂದರೂ, ದಂಡವೆಂದರೂ ಸಮಸ್ತರಿಗೂ ಭಯ; ಪ್ರತಿಯೊಬ್ಬರೂ ತಮ್ಮ ಉಪಮಾನವನ್ನೇ ಅನ್ವಯಿಸಿ ಪ್ರಾಣಿವಧೆಯನ್ನೂ, ಪ್ರಾಣಿಹಿಂಸೆಯನ್ನೂ ಬಿಡಬೇಕು.

೧೩. ನಿನ್ನಂತೆಯೇ ಇತರರಿಗೂ ಜೀವದಾಸೆಯುಂಟೆಂಬುದನ್ನು ನಿರಂತರವೂ ನೆನಪಿನಲ್ಲಿಡು.

೧೪. ನೀನು ಇತರರಲ್ಲಿ ವರ್ತಿಸಿದಂತೆ ಇತರರೂ ನಿನ್ನಲ್ಲಿ ವರ್ತಿಸುವರು.

೧೫. ಗೋಪಾಲಕನು ಗೋವುಗಳನ್ನು ಓಡಿಸಿಕೊಂಡು ಹೋಗುವಂತೆ ಜರಾಮರಣಗಳು ಆಯುಸ್ಸನ್ನು ಓಡಿಸಿಕೊಂಡು ಹೋಗುತ್ತದೆ.

೧೬. ನಗ್ನಚರ್ಯೆ, ಜಟೆ, ಪಂಕ, ಭಸ್ಮ ಮುಂತಾದವುಗಳಾವುವೂ ದುರಾಶೆಗಳಿಂದ ತುಂಬಿದವನನ್ನು ಶುದ್ಧಗೊಳಿಸಲಾರವು.

೧೭. ವಸ್ತ್ರಾಭರಣಗಳಿಂದ ದೇಹವನ್ನಲಂಕರಿಸಿಕೊಂಡಿದ್ದರೂ ಶಾಂತನೂ, ದಾಂತನೂ ಆಗಿರುವವನು ಪರಿಶುದ್ಧನಾದ ತಪಸ್ವಿಯೇ.

೧೮. ರಾಜರ ರಥಗಳೂ ಕಾಲವಶದಿಂದ ಜರ್ಝರಿತವಾಗುವುವು; ಅದರಂತೆಯೇ ಯುವಕನ ಶರೀರವೂ ಮುಪ್ಪಡಿಸಿ ಮುದುಡಿ ಹೋಗುವುದು; ಮುಪ್ಪಡಿಸಿ ಮುದುಡಿಕೊಳ್ಳದಿರುವುದು ಧರ್ಮವೊಂದೇ.

೧೯. ಮೂಢನ ಮಾಂಸವು ಬೆಳೆಯುತ್ತದೆ; ಅವನ ವಿವೇಕವು ನೆಲಗೆ ನಿಂತಿರುತ್ತದೆ.

೨೦. ನಮಗೇ ಅಹಿತವೆನಿಸಿರುವ ಅಸಾಧು ಕಾರ್ಯಗಳನ್ನೆಸಗುವುದು ಅತಿ ಸುಲಭ; ಹಿತಸಾಧಕವಾದ ಸತ್ಕಾರ್ಯಗಳನ್ನಾಚರಿಸುವುದು ಅತಿಕಷ್ಟ.

೨೧. ತನ್ನ ಬಲೆಗೆ ಬಿದ್ದು ತಾನೇ ಪಾಡುಪಡುವ ಬೇಡನಂತೆ ದುರಾಶಾಗ್ರಸ್ತರು ತಮ್ಮ ದುಷ್ಕಾರ್ಯಗಳಿಂದ ತಾವೇ ಕಷ್ಟಕ್ಕೆ ಗುರಿಯಾಗುವರು.

೨೨. ಪ್ರಜ್ಞೆಯಿಲ್ಲದೆ ಧ್ಯಾನವಿಲ್ಲ; ಧ್ಯಾನವಿಲ್ಲದೆ ಪ್ರಜ್ಞೆಯಿಲ್ಲ. ಧ್ಯಾನ ಪ್ರಜ್ಞೆಗಳೇ ನಿರ್ವಾಣಕ್ಕೆ ಮಾರ್ಗ.

೨೩. ಏಕಾಂತ ಪ್ರದೇಶವನ್ನು ಸಾರಿದ ಶಾಂತನಾದ ಭಿಕ್ಷುವು ಅಮಾನುಷ ಸುಖವನ್ನನುಭವಿಸುವನು.

೨೪. ಪಾಪ ವಿಮುಖನಾಗಿರುವವನು ಬ್ರಾಹ್ಮಣ; ಶಾಂತಿಪ್ರಿಯನಾಗಿರುವವನು ಶ್ರಮಣ; ನಿಷ್ಕಲ್ಮಷಚಿತ್ತನಾಗಿರುವವನು ಪರಿವ್ರಾಜಕ.

೨೫. ರಾಗದ್ವೇಷ ರಹಿತನಾಗಿ ದುರಹಂಕಾರ ದೂರನಾಗಿರುವವನಾವನೋ ಅವನೇ ಬ್ರಾಹ್ಮಣ.

೨೬. ವಿರೋಧಿಗಳ ಮಧ್ಯದಲ್ಲಿದ್ದೂ ದ್ವೇಷರಹಿತನಾವನೋ ಅವನೇ ಬ್ರಾಹ್ಮಣ.

೨೭. ಆಶೆಯನ್ನು ತೊರೆದು ಎಲ್ಲವೂ ಅಶಾಶ್ವತವೆಂದು ಭಾವಿಸುವವನಾವನೋ ಅವನೇ ಬ್ರಾಹ್ಮಣ.

೨೮. ಭೋಗಗಳನ್ನಪೇಕ್ಷಿಸದೆ ಧ್ಯಾನಮಗ್ನನಾಗಿರುವವನಾವನೋ ಅವನೇ ಬ್ರಾಹ್ಮಣ.

೨೯. ಪ್ರಾಣಿಗಳನ್ನು ಪ್ರಹರಿಸದೆ ಪ್ರೀತಿಯಿಂದಿರುವವನಾವನೋ ಅವನೇ ಬ್ರಾಹ್ಮಣ.

೩೦. ದುಷ್ಕಾರ್ಯಗಳಿಗೆ ಮನಸ್ಸು ಕೊಡದೆ ತ್ರಿಕರಣಶುದ್ಧನಾಗಿರುವವನಾವನೋ ಅವನೇ ಬ್ರಾಹ್ಮಣ.

೩೧. ಅಕ್ರೋಧನನೂ, ವ್ರತವಂತನೂ, ಶೀಲವಂತನೂ, ಶಾಂತನೂ ಆಗಿರುವವನಾವನೋ ಅವನೇ ಬ್ರಾಹ್ಮಣ.

**ಗೌತಮಬುದ್ಧನ ಮೇಲಣ ಆಕ್ಷೇಪಣೆಗಳು**

ಗೌತಮ ಬುದ್ಧನನ್ನು ಆಕ್ಷೇಪಿಸುವವರು ಮುಖ್ಯವಾಗಿ ಮೂರು ಅಂಶಗಳನ್ನು ಸೂಚಿಸುತ್ತಾರೆ: ಗೌತಮ ಬುದ್ಧನು ಬೋಧಿಸಿರುವ ನಿರ್ವಾಣವು ಶೂನ್ಯತೆಯ ಸರ್ವನಾಶವೆಂಬುದು ಮೊದಲನೆಯದು. ನಿರ್ವಾಣದ ಸ್ವಭಾವವೆಂದಿಗೂ ಈ ಬಗೆಯದಲ್ಲವೆಂಬ ಅಂಶವನ್ನು (ನಿರ್ವಾಣದ ವಿಚಾರವನ್ನು ಪ್ರಸ್ತಾವಿಸಿದಾಗ್ಗೆ) ಹಿಂದೆಯೇ ತಿಳಿಸಲಾಗಿದೆ. ವೇದಾಂತ ಮತದ ಮೇರೆಗೆ ನಿರೂಪಿಸಿರುವ ಜೀವನ್ಮುಕ್ತನ ಸ್ಥಿತಿಗೂ, ಬುದ್ಧನು ನಿರೂಪಿಸಿರುವ ನಿರ್ವಾಣಾಧಿಕಾರಿಯಾದ ಅರ್ಹತನ ಸ್ಥಿತಿಗೂ ವಿಶೇಷ ವ್ಯತ್ಯಾಸವೇನೂ ಇಲ್ಲ. ಶೂನ್ಯತೆಯನ್ನು ಪಡೆಯುವ ಸರ್ವನಾಶವನ್ನು ಮಾನವಜನ್ಮದ ಅಂತಿಮಧ್ಯೇಯವೆಂದು ಬುದ್ಧನು ಬೋಧಿಸಿದ್ದ ಪಕ್ಷದಲ್ಲಿ, ನಿರ್ವಾಣವು ದೇವಲೋಕ ನಿವಾಸಿಗಳಿಗೂ ದುರ್ಲಭವೆಂಬ ಆತನ ಮಾತುಗಳು ಮರುಳಾಟವೆನಿಸಿಕೊಳ್ಳುತ್ತಿದ್ದುವು. ಅಲ್ಲದೆ, ಕೋಟ್ಯಂತರ ಜನರೆಂದಿಗೂ ಬೌದ್ಧಮತವನ್ನವಲಂಬಿಸುತ್ತಲೂ ಇರಲಿಲ್ಲ. ಬುದ್ಧನು ಬೋಧಿಸಿರುವ ತತ್ತ್ವಗಳು ಉತ್ಸಾಹನಾಶಕವಾದ ನೈರಾಶ್ಯದಿಂದ ತುಂಬಿವೆಯೆಂದು ಹೇಳುವುದು ಎರಡನೆಯ ಆಕ್ಷೇಪಣೆ. ಬುದ್ಧನ ವಿಚಾರವಾಗಿ ಗ್ರಂಥಗಳನ್ನು ಬರೆದಿರುವ ಪಾಶ್ಚಿಮಾತ್ಯ ಲೇಖಕರಲ್ಲನೇಕರು ಈ ರೀತಿ ಆಕ್ಷೇಪಣೆ ಮಾಡಿದ್ದಾರೆ. ಜೀವನವು ದುಃಖಮಯವೆಂದು ಬುದ್ಧನು ಬೋಧಿಸಿರುವುದು ನಿಜ. ಆದರೆ ಜನರ ಮನಸ್ಸಿಗೆ ನೈರಾಶ್ಯಭಾವವನ್ನುಂಟುಮಾಡಿ ಅವರ ಉತ್ಸಾಹವನ್ನು ಕುಗ್ಗಿಸಬೇಕೆಂದು ಆತನ ಆಶಯವಾಗಿದ್ದಂತೆ ತೋರುವುದಿಲ್ಲ. ಐಹಿಕ ಜೀವನದ ಅನಿತ್ಯಸ್ವಭಾವವನ್ನು ಮನದಟ್ಟು ಮಾಡಿಕೊಟ್ಟು ನಿರ್ವಾಣದ ನಿತ್ಯಸುಖವನ್ನು ಪಡೆಯಲು ಉತ್ಸಾಹವನ್ನು ಹುಟ್ಟಿಸಿ ಜನರನ್ನು ಹುರಿದುಂಬಿಸಬೇಕೆಂಬುದೇ ಆತನ ಅಭಿಪ್ರಾಯವಾಗಿದ್ದಿತೆಂದು ಧಾರಾಳವಾಗಿ ಹೇಳಬಹುದಾಗಿದೆ. ಬುದ್ಧನು ನಾಸ್ತಿಕನೆಂಬುದು ಮೂರನೆಯ ಆಕ್ಷೇಪಣೆ. ಇದಕ್ಕೆ

ಸಮಾಧಾನ ಹೇಳುವುದಕ್ಕೆ ಮುಂಚೆ ಗಮನಾರ್ಹವಾದೆರಡು ಮುಖ್ಯ ಸಂಗತಿಗಳನ್ನು ಸೂಚಿಸುವುದು ಆವಶ್ಯಕ.

**ಗಮನಾರ್ಹವಾದೆರಡು ಮುಖ್ಯ ಸಂಗತಿಗಳು**

ಬುದ್ಧನು ನಾಸ್ತಿಕನೇ ಎಂಬುದನ್ನು ವಿಚಾರಮಾಡುವುದಕ್ಕೆ ಮೊದಲು, ಮೇಲೆ ಹೇಳಿದಂತೆ ಎರಡು ಅಂಶಗಳನ್ನು ನಾವು ಗಮನಿಸಬೇಕಾದುದು ಅತ್ಯಾವಶ್ಯಕ. ಮೊದಲನೆಯದು, ಗೌತಮಬುದ್ಧನ ಬೋಧನೆಯ ನಿಜಸ್ವರೂಪವೂ ಪೂರ್ಣ ವಿವರಗಳೂ ನಮಗೆ ತಿಳಿಯದಿರುವುದು. ಬುದ್ಧನು ತಾನೇ ಯಾವ ಗ್ರಂಥವನ್ನೂ ಬರೆಯಲಿಲ್ಲ. ಆತನ ಬೋಧೆಯನ್ನು ಕೇಳಿದ ಶಿಷ್ಯರುಗಳು ಬರೆದಿಟ್ಟಿರುವುದೇ ಆತನು ಉಪದೇಶಿಸಿದುದೇನೆಂಬುದಕ್ಕೆ ನಮಗಿರುವ ಆಧಾರ. ಗೌತಮ ಬುದ್ಧನು ನಿರ್ವಾಣಹೊಂದಿದ ತರುವಾಯ ಸ್ವಲ್ಪಕಾಲವು ಕಳೆದಮೇಲೆ ಅವರು ತಮಗೆ ನೆನಪಿದ್ದ ಅಂಶಗಳನ್ನು ಬುದ್ಧನ ಉಪದೇಶವೆಂದು ಕ್ರೋಢೀಕರಿಸಿ ಸಂಗ್ರಹ ಮಾಡಿಟ್ಟರು. ಆದಕಾರಣ ಅವು ಅಪೂರ್ಣವಾಗಿಯೂ, ನ್ಯೂನಾತಿರೇಕಗಳಿಂದ ತುಂಬಿಯೂ ಇರಲೇಬೇಕು. ಬುದ್ಧನು ಬೋಧಿಸಿದ ಅನೇಕ ಸಂಗತಿಗಳು ಅವುಗಳಲ್ಲಿ ಸೇರದೆ ಬಿಟ್ಟುಹೋಗಿರಬಹುದು. ಆತನು ಬೋಧಿಸದೆಯೇ ಇದ್ದ ಸಂಗತಿಗಳೂ ಅವುಗಳಲ್ಲಿ ಸೇರಿರಬಹುದು. ಅಲ್ಲದೆ ಬುದ್ಧನು ಬೋಧಿಸಿದ್ದುದೇ ಒಂದಾದರೆ ಶಿಷ್ಯರು ಸಂಗ್ರಹಿಸಿ ಬರೆದಿಟ್ಟುದೇ ಒಂದಾಗಿರಬಹುದು. ಈ ಅಂಶವನ್ನು ಸ್ಪಷ್ಟಪಡಿಸುವ ಸಂಗತಿಯೂ ಒಂದಿದೆ: ಬುದ್ಧನು ನಿರ್ವಾಣ ಹೊಂದಿದಮೇಲೆ ಕೆಲವರು ಶಿಷ್ಯರು ರಾಜಗೃಹಕ್ಕೆ ಬಂದು ಬುದ್ಧನ ಉಪದೇಶಗಳೆಂದು ಕೆಲವು ಅಂಶಗಳನ್ನು ನಿಷ್ಕರ್ಷೆ ಮಾಡಿಟ್ಟುಕೊಂಡಿದ್ದರಂತೆ. ಆ ಬಳಿಕ ಪುರಾಣನೆಂಬ ಶಿಷ್ಯನು ಅಲ್ಲಿಗೆ ಬಂದು ತಾನು ಅವುಗಳನ್ನು ಒಪ್ಪುವುದಿಲ್ಲವೆಂದೂ ಗುರುಪುಂಗವನಾದ ಬುದ್ಧನಿಂದ ತನಗೆ ತಿಳಿಯಬಂದಿದ್ದ ಅಂಶಗಳೇ ತನಗೆ ಮಾನ್ಯವೆಂದೂ ಹೇಳಿದ

ನಂತೆ.* ಇದನ್ನು ಪರ್ಯಾಲೋಚಿಸಿ ನೋಡಿದರೆ, ಬುದ್ಧನ ಶಿಷ್ಯರು ಬುದ್ಧನ ಉಪದೇಶವೆಂದು ಬರೆದಿರುವುದೆಲ್ಲ ಪೂರ್ತಿಯಾಗಿ ಸರಿಯೆಂದೂ, ಆತನು ಉಪದೇಶಿಸಿದುದೆಲ್ಲ ಅವರು ಬರೆದಿರುವಷ್ಟು ಮಾತ್ರವೇ ಎಂದೂ ಹೇಳಲಾಗುವುದಿಲ್ಲ. ಇದಕ್ಕೆ ವಿರುದ್ಧವಾಗಿ ಸಿದ್ಧಾಂತಮಾಡಿದರೆ, ಬುದ್ಧನ ವಿಚಾರದಲ್ಲಿ ಬಹಳ ಅನ್ಯಾಯ ಮಾಡಿದಂತಾಗುವುದೆಂಬ ಅಂಶವು ಸ್ಪಷ್ಟವಾಗಿಯೇ ಇದೆ. ಇದು ನಾವು ಗಮನಿಸಬೇಕಾದ ಮೊದಲನೆಯ ಅಂಶವಾಗಿದೆ.

ಗೌತಮಬುದ್ಧನು ದೇಶಕಾಲವರ್ತಮಾನಗಳನ್ನೂ, ಶಿಷ್ಯರ ಗ್ರಹಣಶಕ್ತಿಯನ್ನೂ ನೋಡಿಕೊಂಡು ಅವರಿಗೆ ಯಥಾಯೋಗ್ಯವಾಗಿ ಬೋಧಿಸಲು ತನಗೆ ಯುಕ್ತಕಂಡಷ್ಟನ್ನು ಮಾತ್ರವೇ ಬೋಧಿಸಿದನೇ ಹೊರತು, ತನ್ನಲ್ಲಿದ್ದ ತತ್ತ್ವಭಂಡಾರವನ್ನು ನಿಶ್ಶೇಷವಾಗಿ ಅವರಿಗೆ ಆತನು ಒಪ್ಪಿಸಲಿಲ್ಲವೆಂಬುದು ನಾವು ಗಮನಿಸಬೇಕಾದ ಎರಡನೆಯ ಅಂಶವಾಗಿದೆ. ಇದನ್ನು ವ್ಯಕ್ತಪಡಿಸುವ ಸಂಗತಿಯೂ ಒಂದಿದೆ: ಒಮ್ಮೆ ಗೌತಮಬುದ್ಧನು ಒಂದು ಶಿಂಶುಪಾವೃಕ್ಷದ ಕೆಳಗೆ ಕುಳಿತಿದ್ದನಂತೆ. ಆತನು ಕೆಲವು ಎಲೆಗಳನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ತನ್ನ ಬಳಿಯಲ್ಲಿ ಗುಂಪುಸೇರಿದ್ದ ಶಿಷ್ಯರನ್ನು ಕುರಿತು, "ಮರದಮೇಲೆ ಇನ್ನೂ ಎಲೆಗಳಿವೆಯೋ, ಇಲ್ಲವೇ ಮರದಲ್ಲಿದ್ದುವು ಇಷ್ಟೇ ಎಲೆಗಳೋ?" ಎಂದು ಕೇಳಿದನಂತೆ. ಅವರು, "ಮರದಮೇಲೆ ಇನ್ನೂ ಅಪರಿಮಿತ ಸಂಖ್ಯೆಯ ಎಲೆಗಳಿವೆ" ಎಂದರು. ಆ ಬಳಿಕ ಬುದ್ಧನು "ಇದೇ ರೀತಿಯಲ್ಲಿ ನಾನು ನಿಮಗೆ ತಿಳಿಸಿರುವುದಕ್ಕಿಂತಲೂ ಅನೇಕ ತತ್ತ್ವಗಳು ನನಗೆ ತಿಳಿದಿವೆ. ಪ್ರಿಯ ಶಿಷ್ಯರಿರಾ, ನಾನೇಕೆ ಅವು

---

* ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಸಂಸ್ಕೃತ ಭಾಷೆಯ ಪ್ರಾಧ್ಯಾಪಕ ಪದವಿಯಲ್ಲಿದ್ದು ಕೆಲಸದಿಂದ ವಿಶ್ರಾಂತರಾಗಿದ್ದ ಶ್ರೀಮಾನ್ ಎಂ. ಹಿರಿಯಣ್ಣನವರು ಬರೆದಿರುವ *Outlines of Indian Philosophy* ಎಂಬ ಗ್ರಂಥದ ೧೩೪ನೆಯ ಪುಟವನ್ನು ನೋಡಿ.

ಗಳನ್ನು ನಿಮಗೆ ತಿಳಿಸಿಲ್ಲವೆಂಬುದುದು ಗೊತ್ತುಂಟೆ? ನಿಮ್ಮ ಶೀಲ ಸೌರಭವು ಹೆಚ್ಚುವಂತೆ ಮಾಡಿ, ಕ್ಷಣಭಂಗುರವಾದ ಐಹಿಕ ವಿಚಾರ ಗಳಿಂದ ನಿಮ್ಮ ಮನಸ್ಸನ್ನು ತಿರುಗಿಸಿ, ತೃಷ್ಣೆಯನ್ನಡಗಿಸಿ, ಪ್ರಜ್ಞಾ ಲಾಭದಿಂದ ನಿರ್ವಾಣ ಸುಖವನ್ನು ಪಡೆಯುವಂತೆ ಮಾಡಲು ಅವುಗಳ ಆವಶ್ಯಕತೆಯಿಲ್ಲ. ಪ್ರಿಯ ಭಿಕ್ಷುಗಳಿರಾ! ಆದಕಾರಣ, ನಾನು ನಿಮಗೆ ಅವುಗಳನ್ನು ಹೇಳಿಲ್ಲ" ಎಂದನು.

ಆದುದರಿಂದ, ಬುದ್ಧನು ಹೇಗೆ ಬೋಧಿಸಿದನೋ ಹಾಗೆ ಅಲ್ಪ ಸ್ವಲ್ಪವೂ ವ್ಯತ್ಯಾಸವಿಲ್ಲದೆ ನಮಗೆ ಸಮಸ್ತ ಸಂಗತಿಗಳೂ ತಿಳಿದಿಲ್ಲ ದಿರುವುದೊಂದು, ಬುದ್ಧನು ತನಗೆ ತಿಳಿದಿದ್ದುದನ್ನೆಲ್ಲ ಶಿಷ್ಯರಿಗೆ ಹೇಳ ದಿದ್ದುದೊಂದು, ಇವೆರಡು ಕಾರಣಗಳನ್ನೂ ನೋಡಿದರೆ, ಈಗ ನಮಗೆ ದೊರೆತಿರುವಷ್ಟೇ ಸಾಧನಗಳಿಂದ ಬುದ್ಧನ ಬೋಧನೆಯ ಸ್ವಭಾವವನ್ನು ಸರಿಯಾಗಿಯೂ, ಸಂಪೂರ್ಣವಾಗಿಯೂ ನಿರ್ಧರಿ ಸುವುದು ಅಸಾಧ್ಯವೇ ಸರಿ.

**ಬುದ್ಧನು ನಾಸ್ತಿಕನೇ ಎಂಬ ವಿಚಾರ**

ಬುದ್ಧನು ನಾಸ್ತಿಕನೆಂದು ವಾದಿಸುವವರು ಸಾಮಾನ್ಯವಾಗಿ ಮೂರು ಕಾರಣಗಳನ್ನು ಹೇಳುತ್ತಾರೆ: ಬುದ್ಧನು ವೇದಪ್ರಮಾಣವನ್ನಂಗೀಕರಿಸಲಿಲ್ಲವೆಂಬುದು ಮೊದಲನೆಯ ಕಾರಣ. ಆತನು ಸನಾತನ ಧರ್ಮವಿರುದ್ಧವಾದುದನ್ನು ಬೋಧಿಸಿದನೆಂಬುದು ಎರಡನೆಯ ಕಾರಣ. ಆತನು ನಿರೀಶ್ವರವಾದಿ ಯೆಂಬುದು ಮೂರನೆಯ ಕಾರಣ.

ಬುದ್ಧನು ವೇದಪ್ರಾಮಾಣ್ಯವನ್ನು ಬೋಧಿಸಲಿಲ್ಲವೆಂಬುದು ನಿಜ. ತನ್ನ ಶಿಷ್ಯರು ಕೂಡ ಗುರುವಚನಗಳೆಂಬ ಅಂಧಶ್ರದ್ಧೆಯಿಂದ ತನ್ನ ಉಪದೇಶವಾವುದನ್ನೂ ನಂಬದೆ ಸ್ವಾನುಭವದ ಪರೀಕ್ಷೆಯಿಂದ ಸೂಕ್ತವೆಂದು ತೋರಿದುದನ್ನು ಮಾತ್ರವೇ ಅಂಗೀಕರಿಸಬೇಕೆಂದು ತಿಳಿಸಿದವನು ಬುದ್ಧನು. ಆದಕಾರಣ, ಗ್ರಂಥಗೌರವದಿಂದ ಕೂಡಿ

ವೇದಗಳು ಪ್ರಮಾಣವೆಂದು ಆತನು ಬೋಧಿಸದೆ ಹೋದುದು ಸಹಜ ವಾಗಿಯೇ ಇದೆ. ಆದರೆ, ವೇದಗಳ ಪ್ರಾಮಾಣ್ಯವನ್ನು ಬೋಧಿಸ ಲಿಲ್ಲವೆಂಬ ಕಾರಣಕ್ಕಾಗಿ ಆತನನ್ನು ನಾಸ್ತಿಕನೆನ್ನುವುದು ಸರಿಯಲ್ಲ.

ಬುದ್ಧನು ಸನಾತನ ಧರ್ಮವಿರುದ್ಧವಾದುದನ್ನು ಬೋಧಿಸಿದ್ದಾ ನೆಂಬ ವಿಚಾರ. ಬುದ್ಧನು ಹೇಳಿದವುಗಳೆಂದು ಈಗ ನಮಗೆ ದೊರೆ ಯುವ ಅಂಶಗಳನ್ನು ನೋಡಿದರೆ ವೇದಾಂತ ಮತವಿರುದ್ಧವಾದ ಕೆಲವು ವಿಷಯುಗಳು ಅವುಗಳಲ್ಲಿ ಅಡಕವಾಗಿರುವುದು ನಿಜ. ಆದಾಗ್ಗೂ ನಾವು ಹಿಂದೆಯೇ ತಿಳಿಸಿರುವಂತೆ ಒಟ್ಟನಲ್ಲಿ ಬೌದ್ಧಮತದ ಅನೇಕ ತತ್ತ್ವಗಳು ಉಪನಿಷತ್ತುಗಳ ತತ್ತ್ವಗಳನ್ನೇ ಹೋಲುತ್ತವೆ. ಕರ್ಮವಿಪಾಕ, ಜನನಮರಣಗಳು ದುಃಖಮಯವೆಂಬ ವಿಚಾರ, ಪುನರ್ಜನ್ಮವಿಚಾರ, ನಿರ್ವಾಣ ವಿಚಾರ, ಕರ್ಮಬಂಧವು ಅವಿದ್ಯೆಯ ಪರಿಣಾಮ ಫಲವೆಂಬ ವಿಚಾರ, ಇವುಗಳಲ್ಲೆಲ್ಲ ಬೌದ್ಧಮತಕ್ಕೂ ವೇದಾಂತಮತಕ್ಕೂ ಸಾಮ್ಯವಿದೆ. ಮನುಸ್ಮೃತಿ, ಕಠೋಪನಿಷತ್ತು, ಛಾಂದೋಗ್ಯೋಪನಿಷತ್ತು, ಭಗವದ್ಗೀತೆ ಮುಂತಾದವುಗಳಲ್ಲಿರುವ ಅಂಶಗಳನ್ನು ನೆನಪಿಗೆ ತರುವ ಅನೇಕ ಶ್ಲೋಕಗಳು ಧರ್ಮಪದ ಮುಂತಾದವುಗಳಲ್ಲಿವೆ. ಬುದ್ಧನು ತನ್ನ ಮತದ ಅನೇಕ ತತ್ತ್ವ ಗಳನ್ನು ಉಪನಿಷತ್ತುಗಳಿಂದಲೇ ತೆಗೆದುಕೊಂಡಿದ್ದಾನೆಂದು ಹಲವರು ಮಹನೀಯರು ಅಭಿಪ್ರಾಯಪಟ್ಟಿದ್ದಾರೆ.* ಯಜ್ಞಗಳಲ್ಲಿ ಪ್ರಾಣಿ

---

* ಸ್ಥಳ ಸಂಕೋಚದಿಂದ ಇಲ್ಲಿ ಐದುಮಂದಿ ಮಹನೀಯರ ಅಭಿಪ್ರಾಯ ಗಳನ್ನು ಮಾತ್ರವೇ ಉದಾಹರಿಸಲಾಗಿದೆ:—

(1) "Buddhism was not a rebel of Hinduism. The Buddha came to renew the religion of the Rishis Like them he realised the spiritual value of communion with nature." T. L. Vaswani.

ಹಿಂಸೆಯನ್ನು ಆತನು ನಿಷೇಧಿಸಿದ ಕಾರಣಕ್ಕಾಗಿ ಹಲವರು ಆತನನ್ನು ಸನಾತನ ಧರ್ಮಕ್ಕೆ ವಿರೋಧಿಯೆಂದು ದೂಷಿಸಿದ್ದಾರೆ. ಉಪನಿಷತ್ತುಗಳೇ ಯಜ್ಞಗಳನ್ನು ಹಳಿದಿರುವುದನ್ನು ಅವರು ಗಮನಿಸದೆ ಅನ್ಯಾಯವಾಗಿ ಬುದ್ಧನನ್ನು ಆ ರೀತಿ ದೂಷಿಸಿರುವರು. ಮುಂಡಕೋಪನಿಷತ್ತಿನಲ್ಲಿ, "ಹದಿನಾರು ಮಂದಿ ಋತ್ವಿಜರಿಂದಲೂ, ದೀಕ್ಷಿತನಾದ ಯಜಮಾನನಿಂದಲೂ, ಅವನ ಪತ್ನಿಯಿಂದಲೂ, ಅಂತೂ ಈ ಹದಿನೆಂಟು ಮಂದಿಯಿಂದಲೂ ಕೂಡಿ ನೆರವೇರಿದ ಯಜ್ಞರೂಪದ ಹಡಗುಗಳು ಅದೃಢವಾದವುಗಳು. ಯಜ್ಞಗಳ ರೂಪದ ಕರ್ಮವು

---

(2) "There is no important form of Hindu Thought, heterodox Buddhism included, which is not rooted in Upanishads."—*The Religion of Veda* by Bloomfield.

(3) "Buddha's whole training was Brahminism ; he probably deemed himself to be the most correct exponent of the spirit as distinct from the letter of the ancient faith"—Dr. Rhys Davids.

(4) "Early Buddhism, we venture to hazard a conjecture, is only a restatement of the thought of the Upanishads from a new stand point."

*Indian Philosophy* by Sir Radhakrishnan.

(5) "But Buddhism also and all other creeds can never be fully understood by one who knows nothing of the Veda, for in some way or the other, All Indian religions are linked to the thoughts contained in the Upanishads, the latest productions of Vedic literature ....................."

—*some Problems of Indian Literature.*

by Dr. Winternitz, M.A., Ph. D.

ಶ್ರೇಷ್ಠವಲ್ಲ. ಯಜ್ಞಗಳು ಶ್ರೇಯಸ್ಸಾಧಕಗಳೆಂದು ನಂಬಿರುವ ಮೂಢರು ಜರಾಮೃತ್ಯುಗಳ ಬಾಧೆಯಿಂದ ಕೂಡಿದ ಪುನರ್ಜನ್ಮಗಳಿಗೆ ಗುರಿಯಾಗುತ್ತಾರೆ"* ಎಂದು ಹೇಳಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಅಶ್ವಮೇಧ ಯಜ್ಞಕ್ಕೆ ಅಂತರಾರ್ಥವನ್ನು ಕಲ್ಪಿಸಿ, ಕುದುರೆಯನ್ನು ಯಜ್ಞ ಮಾಡುವುದೆಂದರೆ ಪ್ರಾಪಂಚಿಕ ಜೀವನದ ಪ್ರವೃತ್ತಿ ಮಾರ್ಗದ ಅಭಿಮಾನವನ್ನು ಪರಿತ್ಯಜಿಸಿ ಧ್ಯಾನಮಗ್ನತೆಯಿಂದ ಧನ್ಯರಾಗುವುದೆಂದು ಸೂಚಿತವಾಗಿದೆ. ಶೀಲ ಶುದ್ಧಿಯಿಲ್ಲದವನನ್ನು ವೇದಗಳಾಗಲಿ, ಯಜ್ಞಗಳಾಗಲಿ, ದಾನಗಳಾಗಲಿ ಉದ್ಧರಿಸಲಾರವೆಂದು ವಾಸಿಷ್ಠ ಧರ್ಮಸೂತ್ರಗಳಲ್ಲಿದೆ. ಈ ಅಂಶಗಳನ್ನು ಗಮನಿಸಿದಲ್ಲಿ, ಬುದ್ಧನನ್ನು ನಾಸ್ತಿಕನೆನ್ನುವುದು ಅಸಂಗತವೆನಿಸುವುದು. ಕೆಲವು ಉಪನಿಷತ್ತುಗಳಲ್ಲಿ ಯಜ್ಞಗಳಿಗೆ ಗೂಢಾರ್ಥವನ್ನು ಕಲ್ಪಿಸಿ, ಮಾನವನು ತನ್ನ ಸ್ವಭಾವವನ್ನು ತಾನು ತಿಳಿದುಕೊಂಡು ಸಾತ್ವಿಕ ಜೀವನ ಮಾಡುವುದೇ ಅತ್ಯಂತ ಶ್ರೇಷ್ಠವಾದ ಯಜ್ಞವೆಂದು ತತ್ತ್ವವೇತ್ತರಾದ ಜ್ಞಾನಿಗಳು ಅರ್ಥ ಮಾಡಿದ್ದರು. ಆದರೆ ಬುದ್ಧನು ಅವತರಿಸುವ ವೇಳೆಗೆ ಉಪನಿಷತ್ತುಗಳ ಬೋಧನೆಗಳನ್ನೇ ಜನರು ಅಲಕ್ಷ್ಯಮಾಡಿ, ಶೀಲ ಶುದ್ಧಿಯಿಲ್ಲದೆ ಹೇಯವಾದ ಕಾಮ್ಯಾರ್ಥಗಳಿಂದ ಕೂಡಿ ಯಜ್ಞಗಳನ್ನು ಮಾಡುತ್ತಿದ್ದರು. ಗೌತಮ ಬುದ್ಧನು ಅದಕ್ಕಾಗಿ ಮನನೊಂದು, ಹಿಂದೆ ಋಷಿಗಳು ಸೂಕ್ಷ್ಮವಾಗಿ ಬೋಧಿಸಿದ್ದ ಹಲವು ಅಂಶಗಳನ್ನೇ ತನ್ನದೇ ಆದ ವಿಶೇಷ ರೀತಿಯಲ್ಲಿ ಸವಿಸ್ತರವಾಗಿ ಬೋಧಿಸಿದನು; ಉಪನಿಷತ್ತುಗಳು ಬೋಧಿಸಿದ್ದ ಅನೇಕ ಅಮೂಲ್ಯ ತತ್ತ್ವಗಳನ್ನೇ ತನ್ನದೊಂದು ರೀತಿಯಲ್ಲಿ

---

* "ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ । ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ ಜರಾ ಮೃತ್ಯುಂ ತೇ ಪುನರೇವಾಪಿ ಯಾಂತಿ ॥"

—ಮುಂಡಕೋಪನಿಷತ್ತು. (ದ್ವಿತೀಯ ಖಂಡ ೭.)

ಪುಷ್ಟೀಕರಿಸಿ ಅವುಗಳ ಜೊತೆಗೆ ತನಗೆ ಸಾಧುವೆಂದು ತೋರಿದ ಕೆಲವು ಹೊಸ ತತ್ತ್ವಗಳನ್ನೂ ಸೇರಿಸಿ ಉಪದೇಶಿಸಿದನು. "ಉಪನಿಷತ್ತುಗಳಿಗೆ ತೀರ ವಿರುದ್ಧವಾದುದನ್ನೇ ಬೋಧಿಸಿ ಬುದ್ಧನು ಉಪನಿಷತ್ತುಗಳ ವಿಧ್ವಂಸಕನಾಗಿದ್ದನೆಂದು ಭಾವಿಸುವುದು ತೀರ ಅನ್ಯಾಯುವಾದ ದೋಷಾರೋಪಣೆಯೇ ಸರಿ" * ಎಂದು ಎಡ್ಮಂಡ್ ಹೋಮ್ಸ್‌ರವರು ಅಭಿಪ್ರಾಯುಪಟ್ಟಿದ್ದಾರೆ. "ಉಪನಿಷತ್ತುಗಳ ಸಾರತತ್ತ್ವಗಳೆಲ್ಲ ಜನಸಾಮಾನ್ಯಕ್ಕೆ ತಿಳಿದು ಜನಜೀವನವು ಅವುಗಳಿಂದ ಬೆಳಗುವಂತೆ ಮಾಡಬೇಕೆಂಬುದೇ ಬುದ್ಧನು ವಹಿಸಿದ್ದ ದೀಕ್ಷೆ" † ಎಂದು ಸರ್ ಎಸ್. ರಾಧಾಕೃಷ್ಣನ್‌ರವರು ಹೇಳಿದ್ದಾರೆ. ಕೆಲವು ವಿಚಾರಗಳಲ್ಲಿ ಬುದ್ಧನು ವೇದಾಂತಮತ ವಿರುದ್ಧವಾಗಿ ಹೇಳಿರುವನಾದರೂ ಒಟ್ಟಿನಲ್ಲಿ ಆತನ ಬೋಧೆಯುಲ್ಲಿ ಸನಾತನ ಧರ್ಮ ವಿರುದ್ಧವಲ್ಲದ ಅಂಶಗಳೇ ಬಹಳವಾಗಿ ಸೇರಿವೆ. ಬೌದ್ಧಮತದ ವಿಚಾರವು ಹಾಗಿರಲಿ, ಷಡ್ದರ್ಶನಗಳಲ್ಲಿಯೇ ಪರಸ್ಪರವಾಗಿ ವಿಶೇಷ ವ್ಯತ್ಯಾಸಗಳಿವೆ.

ಇನ್ನು ಗೌತಮಬುದ್ಧನು ನಿರೀಶ್ವರವಾದಿಯೇ ಎಂಬ ವಿಚಾರ. ಆತನು ಭಗವಂತನಿಲ್ಲವೆಂದೂ ಜೀವಾತ್ಮನಿಲ್ಲವೆಂದೂ ವಾದಿಸಿದ ನಾಸ್ತಿಕನೆಂಬುದೇ ಇಂದಿಗೂ ಹಲವರ ಅಭಿಪ್ರಾಯ. ನಾವು ಹಿಂದೆಯೇ ಅರಿಕೆ ಮಾಡಿರುವಂತೆ, ಬುದ್ಧನ ಮೌನಕ್ಕೆ ಅಪಾರ್ಥ ಕಲ್ಪನೆಯಾಗಿರುವುದೇ ಈ ಹಗರಣಕ್ಕೆ ಕಾರಣವೆನ್ನಬಹುದು.

---

* To imagine him trampling upon the Upanishadic Teachings is to libel him unspeakably."

—Edmond Holmes.

† "It was Buddha's mission to accept the idealism of the Upanishads at its best and make it available for the daily needs of mankind."

—Sir S. Radhakrishnan.

ಚಾರ್ವಾಕರೇ ಮುಂತಾದ ನಾಸ್ತಿಕರಂತೆ, ಲೋಕಾಂತರಗಳುಂಟೆಂಬ ಭಾವನೆಯು ಅವಿವೇಕವೆಂದೂ, ಸತ್ತಮೇಲೆ ಭಸ್ಮೀಕೃತವಾದ ದೇಹವು ಮತ್ತೆ ದೊರೆಯದಾದಕಾರಣ ಸಾಲವನ್ನಾದರೂ ಮಾಡಿ ಭೋಗಪಡಬೇಕೆಂದೂ ಬುದ್ಧನು ಬೋಧಿಸಲಿಲ್ಲ.‡ ಲೋಕಾಂತರ ಗಳುಂಟೆಂದೂ ಕರ್ಮಕ್ಕೆ ತಕ್ಕ ಫಲವು ತಪ್ಪದೆ ಲಭಿಸುವುದೆಂದೂ ಬುದ್ಧನು ಬೋಧಿಸಿದನು. ಭಗವಂತನುಂಟೆಂಬ ವಿಚಾರವನ್ನೇ ಒಪ್ಪದ ಪೂರ್ವಮೀಮಾಂಸಾ ದರ್ಶನವನ್ನೂ ಸಾಂಖ್ಯದರ್ಶನವನ್ನೂ ನಾಸ್ತಿಕ ಸಿದ್ಧಾಂತಗಳೆಂದೂ, ಯಜ್ಞಾದಿ ಕರ್ಮಗಳನ್ನು ಹಳಿದಿರುವ ಉಪನಿಷತ್ತುಗಳನ್ನು ನಾಸ್ತಿಕತೆಯ ನೆಲೆಯೆಂದೂ ಕರೆಯುವುದಾದರೆ ಅವಶ್ಯವಾಗಿ ಬುದ್ಧನನ್ನೂ ನಾಸ್ತಿಕನೆನ್ನಬಹುದು. ದೇವಲೋಕ, ಬ್ರಹ್ಮಲೋಕ ಮುಂತಾದವುಗಳುಂಟೆಂದು ಬುದ್ಧನು ಒಪ್ಪಿದ್ದಾನೆ. ಬುದ್ಧನು ಭೂಲೋಕದಲ್ಲಿ ಸಿದ್ಧಾರ್ಥನೆಂಬ ಹೆಸರಿನಿಂದ ಹುಟ್ಟುವು ದಕ್ಕೆ ಮುಂಚೆ ತುಷಿತವೆಂಬ ಸ್ವರ್ಗದಲ್ಲಿದ್ದನಂತೆ. ಮುಂದಿನ ಬುದ್ಧ ನಾದ ಮೈತ್ರೇಯನು ಈಗ ಅಲ್ಲಿರುವನಂತೆ. ಪಾಪಿಯೊಬ್ಬನು ಯಮನ ಮುಂದೆ ನಿಂತ ಸನ್ನಿವೇಶವನ್ನೂ ಬುದ್ಧನು ವಿವರಿಸಿದ್ದಾನೆ.† ಸ್ಕಂಧಗಳ ವ್ಯಾಪಾರ ಸಂತಾನಗಳನ್ನು ನೋಡಿ "ನಾನು" ಎಂಬ ವಸ್ತುವೊಂದು ಅವುಗಳನ್ನು ನಡೆಯಿಸುತ್ತಿರುವ ತೋರಿಕೆಯುಂಟಾ ಗಿದೆಯೆಂಬ ಅಂಶವು ಅನಾತ್ಮವಾದದಲ್ಲಿ ಪ್ರತಿಪಾದಿತವಾಗಿದೆಯಷ್ಟೆ. ಆ ಬಗೆಯ ತೋರಿಕೆಯನ್ನು ಅರಿತುಕೊಳ್ಳಬೇಕೆಂದು ಹೇಳಿರುವುದ ರಲ್ಲಿಯೇ (ನಾವು ಹಿಂದೆ ತಿಳಿಸಿರುವಂತೆ) ಅದನ್ನು ಅರಿತುಕೊಳ್ಳುವ

---

‡ ಚಾರ್ವಾಕರೆಂಬ ಹೆಸರನ್ನು ಕೇಳಿದೊಡನೆಯೇ ತಾತ್ಸಾರಗೆಡವದೆ ವಿಚಾರಮಾಡಿ ನೋಡಿದರೆ, ಚಾರ್ವಾಕ ಮತದಲ್ಲಿಯೂ ಗಮನಾರ್ಹವಾದ ಅಂಶಗಳಿದ್ದುವೆಂಬ ವಿಷಯವು ವ್ಯಕ್ತವಾಗುತ್ತದೆ. ಇಲ್ಲದಹೋಗಿದ್ದ ಪಕ್ಷಕ್ಕೆ ಅವೆಂದಿಗೂ ಚಾರ್ವಾಕ ದರ್ಶನವೆನ್ನಿಸಿಕೊಳ್ಳುತ್ತಿರಲಿಲ್ಲ; ಆಮ ಜನದಲ್ಲಿ ಹರಡು ತ್ತಿರಲಿಲ್ಲ.

† ದೇವದತ್ತ ಸುತ್ತವನ್ನು ನೋಡಿ.

ಶಾಶ್ವತ ವಸ್ತುವೊಂದಿದೆಯೆಂದು ಸೂಚಿಸಿದಂತಾಗುವುದು;* ಅಲ್ಲದೆ ಅಂತಹ ಶಾಶ್ವತ ವಸ್ತುವಾದ ಜೀವಾತ್ಮನಿಲ್ಲದೆ ಹೋದರೆ ನಿರ್ವಾಣ ಸಿದ್ಧಿಗೆ ಅವಕಾಶವಿಲ್ಲದೆ ನಿರ್ವಾಣವು ಶೂನ್ಯತೆಯಾಗಬೇಕಾಗುವುದು; ಆದಕಾರಣ, ಬುದ್ಧನು ಜೀವಾತ್ಮನುಂಟೆಂಬ ಅಭಿಪ್ರಾಯವನ್ನು ಪರೋಕ್ಷವಾಗಿ ಸೂಚಿಸಿದಂತಾಯಿತು. ಬುದ್ಧನು ಜೀವಾತ್ಮನಿಲ್ಲವೆಂದು ಕಂಠೋಕ್ತವಾಗಿ ಹೇಳಿಲ್ಲದಿದ್ದರೂ ನಾಗಸೇನನು ಮಾತ್ರ ಜೀವಾತ್ಮನಿಲ್ಲವೆಂಬುದೇ ಬುದ್ಧನ ಅಭಿಪ್ರಾಯವೆಂದು (ನಾವು ಹಿಂದೆಯೇ ಸೂಚಿಸಿರುವಂತೆ ರಥದ ಸಾಮ್ಯದೊಡನೆ) ಬೋಧಿಸಿದ್ದಾನೆ.† ಮಾನವನು ತನ್ನ ಶೀಲ ಸಮಾಧಿಗಳ ಸಹಾಯದಿಂದ ನಿರ್ವಾಣವನ್ನು ಸಾಧಿಸಿಕೊಳ್ಳಬೇಕೇ ಹೊರತು ಯಾರೊಬ್ಬರ

---

* ಶ್ರೀಯುತ ಎಂ. ಹಿರಿಯಣ್ಣನವರ ಅಭಿಪ್ರಾಯವನ್ನೂ ಇದಕ್ಕೊಂದು ಪ್ರಮಾಣವಾಗಿ ಉದಾಹರಿಸಬಹುದಾಗಿದೆ. ಅವರು "We may, however, observe in passing that in so stating his view the Buddhist has tacitly admitted a self transcending the experience of the moment. In the every act of analysing the self and dismissing it as but a series of momentary states, he is passing beyond these states and positing an enduring self which is able to view them together, for a series as such can never become aware of itself" ಎಂದು ಸೂಚಿಸಿದ್ದಾರೆ.

† "While Buddha contents himself with a statement about the constituents of the emperical self without explicitly rejecting the existence of a permanent self, Nagasena dismisses the permanent self as an illegitimate abstruction and reduces the self of man to a unified complex exhibiting an unbroken historical continuty."—*The Heart of Hindustan* by Sir S. Radhakrishnan.

ಅನುಗ್ರಹದಿಂದಲೂ ಅಲ್ಲವೆಂಬ ಅಭಿಪ್ರಾಯವು ಬುದ್ಧನಿಗಿದ್ದಿತೆಂದೂ, ಅದರ ಪರಿಣಾಮವಾಗಿ ಅವನು ಭಗವಂತನ ವಿಚಾರವನ್ನೇ ಸೂಚಿಸ ಲಿಲ್ಲವೆಂದೂ ಹೇಳಿದರೆ ಬಹುಶಃ ತಪ್ಪಾಗಲಾರದು. ಏನೇ ಆಗಲಿ ಬುದ್ಧನ ಮೌನವು ಅಧಿಕಾರಿ ಭೇದವನ್ನರಿತ್ತಿದ್ದ ಸಾಧಕನ ಮೌನವೇ ಹೊರತು ನಿರೀಶ್ವರವಾದಿಯಾದ ನಾಸ್ತಿಕನ ಮೌನವಲ್ಲ. ಅಂದಿನ ಸಮಾಜಕ್ಕೆ ಸಂಭವಿಸಿದ್ದ ರೋಗಕ್ಕೆ ತಾನೊಬ್ಬ ಚಿಕಿತ್ಸಕನೆಂದು ಭಾವಿಸಿ ಬುದ್ಧನು ಆಗಿನ ಪರಿಸ್ಥಿತಿಯಲ್ಲಿ ರೋಗಪರಿಹಾರಕ್ಕೆ ಅವಶ್ಯ ವೆಂದು ತನಗೆ ತೋರಿದಷ್ಟನ್ನು ಮಾತ್ರವೇ ನೆರವೇರಿಸಿದನು.

ಹೀಗಿದ್ದೂ, ಬುದ್ಧನನ್ನು ನಾಸ್ತಿಕನೆಂದು ಅನ್ಯಾಯವಾಗಿ ದೂರುವ ವಿಚಿತ್ರವಾದ ಶ್ಲೋಕವೊಂದು ವಾಲ್ಮೀಕಿ ರಾಮಾಯಣ ದಲ್ಲಿದೆ; ಬುದ್ಧನು ಕಳ್ಳನಂತಹವನೆಂದೂ, ಆತನು ನಾಸ್ತಿಕನೆಂದೂ, ಆತನ ವಿಚಾರವಾಗಿ ಜನಗಳು ಎಚ್ಚರಿಕೆಯಿಂದಿರಬೇಕೆಂದೂ, ಪಂಡಿ ತನು ನಾಸ್ತಿಕನ ಕಡೆಗೆ ಮುಖವನ್ನು ತಿರುಗಿಸಕೂಡದೆಂದೂ ಅದರ ತಾತ್ಪರ್ಯ.* ಗೌತಮಬುದ್ಧನ ಕಾಲದಿಂದೀಚೆಗೆ ಪ್ರಚುರವಾಗಿ ಅವನಿಗೆ ಅನ್ವಯಿಸುವ "ತಥಾಗತ" ಎಂಬ ಹೆಸರು ಆ ಶ್ಲೋಕ ದಲ್ಲಿರುವುದರಿಂದ, ಆ ಶ್ಲೋಕವು ದುರಭಿಮಾನಿಗಳಾದ ಯಾರಿಂದಲೋ ಬುದ್ಧನ ಕಾಲಾನಂತರ ರಚಿತವಾಗಿ ಪ್ರಕ್ಷಿಪ್ತವಾದುದೇ ಹೊರತು ಮಹಾತ್ಮರಾದ ವಾಲ್ಮೀಕಿ ಮಹರ್ಷಿಗಳಿಂದಿಗೂ ಅದನ್ನು ಬರೆದಿರ ಲಾರರೆಂದು ತೋರುತ್ತದೆ.

ನಮ್ಮವರಾಗಲಿ, ಹೊರಗಿನವರಾಗಲಿ, ಯಾರು ಎಷ್ಟು ಹಳಿವರೂ ಬುದ್ಧನು ನಾಸ್ತಿಕನಲ್ಲ. ಭಗವಂತನ ವಿಚಾರವನ್ನು ಪ್ರಸ್ತಾವಿಸಿ ವಿಧವಿಧವಾಗಿ ವರ್ಣಿಸದೆ ಮೌನದಿಂದಿದ್ದ ಮಾತ್ರಕ್ಕೇ ಆತನನ್ನು ನಾಸ್ತಿಕನೆನ್ನುವುದು ಸರ್ವಥಾ ಸರಿಯಲ್ಲ.

---

‡ ಯಥಾ ಹಿ ಚೋರಸ್ಸತಥಾ ಹಿ ಬುದ್ಧಸ್ತಥಾಗತಂ ನಾಸ್ತಿಕಮತ್ರ ವಿದ್ಧಿ । ತಸ್ಮಾದ್ಧಿ ಯಶ್ಶಂಕ್ಯತಮಃ ಪ್ರಜಾನಾಂ ನ ನಾಸ್ತಿಕೇನಾಭಿಮುಖೋ ಬುಧಸ್ಸ್ಯಾತ್ ॥" —ವಾಲ್ಮೀಕಿ ರಾಮಾಯಣ, ಅಯೋಧ್ಯಾಕಾಂಡ.

# ಹದಿನಾಲ್ಕನೆಯ ಅಧ್ಯಾಯ

## ಪರಿಸಮಾಪ್ತಿ

**ಲೋಕ ಕುಶಲದೃಷ್ಟಿ**

ಗೌತಮ ಬುದ್ಧನು ಬೋಧಿಸಿದ ಸಿದ್ಧಾಂತವನ್ನು ಮೆಚ್ಚುವವರಂತೆಯೇ ಅದನ್ನು ಮೆಚ್ಚದಿರುವವರು ಕೂಡ ಆತನು ಲೋಕಕುಶಲದೃಷ್ಟಿಯಿಂದ ನೂತನ ಮತವನ್ನು ಸ್ಥಾಪಿಸಿ ತ್ರಿಕರಣಶುದ್ಧಿಯಾಗಿ ಚಿರಕಾಲ ಶ್ರಮಿಸಿದನೆಂಬುದನ್ನೇನೊ ಅವಶ್ಯವಾಗಿ ಒಪ್ಪಲೇಬೇಕು. ಬೌದ್ಧಮತದ ತತ್ತ್ವಗಳನ್ನೊಪ್ಪದೆ ಬಗೆಬಗೆಯ ಪೂರ್ವಪಕ್ಷಗಳನ್ನು ಹೂಡುವವರು ಕೂಡ, ಆತನು ಅದ್ಭುತ ರೀತಿಯಲ್ಲಿ ಸ್ವಾರ್ಥತ್ಯಾಗವನ್ನು ಪ್ರದರ್ಶಿಸಿ, ತಾನು ಬೋಧಿಸಿದ ನಿಯಮಗಳನ್ನು ತಾನೇ ಅನುಷ್ಠಾನದಲ್ಲಿಟ್ಟುಕೊಂಡು ಆದರ್ಶತೆಯಿಂದ ವರ್ತಿಸಿ, ದೇಹಪಾತವಾಗುವವರೆಗೂ ಪರಹಿತಕ್ಕಾಗಿ ದುಡಿದವನೆಂಬುದನ್ನು ಮನಗಂಡು ಅದನ್ನಾದರೂ ಮೆಚ್ಚಿ ತಲೆದೂಗದಿರರು. ಯೆಹೋದಿಯರಿಗಾಗಿ ಮೋಸಸ಼ನು ಮತಬೋಧೆ ಮಾಡಿದನು; ಚೀಣಾದೇಶದವರಿಗಾಗಿ ಕಾಂಫ಼್ಯೂಷಸನು ಮತಬೋಧೆ ಮಾಡಿದನು; ಪಾರಸೀಕರಿಗಾಗಿ ಸ಼ರತುಷ್ಟ್ರನು ಮತಬೋಧೆ ಮಾಡಿದನು. ಆದರೆ ಬುದ್ಧನು ಮಾತ್ರ ತನ್ನ ನಾಡೆಂಬ ಅಥವಾ ಪರರ ನಾಡೆಂಬ ಭೇದವಿಲ್ಲದೆ—ಜಾತಿ ಕುಲಗಳ ಭೇದವಿಲ್ಲದೆ—ಧನಿಕರು ದರಿದ್ರರೆಂಬ ಭೇದವಿಲ್ಲದೆ—ಜಗತ್ತಿನ ಸಮಸ್ತ ಜನರಿಗೂ ಅನ್ವಯಿಸುವಂತೆ ಧರ್ಮಚಕ್ರವನ್ನು ಸ್ಥಾಪಿಸಿದನು.

ಜಗತ್ತಿನಲ್ಲಿರುವ ನಾನಾ ಮತಗಳ ಸಿದ್ಧಾಂತಗಳನ್ನೂ ನಿಷ್ಪಕ್ಷಪಾತ ದೃಷ್ಟಿಯಿಂದ ಪರಾಮರ್ಶಿಸಿ ನೋಡಿದರೆ, ದೋಷರಹಿತವಾದ

ಶ್ರದ್ಧಾ ಗತ - ಸ್ವಯಂ ಮಾರ್ಗವು



ದೋಷ ರಹಿತವಾದ ಮತವಾವುದೂ ಇಲ್ಲ

ಮತವಾವುದೂ ಇಲ್ಲವೆಂಬುದು ತಪ್ಪದೆ ಗೋಚರಿಸುತ್ತದೆ. ಪ್ರತಿಯೊಂದು ಮತದಲ್ಲಿಯೂ ಗುಣಗಳೊಡನೆ ದೋಷಗಳೂ ಇದ್ದೇ ಇವೆ. ಆದಾಗ್ಯೂ, ಎಲ್ಲ ಮತಗಳಲ್ಲಿಯೂ ಅಮೋಘ ತತ್ತ್ವಗಳೂ ಇವೆ. ಯಾವ ಮತ ತತ್ತ್ವಗಳನ್ನನುಸರಿಸಿ ಅನುಷ್ಠಾನಕ್ಕೆ ತಂದುಕೊಂಡರೂ ಜೀವನವು ಸಾರ್ಥಕವಾಗುವ ಮಾರ್ಗವು ತಪ್ಪದೆ ಗೋಚರಿಸುತ್ತದೆ.

ಸರ್ವಜ್ಞತೆಯು ಸಿಂಹಾಸನ

ಜಗತ್ತಿನ ಮತ್ತು ಜೀವನದ ಸ್ವಭಾವವೇನೆಂಬ ರಹಸ್ಯದ ಕೆಲಕೆಲವು ಭಾಗಗಳಂತಿರುವ ಕೆಲಕೆಲವು ತತ್ತ್ವಗಳ ಕಡೆಗೆ ಕೆಲಕೆಲವು ದರ್ಶನಕಾರರೂ, ಮತಸ್ಥಾಪಕರೂ ತಮ್ಮ ತಮ್ಮ ಸಾಧನಾ ಸಾಕ್ಷಾತ್ಕಾರಗಳಿಗನುಸಾರವಾಗಿ ತಮ್ಮ ತಮ್ಮ ಪ್ರತಿಭೆಯ ಬೆಳಕನ್ನು ಬೀರಿದ್ದಾರೆ. ಆ ಬೆಳಕಿನಲ್ಲಿ ಅವರಿಗೆ ಕಂಡಿರುವಷ್ಟು ತತ್ತ್ವಗಳು ಅವರ ಅನುಯಾಯಿಗಳಿಗೆ ಗೋಚರಿಸಿಲ್ಲ. ಪ್ರತಿಯೊಂದು ಮತದವರೂ ತಾವು ಅನುಸರಿಸುವ ಮತವನ್ನು ಸ್ಥಾಪಿಸಿದ ತಮ್ಮ ಗುರುವೇ ಸರ್ವಜ್ಞನೆಂದು ಭಾವಿಸುತ್ತ ಬಂದಿದ್ದಾರೆ; ತಮ್ಮ ಗುರುವೇ ಕನಸಿನಲ್ಲಿಯೂ ತನ್ನಲ್ಲಿ ಆರೋಪಿಸಿಕೊಳ್ಳದಿದ್ದ ಸರ್ವಜ್ಞತೆಯನ್ನು ಆತನ ಜನ್ಮಸಿದ್ಧವಾದ ಹಕ್ಕೆಂದು ಉದ್ಘೋಷಿಸಿ ಅವರೇ ಅದರ ಸ್ವಾಮ್ಯದ ಶಾಸನವನ್ನು ಬರೆದು ಆವನಿಗೆ ದಾನ ಮಾಡಿದ್ದಾರೆ. ತಮ್ಮ ಗುರುವು ಅವತರಿಸಿದ ಕಾಲದಲ್ಲಿ ಜಗತ್ತು ಮಡೆಯುರಿಂದ ತುಂಬಿ ಧರ್ಮವು ನಿರ್ನಾಮವಾಗಿದ್ದಿತೆಂದೂ, ಆತನು ಧರ್ಮವನ್ನುದ್ಧರಿಸಿದನೆಂದೂ ಅವರು ವಾದಿಸುತ್ತ ಬಂದಿರುವುದಂತೂ, ಸಮಸ್ತರಿಗೂ ತಿಳಿದ ವಿಷಯವೇ. ತಮ್ಮ ಗುರುವು ಬೋಧಿಸಿದ ಗಹನ ತತ್ತ್ವಗಳನ್ನು ಮನದಟ್ಟು ಮಾಡಿಕೊಳ್ಳುವಷ್ಟುಮಟ್ಟಿನ ಶಕ್ತಿಯನ್ನಾದರೂ ಪಡೆದಿದ್ದ ಮೇಧಾವಿಗಳು ಬಹುಮಂದಿಗಳಿದ್ದ ಬಗೆ ಹೇಗೆಂಬ ವಿಚಾರವನ್ನು ಅವರು ಗಮನಿಸದಿದ್ದುದು ಆಶ್ಚರ್ಯ

ಕರವಾಗಿದೆ. ತತ್ತ್ವಜಿಜ್ಞಾಸೆಯು ಅತಿಪ್ರಾಚೀನ ಕಾಲದಿಂದಲೂ ಸಂತತವಾಗಿ ಮುಂದುವರಿಯುತ್ತ ಬಂದಿದೆ. ಹೊಸಹೊಸ ಸಿದ್ಧಾಂತಗಳೂ, ಹೊಸ ಹೊಸ ಮತಗಳೂ ಹುಟ್ಟಿದುದು ನಿಜವಾದರೂ ಹಳೆಯವುಗಳ ಆಧಾರವೇ ಇಲ್ಲದೆ ಆಕಾಶದಿಂದ ಆಕಸ್ಮಿಕವಾಗಿ ಅವುಗಳಲ್ಲಾವುದೂ ಭೂಮಿಗಿಳಿದು ಬಂದುದಲ್ಲ. ನಾನಾ ಮತಸ್ಥಾಪಕರೂ ತಮ್ಮ ಮತಸ್ಥಾಪನೆಗೆ ಪೂರ್ವದಲ್ಲಿದ್ದ ಮತ ತತ್ತ್ವಗಳಲ್ಲಿ ಕೆಲವನ್ನಾದರೂ ಸಾಧುವೆಂದು ಅಂಗೀಕರಿಸಿಯೇ ಇದ್ದಾರೆ. ತಮ್ಮ ತಮ್ಮ ಸಾಧನಾ ಸಾಕ್ಷಾತ್ಕಾರಗಳ ಪ್ರಭಾವದಿಂದಲೂ, ತಮ್ಮ ತಮ್ಮ ಪ್ರತಿಭಾ ಸಾಮರ್ಥ್ಯಗಳ ಪ್ರಭಾವದಿಂದಲೂ ತಮಗೆ ಗೋಚರಿಸಿದ ನೂತನ ತತ್ತ್ವಗಳನ್ನೂ ತಾವು ಅಂಗೀಕರಿಸಿದ ಆ ತತ್ತ್ವಗಳ ಜೊತೆಗೆ ಸಮ್ಮಿಳಿತವಾಗಿ ಸೇರಿಸಿ ತಮ್ಮ ವೈಶಿಷ್ಟ್ಯದ ಮುದ್ರೆಯನ್ನೊತ್ತಿ ಅವರು ತಮ್ಮ ತಮ್ಮ ಮತಸಿದ್ಧಾಂತಗಳನ್ನೇರ್ಪಡಿಸಿದ್ದಾರೆ. ಆದ ಕಾರಣ, ಜಗತ್ತಿನ ನಾನಾ ಮತಸ್ಥಾಪಕರೂ ಅವರವರ ಶಕ್ತಿ ಸಾಮರ್ಥ್ಯಗಳಿಗೆ ತಕ್ಕಂತೆ ಶ್ಲಾಘನೆಗೆ ಅರ್ಹರೆನ್ನಲು ಅಭ್ಯಂತರವಿಲ್ಲವಾದರೂ, ಸರ್ವಜ್ಞತೆಯ ಪಟ್ಟವು ಅವರಲ್ಲಾರಿಗೂ ಸಲ್ಲುವಂತಿಲ್ಲ. ಪ್ರತಿಯೊಂದು ಮತದಲ್ಲಿಯೂ ಗುಣಗಳಂತೆಯೇ ದೋಷಗಳೂ ಇರುವ ಕಾರಣ, ಸರ್ವಜ್ಞತೆಯ ಸಿಂಹಾಸನವನ್ನೇರಲು ಮತಸ್ಥಾಪಕರಾದ ಮಾನವರಾರಿಗೂ ಅಧಿಕಾರವಿಲ್ಲ. ಶೂನ್ಯವಾಗಿರುವುದೇ ಸರ್ವಜ್ಞತೆಯ ಸಿಂಹಾಸನದ ವೈಶಿಷ್ಟ್ಯ ; ಶೂನ್ಯವಾಗಿರುವುದೇ ಅದರ ಸೊಗಸು.

ಇಂದಿನ ಪ್ರಪಂಚಕ್ಕೂ ಬುದ್ಧನ ಮೇಲ್ಪಂಕ್ತಿ

ಈಗ್ಗೆ ಸುಮಾರು ಎರಡು ಸಾವಿರದ ಐನೂರು ವರ್ಷಗಳ ಹಿಂದೆ ಜೀವಿಸಿದ್ದವನಾದರೂ, ಅನೇಕ ವಿಚಾರಗಳಲ್ಲಿ ಗೌತಮ ಬುದ್ಧನು ಇಂದಿನ ಪ್ರಪಂಚಕ್ಕೂ ಮಾದರಿಯಾಗಿದ್ದಾನೆ. ಸಮಾಜದ ಯಾವ ಕ್ಷೇತ್ರದಲ್ಲಿ ಕೆಲಸ ಮಾಡುವ ನಾಯಕರಾದರೂ, ಅವನ ವರ್ತನೆಯನ್ನು ಅನುಕರಿಸಿ ಜನರ ಮನ

ವನ್ನು ಒಲಿಸಿಕೊಂಡು ಜನಪ್ರಿಯರಾಗಬಹುದಾಗಿದೆ. ಇದಕ್ಕೆ ಹಲವಾರು ನಿದರ್ಶನಗಳಿದ್ದರೂ ಸ್ಥಳಸಂಕೋಚದಿಂದ ಒಂದೆರಡು ನಿದರ್ಶನಗಳನ್ನು ಮಾತ್ರ ಇಲ್ಲಿ ಸೂಚಿಸಿ ಸುಮ್ಮನಾಗಬೇಕಾಗಿದೆ. ಎದುರು ಪಕ್ಷದವರ ಟೀಕೆಗಳಿಗೆ ಕಿವಿಗೊಟ್ಟು ಸಮಾಧಾನದಿಂದ ವರ್ತಿಸುವುದು ಬಹಳ ಕಷ್ಟ. ಇಂದಿಗೂ ಅನೇಕರಲ್ಲಿ ಆ ದೊಡ್ಡ ಗುಣವಿರುವುದಿಲ್ಲ. ಒಮ್ಮೆ ಬುದ್ಧನು ಸಭಾಪ್ರವೇಶ ಮಾಡಿದಾಗ ತನ್ನ ಶಿಷ್ಯರು ಒಬ್ಬ ಬ್ರಾಹ್ಮಣನ ಟೀಕೆಗಳಿಂದ ಅಸಮಾಧಾನಪಟ್ಟು ರೇಗಿ ಅವನನ್ನು ನಿಂದಿಸುತ್ತಿದ್ದುದನ್ನು ಕಂಡನಂತೆ. ಆ ಬ್ರಾಹ್ಮಣನು ಟೀಕಿಸುತ್ತಿದ್ದುದು ಬುದ್ಧನ ಸಿದ್ಧಾಂತವನ್ನು ಮತ್ತು ಬುದ್ಧನು ಸ್ಥಾಪಿಸಿದ್ದ ಭಿಕ್ಷು ವ್ಯವಸ್ಥೆಯನ್ನು ಕುರಿತು. (ಬುದ್ಧನು ಚಿಕ್ಕ ವಯಸ್ಸಿನವರಿಗೆ ಭಿಕ್ಷುದೀಕ್ಷೆಯನ್ನು ಕೊಟ್ಟು ಅವರನ್ನು ಉದ್ಧರಿಸಲು ಪ್ರಯತ್ನಿಸಿದನು. ಅದರಿಂದ ಅನೇಕ ಕುಟುಂಬಗಳು ಒಡೆದುಹೋಗುವಂತೆಯೂ, ಅನೇಕರು ಅನಾಥರಾಗುವಂತೆಯೂ ಪರಿಣಾಮವುಂಟಾಯಿತು. ಅದಕ್ಕಾಗಿ ಹಲವರು ಮನನೊಂದರು. ಅಂತಹವರಲ್ಲಿ ಆ ಬ್ರಾಹ್ಮಣನೂ ಒಬ್ಬನಾಗಿರಬೇಕು.) ಆ ಸನ್ನಿವೇಶದಲ್ಲಿ ಗೌತಮ ಬುದ್ಧನು ಸ್ವಲ್ಪವೂ ತಾಳ್ಮೆಗೆಡಲಿಲ್ಲ. ಅವನು ತನ್ನ ಶಿಷ್ಯರನ್ನು ಕುರಿತು "ಸಹೋದರರೇ, ಇತರರು ನನ್ನ ವಿಚಾರವಾಗಿ, ನಾನು ಸ್ಥಾಪಿಸಿರುವ ಪಂಥದ ವಿಚಾರವಾಗಿ ಅಥವಾ ನಾನು ಏರ್ಪಡಿಸಿರುವ ಭಿಕ್ಷು ವ್ಯವಸ್ಥೆಯ ವಿಚಾರವಾಗಿ ಟೀಕೆ ಮಾಡಿದರೆ, ಅವರ ಮೇಲೆ ನೀವು ಕೋಪಿಸಿಕೊಳ್ಳುವುದಕ್ಕಾಗಲಿ, ನೀವು ಅತೃಪ್ತಿಹೊಂದುವುದಕ್ಕಾಗಲಿ, ನೀವು ಅಸಮಾಧಾನ ಹೊಂದುವುದಕ್ಕಾಗಲಿ ಕಾರಣವಿಲ್ಲ. ನೀವು ಹಾಗೆ ಮಾಡಿದರೆ ಧಾರ್ಮಿಕ ಗ್ಲಾನಿಗೆ ನೀವು ಗುರಿಯಾಗುತ್ತೀರಿ. ಅಷ್ಟೇ ಅಲ್ಲ. ಅವರ ಟೀಕೆಗಳು ನ್ಯಾಯವೇ ಅಥವಾ ನ್ಯಾಯವಲ್ಲವೇ—ಎಂಬುದನ್ನು ನಿಷ್ಪಕ್ಷಪಾತವಾಗಿ ತೂಗಿ ನೋಡಿ ನಿರ್ಣಯ ಮಾಡುವ ಸಾಮರ್ಥ್ಯವೂ ಆಗ್ಗೆ ನಿಮಗಿರುವುದಿಲ್ಲ" ಎಂದು ಹೇಳಿದನಂತೆ. ಇಂದು ಕೂಡ, ಸಮಾಜದಲ್ಲಿ ದೊಡ್ಡವರೆನಿಸಿಕೊಂಡ ಎಷ್ಟು ಜನರಲ್ಲಿ ಈ ಬಗೆಯ

ಮನೋಧರ್ಮವಿರುತ್ತದೆ? ಯಾರು ಎಷ್ಟು ಬಿರುಸಾಗಿ ಮಾತನಾಡಿ ಎಷ್ಟು ಆಕ್ಷೇಪಿಸಿದರೂ ಶಾಂತಭಾವದಿಂದಲೇ ಗೌತಮ ಬುದ್ಧನು ಉತ್ತರ ಕೊಡುತ್ತಿದ್ದನು. ಅಷ್ಟೇ ಅಲ್ಲ. ತನ್ನ ಶಿಷ್ಯರೇ ಇತರ ಧರ್ಮಗಳನ್ನು ಕುರಿತು ಅನ್ಯಾಯವಾಗಿ ಟೀಕೆ ಮಾಡಿದರೂ ಅವನು ಸುಮ್ಮನಿರುತ್ತಿರಲಿಲ್ಲ. ಆತನು "ಇತರ ಧರ್ಮಗಳನ್ನು ಕುರಿತು ಅನ್ಯಾಯವಾಗಿ ಟೀಕೆ ಮಾಡುವುದು, ಅಂತರಿಕ್ಷದ ಕಡೆಗೆ ಮುಖವನ್ನೆತ್ತಿ ಸೂರ್ಯನ ಕಡೆ ಉಗುಳಿದಂತೆ. ಆ ಉಗುಳು ಸೂರ್ಯನನ್ನು ಸೋಕುವುದಿಲ್ಲ. ಉಗುಳಿದವರ ಮುಖದ ಮೇಲೇ ಬಿದ್ದು ಅವರ ಮುಖವನ್ನೇ ಕೊಳಕು ಮಾಡುತ್ತದೆ" ಎಂದು ಹೇಳಿದ ಮಾತುಗಳು ಇಂದಿಗೂ – ಎಂದೆಂದಿಗೂ – ಪ್ರಪಂಚಕ್ಕೇ ಮಾದರಿಯಾಗಿರುತ್ತವೆ. ಬಲಾತ್ಕಾರದಿಂದ ತನ್ನ ಮತಕ್ಕೆ ಸೇರಿಸಿಕೊಳ್ಳುವ ಪ್ರಯತ್ನವಂತೂ ಗೌತಮ ಬುದ್ಧನಿಂದ ಎಂದೂ ನಡೆಯಲಿಲ್ಲ. ಅದೂ ಹಾಗಿರಲಿ. ಬೌದ್ಧ ಮತಕ್ಕೆ ಸೇರಿದ ಅನ್ಯಮತದವರು ತಾವು ಬಿಟ್ಟು ಬಂದ ಮತದವರಲ್ಲಿ ವಿರೋಧವನ್ನು ತೋರಿಸ ಕೂಡದೆಂಬುದು ಆತನ ಅಭಿಪ್ರಾಯ. ಸೀಹನೆಂಬ ಜೈನನು ಬೌದ್ಧ ಮತಕ್ಕೆ ಸೇರಿದನು. ಅದಕ್ಕೆ ಮುಂಚೆ ಅವನು ಹಲವು ಮಂದಿ ಜೈನರಿಗೆ ಅನ್ನದಾನ ಮಾಡುತ್ತಿದ್ದನು; ಅನೇಕ ಜೈನರಿಗೆ ಧನ ಸಹಾಯ ಮಾಡುತ್ತಿದ್ದನು. ಅವನು ಬೌದ್ಧನಾದ ಮೇಲೂ ಅವರಿಗೆ ಅದೇ ರೀತಿ ಸಹಾಯ ಮಾಡಬೇಕೆಂದು ಗೌತಮ ಬುದ್ಧನು ಅಪ್ಪಣೆ ಮಾಡಿದನು.†

ಜಗದ್ವಂದ್ಯರಾದ ಮಹಾನುಭಾವರುಗಳಲ್ಲಿ ಶ್ರೇಷ್ಠರೆನಿಸಿದವರ ಗುಂಪಿಗೆ ಗೌತಮ ಬುದ್ಧನೂ ಸೇರಿದ್ದಾನೆ. ಸಂಪ್ರದಾಯಕ್ಕಿಂತಲೂ

---

† ಸರ್ ಎಸ್. ರಾಧಾಕೃಷ್ಣನ್ ಅವರು ಬರೆದಿರುವ "*Gautama The Buddha*" ಎಂಬ ಗ್ರಂಥದ ೧೨ನೆಯ ಮತ್ತು ೧೩ನೆಯ ಪುಟಗಳನ್ನು ದಯೆಯಿಟ್ಟು ನೋಡಿ.

**ಮಹಾನುಭಾವ ಬುದ್ಧಗುರು**

ಸತ್ಯವು ಹೆಚ್ಚೆಂದು ಭಾವಿಸಬೇಕೆಂದೂ, ಪರಪ್ರತ್ಯಯ ಬುದ್ಧಿಯನ್ನು ಬಿಟ್ಟು ಸ್ವಾನುಭವದಿಂದ ತತ್ತ್ವಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂದೂ ಬೋಧಿಸಿದ ಪುಣ್ಯಾತ್ಮನು, ಗೌತಮ ಬುದ್ಧನು. ಶೀಲಶುದ್ಧಿಯನ್ನು ಸಂಪಾದಿಸಿಕೊಂಡವರೆಲ್ಲರೂ ನಿರ್ವಾಣಸುಖಕ್ಕೆ ಅಧಿಕಾರಿಗಳೆಂದು ಸಾರಿ, ಸ್ವಾತಂತ್ರ್ಯದ ಭೇರಿಯನ್ನು ಮೊಳಗಿಸಿ ಮನುಷ್ಯತ್ವದ ಶ್ರೇಷ್ಠತೆಯನ್ನು ಉಚ್ಚಸಿಂಹಾಸನಕ್ಕೇರಿಸಿದ ಮಹನೀಯನು, ಗೌತಮ ಬುದ್ಧನು. ಪ್ರಜ್ಞಾಲಾಭವು ಯಜ್ಞಾದಿಕರ್ಮಗಳಿಗಿಂತ ಮಿಗಿಲೆಂಬ ಸಿದ್ಧಾಂತವನ್ನೇ ಹೊಸದೊಂದು ರೀತಿಯಲ್ಲಿ ಬೋಧಿಸಿದ ಮೇಧಾವಿಯು, ಗೌತಮ ಬುದ್ಧನು. ಶುಷ್ಕಸಿದ್ಧಾಂತಗಳಗಿಳಿಯೋದಿಗಿಂತ ಸಚ್ಚಾರಿತ್ರ ಸಂಪಾದನೆಯು ಶ್ರೇಷ್ಠವೆಂದು ಬೋಧಿಸಿದ ಪಾರದರ್ಶಿಯು, ಗೌತಮ ಬುದ್ಧನು. ಸಚ್ಚಾರಿತ್ರದಿಂದ ಬ್ರಾಹ್ಮಣ್ಯವೇ ಹೊರತು ಕೇವಲ ಜನ್ಮದಿಂದಲ್ಲವೆಂಬ ಸಿದ್ಧಾಂತವನ್ನು ಪುನರುಜ್ಜೀವನಗೊಳಿಸಿ, ತಾನು ನಿರೂಪಿಸಿದಂತೆ ತನ್ನ ಶಿಷ್ಯರೆಲ್ಲರೂ ಧರ್ಮಾನುಷ್ಠಾನ ಮಾಡಬೇಕೆಂದು ಬೋಧಿಸಿ ಉದಾತ್ತ ಧ್ಯೇಯ ಸಾಧನೆಯ ಸೋಪಾನವನ್ನು ಕಲ್ಪಿಸಿದ ಧೀರನು, ಗೌತಮ ಬುದ್ಧನು. ಪ್ರಾಣಿಮಾತ್ರದಲ್ಲಿ ಪ್ರೀತಿಕರುಣೆಗಳನ್ನು ತೋರಿಸಿ ಮೈತ್ರಿಯಿಂದ ಮಜ್ಜನಮಾಡಿಸಬೇಕೆಂದು ತಿಳಿಸಿ ಅಹಿಂಸಾಧರ್ಮವನ್ನು ಬೋಧಿಸಿದ ಕರುಣಾರ್ದ್ರಹೃದಯನು, ಗೌತಮ ಬುದ್ಧನು. ಸ್ವಾರ್ಥಪರತೆಯ ಲವಲೇಶವೂ ಇಲ್ಲದ ತ್ಯಾಗರಾಜನಾಗಿಯೂ ನಿಷ್ಕಾಮ ಕರ್ಮಿಯಾದ ಕರುಣಾಳುವಾಗಿಯೂ ಕೆಲಸಮಾಡಿ, ಶೀಲಸಂಪತ್ತಿಯನ್ನು ಸಂಪಾದಿಸಿ, ವಿಶ್ವಪ್ರೇಮದ ದಿವ್ಯಪ್ರಭೆಯಿಂದ ಶೋಭಿಸುತ್ತಿದ್ದ ಮಹಾನುಭಾವನು, ಗೌತಮ ಬುದ್ಧನು. ಆತನನ್ನು ಸ್ಮರಿಸಿದ ದಿನವೇ ಸುದಿನವೆಂಬುದನ್ನು ಯಾರು ತಾನೆ ಒಪ್ಪುವುದಿಲ್ಲ?

—: ಸಂಪೂರ್ಣ :—

ಹಿಂದೂ ಶಾಸ್ತ್ರಕ್ಕೂ ಬೌದ್ಧ ಸಿದ್ಧಾಂತಕ್ಕೂ ಇರುವ ಮುಖ್ಯ ಭೇದಗಳು
ಕರ್ಮ ವಿಪಾಕ, ಸಾಕ್ಷ್ಯ. ಆತ್ಮ ಒಂದು ದೇಹವನ್ನು
ಬಿಟ್ಟು ಇನ್ನೊಂದು ದೇಹವನ್ನು ಪ್ರವೇಶಿಸುತ್ತದೆ ಎಂಬ
ವಾದವನ್ನು ಬೌದ್ಧಸಿದ್ಧಾಂತ ಒಪ್ಪುವುದಿಲ್ಲ. ಅದಕ್ಕೆ ಬದಲಾಗಿ
ಪಂಚಸ್ಕಂಧಗಳು ಒಂದು ದೇಹದಿಂದ ನಾಶವಾದಮೇಲೆ ಇನ್ನೊಂದು
ದೇಹವನ್ನು ಪ್ರವೇಶಿಸುತ್ತದೆ.

1. Practice makes a perfect man,
Reading maketh a full man,
Writing an exact man,
Conference a ready man
— Bacon.

2. Deeper, Deeper let us toil,
In the mines of knowledge
— Coleridge.

3. Let not the fruit of action be thy motive.

4. Buddhism is a religion of individual effort. — Christmas Humphrey
'Creed of Buddha'

